


ನೆಮ್ಮದಿಯ ನಾಳೆ ನಮ್ಮದು

# ಹೊಸತು

ಫೆಬ್ರವರಿ ೨೦೦೮
ಬೆಲೆ : ರೂ. ೧೨

## ಸರ್ಕಾರವು ಹಣ ವ್ಯರ್ಥ ಮಾಡುವುದು ಬೇಸರದ ಸಂಗತಿ

– ಡಾ|| ಯು. ಆರ್. ರಾವ್





# ಸೂರ್ಯಕಾಂತ ಗುಡಿಗಾರ

೨೦೦೭ರ ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಗೌರವ ಪ್ರಶಸ್ತಿ ಪಡೆದ ಶಿರಸಿಯ ಸೂರ್ಯಕಾಂತ ಗುಡಿಗಾರ ತೆರೆಮರೆಯಲ್ಲೇ ಸಾಧನೆ ಮಾಡಿಕೊಂಡಿರುವವರು. ಮೂಲತಃ ಅವರದು ಕಲಾಮನೆತನ. 'ಗುಡಿಗಾರ' ಕುಟುಂಬವು ಶಿರಸಿಯಲ್ಲಿ ನೂರಾರು ವರ್ಷಗಳಿಂದಲೂ ಶ್ರೀಗಂಧ ಕೆತ್ತನೆ, ಮರದ ಕುಸುರಿ ಕೆಲಸ, ಮಣ್ಣಿನ ಮೂರ್ತಿ ತಯಾರಿಕೆ, ಬಾಸಿಂಗ ತಯಾರಿಕೆ... ಹೀಗೆ ಕಲಾಸಂಬಂಧಿ ಕೆಲಸಗಳನ್ನು ಈ ಭಾಗದ ಜನರಿಗೆ ಮಾಡಿಕೊಡುತ್ತಾ ಕಲೆಯನ್ನು ಪಾರಂಪರಿಕ ವೃತ್ತಿಯಾಗಿ ಮಾಡಿಕೊಂಡು ಬಂದಿದೆ. ೨೦೦೩ರ ವರೆಗೂ ಸೂರ್ಯಕಾಂತ ಗುಡಿಗಾರರು ಸರ್ಕಾರಿ ಉದ್ಯೋಗಿ. ಶಿರಸಿಯ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ 'ಆರ್ಟ್ ಡಿಸೈನರ್' ಆಗಿ ಸೇವೆ ಸಲ್ಲಿಸಿ, ನಿವೃತ್ತರಾಗಿದ್ದಾರೆ.

ಶ್ರೀಗಂಧದ ಕೆತ್ತನೆ, ಮರದ ಕೆತ್ತನೆ, ಮಣ್ಣಿನ ಮೂರ್ತಿ ತಯಾರಿಕೆ ಹಾಗೂ ಕರಕುಶಲ ಕಲೆಗಳಲ್ಲಿ ಸೂರ್ಯಕಾಂತ ಗುಡಿಗಾರರದ್ದು ವಿಶೇಷ ಪರಿಶ್ರಮ, ಸಾಧನೆ ಇದೆ. ರಾಜ್ಯದೆಲ್ಲೆಡೆಯಂತೆ ಇಲ್ಲಿಯೂ ಶ್ರೀಗಂಧದ ಕೊರತೆ ಎದುರಿಸುತ್ತಿರುವುದು ಶಿಲ್ಪ ಕಲಾವಿದರಿಗೆ ಅನಾನುಕೂಲವಾಗಿದೆ. ಆದರೂ ಸಿಕ್ಕ ಅವಕಾಶದಲ್ಲೇ ಉತ್ಕೃಷ್ಟ ಕಲಾಕೃತಿಗಳನ್ನು ಅರಳಿಸುವ ಇವರು, ಬೇರೆ ಜಾತಿಯ ಮರಗಳನ್ನು ಬಳಸಿಕೊಂಡು ಮೂರ್ತಿ ಕೆತ್ತನೆ ಕಾರ್ಯ ಮಾಡುತ್ತಿದ್ದಾರೆ.

ಚಿತ್ರ - ಬರಹ : ಜಿ. ಅರ್ಚನಾ ಬೊಮ್ನಳ್ಳಿ, ಬೊಮ್ನಳ್ಳಿ, ಶಿರಸಿ ತಾ|| (ಉ. ಕ.) - ೫೮೧ ೪೦೨





# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ರಾಂಚಂದ್ರ ಕೊಪ್ಪಲು, ಶ್ರೀಹರಿ, ಕೆದಿಲಾಯ, ಹರಿಣಿ,

ಎಸ್.ಆರ್. ಬೊಮ್ಮಳ್ಳಿ, ಜಿ.ಎಂ. ಬೊಮ್ಮಳ್ಳಿ

ಮುಖಚಿತ್ರ : ಪ್ರೊ॥ ಯು. ಆರ್. ರಾವ್

ವರ್ಣಚಿತ್ರ : ಕೆ. ಪಿ. ಸ್ವಾಮಿ ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಶಾಂ**ತಿದೂತ ಜೀಸಸ್ ಭಗವಂತನ ಮಗನೆನ್ನುತ್ತಾರೆ. ಭಗವಂತನಿಗೆ ಒಬ್ಬನೇ ಮಗ. ಬೇಕಾದಷ್ಟು ವರಗಳನ್ನು ಕರುಣಿಸುವ ಸಾಮರ್ಥ್ಯವಿದೆಯೆನ್ನಲಾದ ಈ ದೇವರು ಇನ್ನಷ್ಟು ಮಕ್ಕಳನ್ನು ಪಡೆದಿದ್ದರೆ ಒರಿಸ್ಸಾದಲ್ಲಿ ನಡೆದ ಮತೀಯ ಗಲಭೆಗಳನ್ನು ಹತ್ತಿಕ್ಕಲು ಕಳೆದ ಕ್ರಿಸ್‌ಮಸ್ ಸಂದರ್ಭದಲ್ಲಿ ಅವರು ಧರೆಗಿಳಿದುಬರುತ್ತಿದ್ದರೇನೋ ತಿಳಿಯದು. ಹಿಂದು ಧರ್ಮದ ಭಗವಂತರ ಪೈಕಿ ಶಿವನಿಗೆ ಇಬ್ಬರು ಮಕ್ಕಳು; ಇನ್ನುಳಿದ ಬ್ರಹ್ಮ ಮತ್ತು ವಿಷ್ಣು ಮಕ್ಕಳನ್ನು ಪಡೆಯುವ ಸುಯೋಗ ವಿಲ್ಲದವರು. ಮಕ್ಕಳಿಲ್ಲದಿರುವುದರಿಂದ ಸ್ವತಃ ವಿಷ್ಣುವೇ ಭೂಮಿಯಲ್ಲಿ ಆಗಾಗ್ಗೆ ಅವತರಿಸಿ ಧರ್ಮವನ್ನು ರಕ್ಷಿಸುತ್ತಾನೆಂಬ ಐತಿಹ್ಯವಿದೆ. ಒರಿಸ್ಸಾದ ಕಂದಮಾಲ್ ಜಿಲ್ಲೆಯಲ್ಲಿ ಧರ್ಮದ ಗ್ಲಾನಿಯು ಅಗಾಧ ಪ್ರಮಾಣವನ್ನು ಇನ್ನೂ ತಲುಪಿಲ್ಲವೆಂದು ತೋರುತ್ತದೆ; ಅದಕ್ಕೇ ಅಲ್ಲಿ ಭಗವಂತನು ಅವತರಿಸಿ ದುಷ್ಟರಿಗೆ ಶಿಕ್ಷೆ ಮತ್ತು ಶಿಷ್ಟರಿಗೆ ರಕ್ಷೆ ನೀಡಲಿಲ್ಲ. ಧಾರ್ಮಿಕ ನಂಬಿಕೆ ಗಳನ್ನು ಗೌರವಿಸಬೇಕೆಂದು ಪದೇಪದೇ ಕರೆ ನೀಡುವ ಹಿಂದು ಮತಧರ್ಮೀಯ ಪಕ್ಷದ ಮಹಾವೃಕ್ಷದಲ್ಲಿ ಅನೇಕ ಕೊಂಬೆಗಳಿವೆ. ಅವನ್ನೆಲ್ಲಾ ಒಟ್ಟಾಗಿ ಸಂಘಪರಿವಾರವೆಂದು ನಮ್ಮ ದೇಶದ ಮಾಧ್ಯಮಗಳು ಗುರುತಿಸಿವೆ. ಈ ಪರಿವಾರದವರಿಗೆ ಜೀಸಸ್ ಹುಟ್ಟಿದ್ದನೆಂಬ ನಂಬಿಕೆ ಮತ್ತು ಆ ಹುಟ್ಟನ್ನು ಆರಾಧಿಸಿ ಹರ್ಷಿಸುವ ಕ್ರಿಸ್ಮಸ್ ಹಬ್ಬವು ಅದೇಕೋ ಅಪಥ್ಯವೆಂದು ಕಂಡು ಬಂದಿದೆ. ಅದಕ್ಕೆ ಅವರು ನೀಡುವ ಕಾರಣವೆಂದರೆ ಕ್ರೈಸ್ತಮತವು ಸದಾ ಹುಲುಮಾನವರನ್ನು ತನ್ನ ಭಗವಂತನತ್ತ ಎಳೆಯಲು ಯತ್ನಿಸುತ್ತಿರುತ್ತದೆ ಎಂಬುದು. ಮತಾಂತರಕ್ಕೆ ಪ್ರೋತ್ಸಾಹ ನೀಡುವುದು, ಜೀಸಸ್‌ನ ತಂದೆಯಾದ ಭಗವಂತನಲ್ಲಿ ಶರಣಾಗತರನ್ನಾಗಿಸಿ ಮನುಷ್ಯರಿಗೆ ಸ್ವರ್ಗ ದೊರಕಿಸಿ ಕೊಡುವುದು, ಕ್ರೈಸ್ತಮತದ ಕಾರ್ಯವಿಧಾನ. ಒರಿಸ್ಸಾದ ಕಂದಮಾಲ್ ಜಿಲ್ಲೆಯಲ್ಲಿ ಮತ್ತು ಅದರ ಆಸುಪಾಸಿನಲ್ಲಿ ವಾಸಿಸುವ ಗುಡ್ಡಗಾಡಿನ ಜನರು ಇಂತಹ ಪ್ರಲೋಭನೆಗೆ ಪಕ್ಕಾಗಿ ಕ್ರೈಸ್ತ ಮತವನ್ನು ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ಸೇರಿಕೊಂಡುಬಿಟ್ಟಿದ್ದಾರೆ. ಹಿಂದು ಧರ್ಮದ ಭಗವಂತನು ನಾಲ್ಕು ವರ್ಣಗಳನ್ನು ಸೃಷ್ಟಿಸಿ ಅವರನ್ನೆಲ್ಲಾ ತಮ್ಮ ತಮ್ಮ ಸ್ಥಾನಗಳಲ್ಲಿ ಸ್ಥಿರವಾಗಿ ಉಳಿದು, ತಮಗೆ ಮೀಸಲಾಗಿಟ್ಟಿರುವ ಕರ್ತವ್ಯಗಳನ್ನು ಮಾಡಿಕೊಂಡಿರಬೇಕೆಂದು ವಿಧಿಸಿದ್ದಾನೆ. ಇಂತಹ ಖಾಯಂ ಕನಿಷ್ಠತೆಯನ್ನು ಹೇರಿಸಿಕೊಂಡು ರೋಸಿಹೋದ ಗುಡ್ಡಗಾಡು ಜನರಲ್ಲಿ ಕೆಲವರು ಕ್ರೈಸ್ತಧರ್ಮಕ್ಕೆ ಹೋಗಿ ಅಲ್ಲಾದರೂ ಶ್ರೇಷ್ಠತೆಯ ಕನಸನ್ನು ಕಾಣಬಹುದೇನೋ ಎಂದು ತವಕಿಸುತ್ತಾರೆ. ಯಾವ ಭಗವಂತನೂ ಅವರ ಐಹಿಕ ಕಾರ್ಪಣ್ಯವನ್ನು ನೀಗಿಸುವ ಕೃಪೆ ತೋರಿಲ್ಲದಿರುವುದು ಇಂದಿನ ವಸ್ತುಸ್ಥಿತಿ.

ಡಿಸೆಂಬರ್‌ನಲ್ಲಿ ಬರುವ ಕ್ರಿಸ್‌ಮಸ್‌ಗೆ ಮುನ್ನ ಕಂದಮಾಲ್ ಜಿಲ್ಲೆಯಲ್ಲಿ ಹಿಂದು ಧರ್ಮ ನಿಷ್ಠರೆನ್ನಲಾದ ಕೆಲವರು ಗುಂಪುಗುಂಪಾಗಿ ತೆರಳಿ ಗುಡ್ಡಗಾಡು ಜನ, ಬುಡಕಟ್ಟು ಜನ, ಎಂದು ಗುರುತಿಸಲಾದವರನ್ನು ಯಃಕಶ್ಚಿತ್ ಕ್ರೈಸ್ತರು ಎಂದು ತೀರ್ಮಾನಿಸಿ ಅವರ ರುಂಡಗಳನ್ನು ಚೆಂಡಾಡಿ, ತಮ್ಮ ಮತಧರ್ಮಕ್ಕೆ ಮಸಿ ಬಳಿಯಲು ಹೇಸಲಿಲ್ಲ. ಅದರಿಂದ ಹಿಂದು ಧರ್ಮವು ಎಷ್ಟು ಶೋಭಿಸಿತೆಂದು ನಮ್ಮ ಯಾರಾದರೂ ಖ್ಯಾತ ಸಂಶೋಧಕರು ಮುಂದೊಂದು ದಿನ ಲೆಕ್ಕಮಾಡಿ ತಿಳಿಸಬಹುದು. ಸದ್ಯಕ್ಕೆ ಲಭ್ಯವಿರುವ ಲೆಕ್ಕದ ಪ್ರಕಾರ ಸುಮಾರು ನಾಲ್ಕುನೂರು ಕುಟುಂಬಗಳ ಮನೆಗಳು ಸುಟ್ಟುಹೋದವು, ಐದು ದೊಡ್ಡ ಚರ್ಚುಗಳು ಭಸ್ಮವಾದವು, ಐವತ್ತು ಹಳ್ಳಿಗಳ ಚಿಕ್ಕ ಚಿಕ್ಕ ಚರ್ಚುಗಳು ಭಗ್ನಗೊಂಡವು; ಜೊತೆಗೆ ಕ್ರೈಸ್ತ ಸನ್ಯಾಸಿನಿಗಳ ಆರು ಕಾನ್ವೆಂಟ್‌ಗಳು, ವಿದ್ಯಾರ್ಥಿಗಳ ಆರು ವಿದ್ಯಾರ್ಥಿನಿಲಯಗಳು, ಒಂದು ಔದ್ಯೋಗಿಕ ತರಬೇತಿ ಕೇಂದ್ರ ಮತ್ತು ಒಂದು ಕುಷ್ಠರೋಗಿಗಳ ಸೇವಾಕೇಂದ್ರ, ಇವೂ ನಾಶಮಾಡಲ್ಪಟ್ಟಿವೆ. ಇಷ್ಟಾಗಿಯೂ ಕೊಲ್ಲಲ್ಪಟ್ಟ ಗುಡ್ಡಗಾಡಿನ ಜನರ ಸಂಖ್ಯೆ ಐದನ್ನು ದಾಟಿಲ್ಲವೆಂದು ಕೆಲವರಲ್ಲಿ ನಿರಾಶಾಭಾವನೆ ಉಂಟಾಗಿದೆಯೇನೋ! ಆ ಐದು ಮಂದಿಯ ಕುಟುಂಬಗಳಿಗೆ ತಲಾ ಒಂದು ಲಕ್ಷ ರೂಪಾಯಿಯ ಪರಿಹಾರವನ್ನು ಒರಿಯಾ ಭಾಷೆಯನ್ನು ಕಿಂಚಿತ್ತೂ ಮಾತನಾಡದ ಒರಿಸ್ಸಾ ಮುಖ್ಯಮಂತ್ರಿ ನವೀನ್ ಪಟ್ನಾಯಕ್ ಘೋಷಿಸಿದ್ದಾರೆ. ಅಡವಿಗಳಲ್ಲಿ ಅಡಗಿ ಕುಳಿತಿದ್ದ ನೂರಾರು ಮಂದಿ ಗುಡ್ಡಗಾಡಿನವರು ಈ ವೇಳೆಗೆ ತಮ್ಮ ತಮ್ಮ ಹಳ್ಳಿಗಳಿಗೆ ಹಿಂದಿರುಗಿದ್ದಾರೆಂದು ಭಾವಿಸಲಾಗಿದೆ. ದಾಂಧಲೆಗಳಿಗೆ ಕಾರಣರಾದ ಸುಮಾರು ೪೦ ಅಪರಾಧಿಗಳನ್ನು ಬಂಧಿಸ ಲಾಗಿದೆಯೆಂದು ಹೇಳಲಾಗಿದೆ. ಬಿಸಿಬಿಸಿ ಸುದ್ದಿಗಳನ್ನು ರೋಚಕವಾಗಿ ಬಿತ್ತರಿಸುವ ನಮ್ಮ ಮಾಧ್ಯಮಗಳಿಗೆ, ವಿಶೇಷವಾಗಿ ವಿದ್ಯುನ್ಮಾನ ಮಾಧ್ಯಮಗಳಿಗೆ, ಇದೆಲ್ಲಾ ದೊಡ್ಡ ಸಮಾಚಾರವಾಗಿ ಕಾಣಲಿಲ್ಲ. ನವೀನ್ ಪಟ್ನಾಯಕ್ ಸರ್ಕಾರದಲ್ಲಿ ಭಾರತೀಯ ಜನತಾ ಪಕ್ಷವು ಪಾಲುದಾರ ಪಕ್ಷವಾಗಿರುವುದು ಬಹುಶಃ ಇಂತಹ ಜಾಣಕುರುಡಿಗೆ ಕಾರಣವಿರಬೇಕು. ಹಿರಿಯ ನಾಯಕ ಅಟಲ್ ಬಿಹಾರಿ ವಾಜಪೇಯಿಯವರಿಗೆ 'ಭಾರತ ರತ್ನ' ಪ್ರಶಸ್ತಿಗಾಗಿ ಶಿಫಾರಸು ಪತ್ರ ನೀಡಿರುವ ಅಡ್ವಾನಿಯವರು ಬುಡಕಟ್ಟು ಜನರ ಮೇಲೆ ಹಿಂಸೆಯನ್ನು ಹರಿಬಿಟ್ಟವರಿಗೆ ಏನು ಮಾಡಬೇಕೆಂದು ನವೀನ್ ಪಟ್ನಾಯಕ್‌ಗೆ ಪತ್ರ ಬರೆಯಲಿಲ್ಲ. ಮತಧಾರ್ಮಿಕ ಜಡ್ಡುತನವನ್ನು ರಾಜಕೀಯ ಬಂಡವಾಳ ಮಾಡಿಕೊಳ್ಳುವ ಪ್ರಸಂಗಗಳು ಹೆಚ್ಚುತ್ತಿವೆಯೆಂದರೆ ನಮ್ಮ ದೇಶವು

ಕ್ರಮೇಣ ಫ್ಯಾಸಿಸ್ಟ್ ದುರಾಕ್ರಮಣದತ್ತ ಸಾಗುತ್ತಿದೆಯೆಂದರ್ಥ. ಶೇಕಡ ೯ರ ಅಭಿವೃದ್ಧಿಯ ಗುಂಗಿನಲ್ಲಿರುವ ಮನಮೋಹನ ಸಿಂಗ್ ಸರ್ಕಾರಕ್ಕೆ ಇದರ ಅರಿವನ್ನು ಮೂಡಿಸುವವರು ಯಾರು? ಖಂಡಿತ ಅವರ ಪಕ್ಷವು ಅದನ್ನು ಮಾಡುವುದಿಲ್ಲ. ದೇಶದಲ್ಲಿ ಭಗವಂತನಿಗಿಂತಲೂ ಪ್ರಜಾಪ್ರಭುತ್ವದಲ್ಲಿ ಶ್ರದ್ಧೆಯುಳ್ಳವರು ಆ ಕೆಲಸವನ್ನು ಅತಿಶಯವಾಗಿ ಮಾಡಬೇಕಾಗಿದೆ.

* * *

ಬೇರೆ ಬೇರೆ ಬಣ್ಣಗಳ ಸ್ವಾಮಿಗಳು ಅಥವಾ ಶ್ರೀಗಳು ಕಳೆದ ಕೆಲವು ವಾರಗಳಿಂದ ಪತ್ರಿಕೆಗಳ ಮುಖಪುಟಗಳಲ್ಲಿ ಅಗ್ರಸ್ಥಾನ ಪಡೆದಿದ್ದಾರೆ. ಶ್ರೀಕೃಷ್ಣನ ಪೂಜೆಗೆ ತಮಗೆ ಗುತ್ತಿಗೆಯುಂಟೆಂದು ಪುತ್ತಿಗೆ ಸ್ವಾಮಿಗಳು ಹೇಳಿದರೆ, ಅದು ಸರ್ವಥಾ ದ್ವೈತಸಿದ್ಧಾಂತ ಸಮ್ಮತವಲ್ಲವೆಂದು ಪೇಜಾವರ ಸ್ವಾಮಿಗಳು ಕ್ರುದ್ಧರಾಗಿದ್ದಾರೆ. ಅವರು ದ್ವೈತ ಮಠಾಧ್ಯಕ್ಷರುಗಳ ಸಂಘದ ಅಧ್ಯಕ್ಷರಾಗಿಯೂ ನೂತನ ಪದವಿಯನ್ನಲಂಕರಿಸಿದ್ದಾರೆ. ನ್ಯಾಯಾಲಯದಲ್ಲಿ ತಮಗೆ ನ್ಯಾಯ ಸಿಕ್ಕಲಿಲ್ಲವಾಗಿ ಅವರು ಉಪವಾಸ ವ್ರತ ಕೈಗೊಂಡರು. ಗಾಂಧೀಜಿಯ ಉಪವಾಸ ಸತ್ಯಾಗ್ರಹ ಪರಂಪರೆಗೆ ಇದೊಂದು ಹೊಸ ದಾಖಲೆ. ಅದೆಲ್ಲಾ ಹೇಗಾದರೂ ಇರಲಿ, ಮುಖ್ಯವಾಗಿ ಗಮನಿಸಬೇಕಾದ್ದು ಪೇಜಾವರ ಸ್ವಾಮಿಗಳಂತಹವರು ಅನುಸರಿಸುವ ದ್ವಂದ್ವ ನೀತಿಯ ಸ್ವಾರಸ್ಯವನ್ನು. ಇವರು ಮುಖ್ಯವಾಗಿ ಶ್ರೇಷ್ಠ ಮತ್ತು ಅನುಲ್ಲಂಘನೀಯವೆಂದು ತಾವು ಭಾವಿಸುವ ಯಾವುದೋ ಒಂದು ಸಂಪ್ರದಾಯವನ್ನು ಎತ್ತಿಹಿಡಿಯಲು ತವಕಿಸುತ್ತಿದ್ದಾರೆ. ಬೇರೆಷ್ಟೋ ಬದಲಾವಣೆಗಳ ನಡುವೆ ಆ ಸಂಪ್ರದಾಯವೂ ಬದಲಾಗಬಹುದೆಂಬುದನ್ನು ಅವರು ಒಪ್ಪುವುದಿಲ್ಲ. ಹಿಂದೆ ಅವರು ಪಾತ್ರವಹಿಸಿದ್ದ ಒಂದು ಅದ್ಭುತ ಜೀವನ ನಾಟಕದಲ್ಲಿ ಅವರು ಕೊಳೆಗೇರಿಗೆ ಹೋಗಿ ಛಾಯಾಚಿತ್ರಗಳನ್ನು ತೆಗೆಸಿಕೊಂಡು ಪ್ರಚಾರ ಪ್ರಿಯರಾಗಿ ವಿಜೃಂಭಿಸಿದ್ದರು. ಅದಕ್ಕೆ ಸಂಪ್ರದಾಯವು ಅಡ್ಡಿಬರಲಿಲ್ಲ; ಏಕೆಂದರೆ ಸಮಕಾಲೀನ ಸಾಮಾಜಿಕ ರುಜಿನಗಳನ್ನು ನಿರ್ಮೂಲನಗೊಳಿಸುವುದರಲ್ಲಿ ತಮ್ಮ ಪಾತ್ರವಿದೆಯೆಂದು ಮಾತಿನಲ್ಲಾದರೂ ಅವರು ಬಗೆದಿದ್ದರು. ಕೃಷ್ಣನ ಪೂಜೆಗೆ ಅದನ್ನು ಅನ್ವಯಿಸಲು ಒಪ್ಪದ ಪೇಜಾವರ ಶ್ರೀಗಳು ಆಧುನಿಕ ಚಳುವಳಿಗಳ ಒಂದು ವಿಧಾನವಾದ ಉಪವಾಸ ಸತ್ಯಾಗ್ರಹವನ್ನು ಹಮ್ಮಿಕೊಳ್ಳಲು ಹಿಂದೆಗೆಯುವುದಿಲ್ಲ. ಗಾಂಧೀಜಿಗೆ ಮುನ್ನ ಇಂತಹ ಸಂಪ್ರದಾಯವಿರಲಿಲ್ಲವೆಂದು ಪೇಜಾವರ ಸ್ವಾಮಿಗಳಿಗೆ ತಿಳಿದಿದೆ. ತಮ್ಮ ಯಾವ ದೋಷವನ್ನು ಶುದ್ಧೀಕರಿಸಲು ಉಪವಾಸ ವ್ರತವನ್ನು ಕೈಗೊಂಡರೆಂಬುದನ್ನು ತಮ್ಮ ಶಿಷ್ಯಕೋಟಿಗೆ ತಿಳಿಸುವ ಕೃಪೆಯನ್ನು ಅವರು ಮುಂದೆ ಎಂದಾದರೊಂದು ದಿನ ತೋರಲೆಂದು ಅಪೇಕ್ಷಿಸಬಹುದಾಗಿದೆ. ಅವರಿಗೆ ಅನುಕೂಲವಾಗುವಂತಿದ್ದರೆ ಹೊಸ ಸಂಪ್ರದಾಯಗಳಿಗೆ ಅವರ ವಿರೋಧವಿಲ್ಲ. ಗ್ರಂಥಸ್ಥವಾದ ಧರ್ಮಶಾಸ್ತ್ರವೇ ಬೇರೆ, ತಕ್ಷಣದ ಪ್ರಯೋಜನಕ್ಕೆ ಬರುವ ಆಚಾರ ವಿಧಿಗಳೇ ಬೇರೆ.

* * *

ರವಿಶಂಕರ್ ಅವರು ಬಿಳಿಬಣ್ಣದ ಶ್ರೀ ಶ್ರೀಗಳು. ಪೆಚ್ಚು ಪೆಚ್ಚಾಗಿ ಮಾತನಾಡುವುದೇ ಮುಗ್ಧತೆಯ ಕುರುಹೆಂದು ಭಾವಿಸುವ ಮೂರ್ಖತನ ಅವರಲ್ಲಿ ನವಾಗಿದೆ. ಅವರಿಗಿಂತಲೂ ಕಡುಮೂರ್ಖರು ಸಾಕಷ್ಟು ಸಂಖ್ಯೆಯಲ್ಲಿರುವುದರಿಂದ ಅವರ ಕಾಲಿಗೆ ಬೀಳುವವರ ಸಂಖ್ಯೆಯೂ ಅಗಾಧವಾಗಿದೆ. ಅದಕ್ಕಿಂತಲೂ ಅಗಾಧವಾದ್ದು ಶ್ರೀ ಶ್ರೀ ಅವರ ಸಂಪತ್ತು. ಅವರನ್ನು ಟೀಕಿಸಿದರೆ ಹೊಟ್ಟೆಕಿಚ್ಚಿನಿಂದ ಹಾಗೆ ಮಾಡುತ್ತಾರೆಂಬ ಆಪಾದನೆ ಶತಸಿದ್ಧ. ಆದ್ದರಿಂದ ಅವರನ್ನು ಟೀಕಿಸುವುದು ಬೇಡ. ಸದರಿ ಶ್ರೀ ಶ್ರೀ ಶ್ರೀಯವರು ಹಲವು ಎಕರೆಗಳಷ್ಟು ಸರ್ಕಾರಿ ಭೂಮಿಯನ್ನು, ಅಂದರೆ ಸಾರ್ವಜನಿಕ ಸಂಪತ್ತನ್ನು, ಲಪಟಾಯಿಸಿದ್ದಾರೆಂದು ಶಾಸಕರಾದ ಶ್ರೀ ಎ. ಟಿ. ರಾಮಸ್ವಾಮಿ, ಶ್ರೀ ಶ್ರೀರಾಮ ರೆಡ್ಡಿ ಮುಂತಾದವರ ಸಮಿತಿಯು ತಿಳಿಸಿದೆ. ಅದನ್ನು ಸಾಬೀತುಗೊಳಿಸಲು ಅಧಿಕೃತ ದಾಖಲೆಗಳನ್ನು ಸಮಿತಿಯು ನೀಡಿದೆ. ಅಂದರೆ, ಬಾಲನಂತೆ ಮಾತನಾಡುವ ಬಾಲಿಶ ಶ್ರೀಶ್ರೀಗಳು ತಮ್ಮನ್ನು ಅಭಿವೃದ್ಧಿಯ ಹಾದಿಯಲ್ಲಿ ಮುನ್ನಡೆಸಿಕೊಂಡಿದ್ದಾರೆ. ಅಂತಹ ಅಭಿವೃದ್ಧಿಯನ್ನು ಬಹಿರಂಗಗೊಳಿಸುವುದು ಪಾಪದ ಕೆಲಸವೆಂದು ಶ್ರೀಗಳ ಅಭಿಪ್ರಾಯ. ಅದೇ ಅವರ ಮನಸ್ಸಿನಲ್ಲಿ ಭೂತಾಕಾರವಾಗಿ ಬೆಳೆದು ಕಮ್ಯುನಿಸ್ಟರನ್ನು ಶಪಿಸುವ ಪ್ರವೃತ್ತಿಗೆ ಅವರನ್ನು ದೂಡಿದೆ. ಕಮ್ಯುನಿಸ್ಟರು ಅಭಿವೃದ್ಧಿಯ ವಿರೋಧಿಗಳು ಮತ್ತು ಅಪಾಯಕಾರಿ ಎಂಬ ಅವರ ಚಮತ್ಕಾರದ ಮಾತುಗಳು ಈ ಹಿನ್ನೆಲೆಯಲ್ಲಿ ಮಾತ್ರವೇ ಸಮಂಜಸವಾಗಿರಲು ಶಕ್ಯ. ರವಿಶಂಕರ್ ಬೋಧಿಸುವ ಸುದರ್ಶನ ಕ್ರಿಯೆಯು ಸ್ವತಃ ಅವರ ಮನಸ್ಸಿನ ಕಲ್ಮಶವನ್ನು ಹೊರಹಾಕಿಲ್ಲದಿರುವುದು ಒಂದು ವಾಸ್ತವ. ಪ್ರಾಣಾಯಾಮವು ಆಂತರಿಕ 'ಕಿಲ್ಬಿಷ'ವನ್ನು ಧ್ವಂಸಮಾಡುತ್ತದೆಯೆಂದು ಹಠಯೋಗ ಪ್ರದೀಪಿಕೆಯು ಹೇಳುತ್ತದೆ. 'ಕಿಲ್ಬಿಷ' ಎಂಬ ಪದಕ್ಕೆ ಪಾಪ, ರೋಗ, ತಪ್ಪು, ಅಪರಾಧ ಎಂಬ ನಾಲ್ಕು ಅರ್ಥಗಳನ್ನು ವಿದ್ವಾಂಸರಾದ ಶ್ರೀ ಜಿ. ಎನ್. ಚಕ್ರವರ್ತಿಯವರು ತಮ್ಮ ನಿಘಂಟುವಿನಲ್ಲಿ ದಾಖಲಿಸಿದ್ದಾರೆ. ಈ ನಾಲ್ಕರಲ್ಲಿ ಯಾವುದನ್ನೂ ಸುದರ್ಶನ ಕ್ರಿಯೆಯು ತೊಡೆದುಹಾಕಿಲ್ಲದಿರುವುದು ಶ್ರೀ ಶ್ರೀ ರವಿಶಂಕರರ ದುರಂತ.

* * *

ನಮ್ಮ ರಾಜ್ಯದ ಇಬ್ಬರು ಪ್ರತಿಭಾನ್ವಿತರು ಈ ತಿಂಗಳಲ್ಲಿ ಮಹತ್ವದ ತೀರ್ಮಾನಗಳನ್ನು ಕೈಗೊಂಡಿದ್ದಾರೆ. ಒಬ್ಬರದು ಪ್ರಕ್ರಿಯೆ ಮುಗಿದಿದೆ, ಇನ್ನೊಬ್ಬರದು ಪ್ರಕ್ರಿಯೆ ಆರಂಭವಾಗಿದೆ. ಇಬ್ಬರೂ ಹಿಂದು ಮತಧರ್ಮದ ಸಾರೋದ್ಧಾರಕ್ಕೆ ತಮ್ಮನ್ನು ತಾವು ಸಮರ್ಪಿಸಿಕೊಳ್ಳುತ್ತಿದ್ದಾರೆ. ಒಬ್ಬರು ಮಾನ್ಯ ಡಾ|| ಎಂ. ಚಿದಾನಂದಮೂರ್ತಿಗಳು, ಇನ್ನೊಬ್ಬರು ಮಾನ್ಯ ಶ್ರೀ ಎಂ. ಪಿ. ಪ್ರಕಾಶ್ ಅವರು. ತಮ್ಮೆಲ್ಲ ಸಂಶೋಧನೆಗಳೂ ಇನ್ನು ಮುಂದೆ ಹಿಂದು ಧರ್ಮದ ರಕ್ಷಣೆಗಾಗಿ ಮೀಸಲು, ಎಂದು ಹಿರಿಯ ಸಂಶೋಧಕರಾದ ಡಾ|| ಚಿದಾನಂದಮೂರ್ತಿಯವರು ಘೋಷಿಸಿದ್ದಾರೆ. ಅವರ ಬೌದ್ಧಿಕ ಆರೋಗ್ಯವು ವರ್ಧಿಸಲೆಂದಷ್ಟೇ ನಾವು ಆಶಿಸಬೇಕಾದ್ದು. ಜಾರ್ಜ್ ಫರ್ನಾಂಡೀಸರ ಹಾದಿಯನ್ನು ಸ್ವಲ್ಪ ತಡವಾಗಿ ತುಳಿಯ ಹೊರಟಿರುವ ಶ್ರೀ ಎಂ. ಪಿ. ಪ್ರಕಾಶ್ ಅವರ ರಾಜಕೀಯ ಜೀವನವು ಮತ್ತೊಮ್ಮೆ ಪ್ರಕಾಶಮಾನವಾಗುತ್ತದೆಂದು ಮುತ್ಸದ್ದಿಗಳಾದ ಶ್ರೀ ಸದಾನಂದ ಗೌಡ ಮತ್ತು ಶ್ರೀ ಯಡಿಯೂರಪ್ಪನವರು ಆಶ್ವಾಸನೆ ನೀಡಿದ್ದಾರೆಂದು ಹೇಳಲಾಗಿದೆ. ಅವರ ಆಶ್ವಾಸನೆಯನ್ನು ಅನುಮಾನದಿಂದ ಕಂಡರೆ ಶ್ರೀ ಪ್ರಕಾಶ್ ಅವರು ಇನ್ನೊಬ್ಬ ನಾಯಕ ಶ್ರೀ ಮಲ್ಲಿಕಾರ್ಜುನ ಖರ್ಗೆಯವರ ಆಶ್ವಾಸನೆಯನ್ನು ಗಂಭೀರವಾಗಿ ಪರಿಗಣಿಸಬಹುದು. ಇದಾವುದಕ್ಕೂ ಕಾಲ ಮಿಂಚಿಲ್ಲವೆಂಬುದು ನಮ್ಮ ರಾಜ್ಯದ ಪ್ರಸಕ್ತ ರಾಜಕೀಯದ ವೈಶಿಷ್ಟ್ಯ. ಯಾರು ಯಾವಾಗ ಬೇಕಾದರೂ ಕುದುರೆಗಳನ್ನು ಬದಲಿಸಿಕೊಳ್ಳಬಹುದು; ಅದಕ್ಕೆ ಯಾವ ಸಿದ್ಧಾಂತದ ಚೌಕಟ್ಟು ಸಹ ಅಡ್ಡಿಯಾಗುವುದಿಲ್ಲ. ''ರಾಜ್ಯದ ಜನತೆಯ ಸೇವೆ ಮಾಡಲು ಯಾವ ಸಿದ್ಧಾಂತವಾದರೆ ಏನು!'' ಇದೇ ಇಂದಿನ ಮಹಾವಾಕ್ಯ. ಭ್ರಷ್ಟತೆಯು ಯಾವ ಯಾವ ಸ್ವರೂಪಗಳಲ್ಲಿರಬಹುದೆಂದು ನಿರ್ದಿಷ್ಟವಾಗಿ ಸ್ಪಷ್ಟಪಡಿಸಲು ಸಾಧ್ಯವಾಗಿಲ್ಲದಿರುವುದಕ್ಕೆ ಇದು ಇನ್ನೊಂದು ಪುರಾವೆ. ಮಾನ್ಯ ಪ್ರಕಾಶ್ ಅವರು ಭಾರತೀಯ ಜನತಾ ಪಕ್ಷದ ಹಿರಿಯರೊಂದಿಗೆ ಚರ್ಚೆ ನಡೆಸುತ್ತಾರೆಂದು ವರದಿಯಾಗಿತ್ತು. ಏನನ್ನು ಚರ್ಚಿಸುತ್ತಾರೆ? ತಮಗೆ ಹೇಗೆ ಮತ್ತು ಎಷ್ಟು ಹಿತವನ್ನು ಹಂಚಲಾಗುತ್ತದೆ ಎಂಬುದನ್ನೆ? ಹಾಗಿದ್ದರೆ, ಅದಕ್ಕೆ ಇಷ್ಟು ಕಾಲ ಕಾಯಬೇಕಾಗಿರಲಿಲ್ಲ. ಪ್ರಕಾಶ್ ಅವರಿಗೆ ಜನತೆಯ ಹಿತವಷ್ಟೇ ಮುಖ್ಯವಾದ್ದರಿಂದ ಅವರು ಈ ಜುಜುಬಿ ವಿಷಯವನ್ನು ಚರ್ಚಿಸಹೋಗಲಾರರೆಂದು ಕೆಲವರ ಅಭಿಮತ. ಹಾಗಾದರೆ ಅವರು ಭಾಜಪದ ಸಿದ್ಧಾಂತದ ಬಗ್ಗೆ ಚರ್ಚೆ ನಡೆಸುತ್ತಾರೆಯೆ? ಹೌದೆಂದಾದರೆ, ಚರ್ಚೆಗೆ ಬೆಂಗಳೂರು ಮತ್ತು ದೆಹಲಿ ಪ್ರಶಸ್ತವಲ್ಲ. ಅದಕ್ಕೆ ಪ್ರಶಸ್ತವಾದ ಊರು ನಾಗಪುರ, ಸ್ಥಳ ಶ್ರೀ ಸುದರ್ಶನ ಅವರ ಆರೆಸ್ಸೆಸ್ ಎಂಬ ಸಂಸ್ಥೆಯ ಪುಣ್ಯಭೂಮಿ. ಮಾನ್ಯ ಪ್ರಕಾಶ್ ಅವರು ಅಲ್ಲಿಗೆ ಹೋಗಿ ಪಾವನರಾಗಬೇಕೆ ಎಂಬುದೊಂದೇ ಉಳಿದಿರುವ ಪ್ರಶ್ನೆ. ಕಡೆಗೆ ಕಾಂಗ್ರೆಸ್ಸಿನಲ್ಲಿ ತಮ್ಮ ಅದೃಷ್ಟ ಪರೀಕ್ಷಿಸಿಕೊಳ್ಳಲಿದ್ದಾರೆ.

* * *

ದೇಶ-ವಿದೇಶಗಳಲ್ಲಿ ನೆಲೆಸಿರುವ ''ಭಾರತೀಯರು'' ವರ್ಷಕ್ಕೊಮ್ಮೆ ದೆಹಲಿಯಲ್ಲಿ ಜಂಬೂರಿ ನಡೆಸುತ್ತಾರೆ. ಅದಕ್ಕೆ ಕೋಟಿಗಟ್ಟಲೆ ಹಣವನ್ನು ನಾವು ವ್ಯಯಿಸುತ್ತೇವೆ ಅಥವಾ ವ್ಯರ್ಥಮಾಡುತ್ತೇವೆ. ನಮ್ಮ ದೇಶದಲ್ಲಿರುವವರು ನಮ್ಮ ದೇಶದವರಂತಿರಬೇಕೆಂದು ಆಗ್ರಹಿಸುವ ನಮ್ಮ ಕೆಲವು ರಾಜಕೀಯ ನಾಯಕರಿಗೆ ಆ ಬೇರೆ ದೇಶಗಳಲ್ಲಿ ಇವರು ಆ ದೇಶದವರಂತಿರಬೇಕೆಂದು ಏಕೆ ಅನಿಸುವುದಿಲ್ಲವೆಂಬುದು ಒಂದು ಸೂಕ್ಷ್ಮ ವಿಚಾರ. ಬೇರಾವ ದೇಶದಲ್ಲೂ ಇಲ್ಲದಿರುವಂತಹ ಪದ್ಧತಿ ನಮ್ಮದು. ಈ ''ಭಾರತೀಯ''ರಿಗೆ ಎರಡು ದೇಶಗಳ ಪೌರತ್ವ! ಅವರಿಗೆ ಭಾರತದ ಚುನಾವಣೆಗಳಲ್ಲಿ ಅವರಿರುವ ಕಡೆಯಿಂದಲೇ ಚುನಾವಣೆಗಳಲ್ಲಿ ಮತದಾನದ ಹಕ್ಕು ನೀಡಬೇಕಂತೆ! ಈ ದೇಶದಲ್ಲಿರುವ ಭಾರತೀಯರಿಗಿಂತ ಎಲ್ಲೆಲ್ಲೋ ಇರುವ ''ಭಾರತೀಯ''ರು ಹೆಚ್ಚು ಶ್ರೇಷ್ಠರು. ಇದೊಂದು ಅಸಹ್ಯ ಉಂಟುಮಾಡುವ ಮಾನಸಿಕ ರೋಗ. ಪ್ರವಾಸಿಗಳಂತೆ ಅವರೂ ಬರಲಿ, ಅವರಿಗೆ ಸದಾ ಸ್ವಾಗತವಿದೆ. ಆದರೆ ಪೌರತ್ವ ನೀಡುವುದು ಆ ಬೇರೆ ದೇಶಗಳಿಗೆ ಇವರು ಬದ್ಧರಾಗಿರಬೇಕಾಗಿಲ್ಲವೆಂದು ಹೇಳಿದಂತಾಗುತ್ತದೆ. ನಮ್ಮ ದೇಶದ ಪ್ರಜೆಗಳಿಂದ ಇಂಥದನ್ನೇ ಏನು ನಾವು ನಿರೀಕ್ಷಿಸುವುದು? ಡಾಲರಿನ ಮೋಹವು ದೇಶದ ಬಗೆಗಿನ ಗೌರವಕ್ಕಿಂತಲೂ ಹೆಚ್ಚಿನ ಸ್ಥಾನ ಪಡೆಯುವುದು ನಾಚಿಕೆಗೇಡಿನ ಸಂಗತಿ.

೨೦-೦೧-೨೦೦೮




## ಹೀಗೊಂದು ಕಾರ್ಯಕ್ರಮ

ಹೌದು, ಹೀಗೊಂದು ಕಾರ್ಯಕ್ರಮ ನಮ್ಮೂರಲ್ಲಿ ಇತ್ತೀಚೆಗೆ ಜರುಗಿತು. ಕಾರ್ಯಕ್ರಮ ಜನಕ್ಕೆ ನೋಡಲೂ ಚಂದ ಮತ್ತು ಕೇಳಲು ಮತ್ತೂ ಸುಂದರ. ಆದರೆ ಈ ಕಾರ್ಯಕ್ರಮದ ವೈಶಿಷ್ಟ್ಯವೇ ಬೇರೆಯಾಗಿತ್ತು. ನೋಡಲು ಬಂದ ಜನ ಸಂತೋಷಪಡುವ ಬದಲು ಮುಜುಗರಪಟ್ಟುಕೊಳ್ಳುವಂತಹದಾಗಿತ್ತು. ಅದುವೇ ಪುಸ್ತಕ ಬಿಡುಗಡೆ ಕಾರ್ಯಕ್ರಮ.

ಪುಸ್ತಕ ಬಿಡುಗಡೆ ಎಂಬುದು ಇಂದಿನ ಬಹುಪಾಲು ಯುವ ಬರಹಗಾರರನ್ನು ಕಾಡಿಸುತ್ತಿರುವ ಭ್ರಮೆ ಎನ್ನಬಹುದು. ಕಿರಿಯರಂತೆ ಹಿರಿಯರು ಕೂಡ ಈ ಪಿಡುಗಿನಿಂದ ಬಿಡುಗಡೆ ಹೊಂದಿಲ್ಲವೆಂದುಕೊಳ್ಳಲು ಅಲ್ಲಲ್ಲಿ ನಡೆಯುವ ಅವರ ಪುಸ್ತಕ ಬಿಡುಗಡೆ ಕಾರ್ಯಕ್ರಮಗಳೇ ಸಾಕ್ಷಿ. ಹಳೆಯ ಗಾದೆಯಂತೆ 'ಅಜ್ಜಿ ನೂತದ್ದೆಲ್ಲ ಮೊಮ್ಮಗನ ಉಡಿದಾರವಾಯಿತು' ಎಂಬಂತೆ ಪುಸ್ತಕ ಪ್ರಕಟಣೆಯೇ ಒಂದು ದೊಡ್ಡ ಹೊರೆಯಾಗಿರುವಾಗ ಇನ್ನು ಅದನ್ನು ಮಾರಾಟ ಮಾಡುವುದು ಸುಲಭದ ಕೆಲಸವಲ್ಲ. ಅದಕ್ಕಾಗಿ ಅತಿ ಕಡಿಮೆ ಖರ್ಚಿನ ಪ್ರಚಾರ ಮಾಧ್ಯಮವೆಂದರೆ 'ಪುಸ್ತಕ ಬಿಡುಗಡೆ' ಕಾರ್ಯಕ್ರಮ ಹಮ್ಮಿಕೊಳ್ಳುವುದು. ಹತ್ತಿರದ ಗಣ್ಯರನ್ನು ಅಥವಾ ಪರಿಚಿತರನ್ನು ಅತಿಥಿಗಳಾಗಿ ಕರೆದು ಅವರಿಂದ ಪುಸ್ತಕ ಬಿಡುಗಡೆ ಮಾಡಿಸಿ ನಾಲ್ಕು ಹೊಗಳಿಕೆಯ ಮಾತು ಕೇಳುವುದು ಒಂದು ಪದ್ಧತಿಯಾಗಿದೆ. ಇಂಥ ಒಂದು ಕಾರ್ಯಕ್ರಮದಲ್ಲಿ ಸ್ವತಃ ಲೇಖಕನೇ ಪ್ರಕಾಶಕನಾಗಿ ಕೈಯಿಂದ ಖರ್ಚುಮಾಡಿ ಮುದ್ರಣ ಮಾಡಿಸಿದ ತನ್ನ ಎರಡು ಪುಸ್ತಕಗಳ ಬಿಡುಗಡೆ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದ ಕಾರ್ಯಕ್ರಮಕ್ಕೆ ಯಾರಾದರೂ ಅತಿಥಿಗಳು ಬೇಕಲ್ಲ! ಹತ್ತಿರದ ತೋಟದಲ್ಲಿರುವ ಒಬ್ಬಳನ್ನು (ಅವಳೂ ತಾನು ಲೇಖಕಿ ಎಂದುಕೊಂಡವಳು) ಹಿಡಿದು ತಂದಿದ್ದ. ಪುಸ್ತಕ ಬಿಡುಗಡೆ ಮಾಡಿ ಮಾತಿಗೆ ನಿಂತಾಗಲೇ ಪ್ರಾರಂಭವಾಯಿತು ಜರೆಯುವ ಶೈಲಿ. ಈ ಎರಡೂ ಪುಸ್ತಕಗಳ ಮುಖಚಿತ್ರ ಚೆನ್ನಾಗಿಲ್ಲ, ಮುನ್ನುಡಿಯಂತೂ ಸ್ವಲ್ಪವೂ ಚೆನ್ನಾಗಿಲ್ಲ, ಮುಖಪುಟ ಚಿತ್ರ ಒಳಗಿರುವ ಕಥೆಗಳಿಗೆ ಸಂಬಂಧಿಸಿವೆ; ಹೀಗಿರಬಾರದು ಎಂದೆಲ್ಲ ಹೇಳುತ್ತ ನಡು-ನಡುವೆ ಅಕ್ಕಮಹಾದೇವಿಯ ವಚನಗಳನ್ನು ಉದ್ಧರಿಸಿದರು. ಪುಸ್ತಕ ಬಿಡುಗಡೆ ಮಾಡಿದವರು ಪುಸ್ತಕದ ಪರಿಚಯದ ನೆಪದಲ್ಲಿ ನಾಲ್ಕು ಒಳ್ಳೆಯ ಮಾತನಾಡಬೇಕೇ ಹೊರತು ಉಂಡ ಮನೆಗೆ ಗಳ ಎಣಿಸಲು ಬಂದ ಕಾಗೆಯಂತೆ ತನ್ನ ಪರಿಧಿಯನ್ನು ಮೀರಿ ಮಾತನಾಡಬಾರದು, ಎನ್ನಿಸಿತು.

ನಮ್ಮಲ್ಲಿ ಇಂದು ಅತಿಥಿಯಾಗಿ ಕರೆದರೆ ಸಾಕು ತಾವೇ ಮಹಾನ್ ಪಂಡಿತರೆಂದುಕೊಂಡು ಲೇಖಕರಿಗೆ ಆಶೀರ್ವಾದ ಮಾಡುವಂತೆ ಸಭೆಯಲ್ಲಿ ಮೆರೆಯುವವರೇ ಹೆಚ್ಚು. ಇವರಿಗೆ ಕವಿಕುಲ ತಿಲಕರು ಎಂದು ಹೆಸರು. ಇದೊಂದು ಇವತ್ತಿನ ಶಾಬ್ದಿಕ ರಾಜಕಾರಣದ 'ಕಲ್ಚರಲ್ ರಿಚುವಲ್' ಆಗಿಬಿಟ್ಟಿದೆ. ಈ ಥರದ ರಿಚುವಲ್‌ಗಳಿಂದ ಅನುಕೂಲಗಳಾಗುವುದಕ್ಕಿಂತ ಅಪಾಯಗಳಾಗುವುದೇ ಜಾಸ್ತಿ. ಇನ್ನು ಪರಿಸರವೂ ಕೂಡ ಮಹತ್ವದ ಪಾತ್ರ ವಹಿಸುತ್ತದೆ. 'ಪುಸ್ತಕ ಬಿಡುಗಡೆ' ಕಾರ್ಯಕ್ರಮ ಒಂದು ಗ್ರಾಮೀಣ ಪ್ರದೇಶದಲ್ಲಿದ್ದರೆ ಲೇಖಕನ ತೆಗಳಿಕೆ ಗ್ರಾಮದಲ್ಲಿ ಆತನ ವರ್ಚಸ್ಸು ಕುಗ್ಗಿಸಲು ಕಾರಣವಾಗುತ್ತದೆ.

ಪುಸ್ತಕ ಬಿಡುಗಡೆ ಎಂದರೆ ಪುಸ್ತಕ ವಿಮರ್ಶೆಯಲ್ಲ; ಪುಸ್ತಕದ ಪರಿಚಯ ಮಾಡಿಕೊಡುವುದು. ಪುಸ್ತಕ ಬಿಡುಗಡೆ ಮಾಡುವ ಅತಿಥಿ ತಿಳಿದಿರಬೇಕಾದ ಕೆಲವು ಅಲಿಖಿತ ನಿಯಮಗಳಿವೆ. ಅವುಗಳಲ್ಲಿ ಕೆಲವು : ಹೊಸಬರ ಪುಸ್ತಕಗಳನ್ನು ಕುರಿತು ಬೆನ್ನುತಟ್ಟುವ ರೀತಿ ಇರಬೇಕು; ಮಾತಿನಲ್ಲಿ ಕಟುವಿಮರ್ಶೆ ಇರಬಾರದು. ಪರಿಚಯವೇ ಬೇರೆ ವಿಮರ್ಶೆಯೇ ಬೇರೆ ಎಂಬ ಪರಿಜ್ಞಾನ ಅತಿಥಿಗಿರ




ಬೇಕು; ಪರಿಚಯ ದೀರ್ಘವಾಗಿರಬಾರದು. ಹೊಗಳಿಕೆಯೂ ಅತಿಯಾದರೆ ಅದು ತೆಗಳಿಕೆಯ ಮತ್ತೊಂದು ಮುಖವೆನ್ನಲಡ್ಡಿಯಿಲ್ಲ; ಮತ್ತು ಲೇಖಕನಿಗೆ ವಸ್ತುನಿಷ್ಠ ಸಲಹೆ ಅಥವಾ ಆತ್ಮೀಯ ಉಪದೇಶ ವೇನಾದರೂ ಹೇಳುವುದಿದ್ದರೆ, ಕಾರ್ಯಕ್ರಮದ ನಂತರ ಪ್ರತ್ಯೇಕವಾಗಿ, ಲೇಖಕನಿಗೆ ಹೇಳಬೇಕೇ ಹೊರತು ಸಭೆಯಲ್ಲಲ್ಲ.

*ಜೇವರ್ಗಿ* **ರೋಹಿಣಿ ಚ. ಕುಲಕರ್ಣಿ**

'ಹೊಸತು' ವಿಶೇಷಾಂಕ ವಿಶೇಷಗಳ ಭಂಡಾರವನ್ನೇ ಹೊತ್ತು ತಂದಿದೆ. 'ಸಂಪಾದಕೀಯ'ದ ಚಾಟಿ ಏಟುಗಳು ಮುಟ್ಟುವವರಿಗೆ ಮುಟ್ಟಿದರೆ ಕಿಂಚಿತ್ ಬದಲಾವಣೆ ಆದೀತು ಎಂದು ನನ್ನ ಭಾವನೆ.

ಅಮೆರಿಕೆಯ ಸಮಯ ಸಾಧಕ ನರಿಬುದ್ಧಿಯ ಬಗ್ಗೆ ಸೂಚ್ಯವಾಗಿ ಹೇಳಿರುವ ಮಾತುಗಳು ನಾಳೆ ನಿಜ ಆಗಬಹುದು. ಇರಾಕ್ ಸದೆಬಡಿದಂತೆ ಪಾಕಿಸ್ತಾನವನ್ನೂ ಸ್ನೇಹದಿಂದಲೇ ಸದೆಬಡಿಯಲು ಈಗಾಗಲೇ ಸಿದ್ಧತೆಗಳು ಮುಗಿದಿದ್ದು ಉಗ್ರರ ದಮನದ ನೆಪದಲ್ಲಿ ವಿದೇಶೀ ಸೈನಿಕರು ಪಾಕಿ ನೆಲದಲ್ಲಿ ಓಡಾಡುತ್ತಿದ್ದಾರೆ. ಹೆಚ್ಚಿನ ಸಪ್ಲೈ ಬರುವ ದಿನಗಳು ದೂರವಿಲ್ಲ. ಭಾರತದ ಮೈಯೆಲ್ಲಾ ಕಣ್ಣಾಗಿರಬೇಕಾದದ್ದು ಅನಿವಾರ್ಯವಾಗಿದೆ.

ಒಂದು ದೇಶದ ಸಮಗ್ರತೆಯನ್ನು ಒಡೆಯಲು ತೀರಾ ಸರಳವಾದ ಧಾರ್ಮಿಕ ನಂಬುಗೆಗಳನ್ನು ಬುಡಮೇಲು ಮಾಡುವ ಬಟ್ಟೆ ಹಾವನ್ನು ಬಿಡುವ ಕೆಲಸ ದೊಡ್ಡಣ್ಣ ನೆನಿಸಿಕೊಂಡ ದೇಶ ಸದಾಕಾಲವೂ ಮಾಡುತ್ತಲೇ ಬಂದಿದೆ. ಅದನ್ನು ವೈಜ್ಞಾನಿಕ ತಿಳಿವಳಿಕೆ ಎಂದು ಬಿತ್ತಲಾಗುತ್ತಿದೆ. ಮೂರು ವರ್ಷಗಳ ಕೆಳಗೆ ಅಂತರಿಕ್ಷದಲ್ಲಿನ ಉಪಗ್ರಹವೊಂದರ ಸಹಾಯದಿಂದ ತೆಗೆದ ಭಾರತ ಮತ್ತು ಶ್ರೀಲಂಕಾ ನಡುವಿನ 'ಆಡಮ್ಸ್ ಬ್ರಿಜ್' (ರಾಮಸೇತು !) ಚಿತ್ರಗಳು ಇ-ಮೇಲ್ ಮೂಲಕ ಲಕ್ಷಾಂತರ ಜನರನ್ನು ತಲುಪಿ ಅಸ್ತಿತ್ವದಲ್ಲೇ ಇಲ್ಲದ ಹೊಸ ಸಮಸ್ಯೆಯೊಂದನ್ನು ಸೃಷ್ಟಿಸಲು ಕಾರಣವಾಗಿದೆ. ಅಮೆರಿಕಾ ಮೂಲದ ಕೆಲವು ಗುಪ್ತಚರವರ್ಗದವರು ಗುಟ್ಟಾಗಿ ಸೃಷ್ಟಿಸಿದ ಈ ಚಿತ್ರಗಳನ್ನು ಹತ್ತಿರದಿಂದ ನೋಡಿದರೆ ಅದು ಪರದೆಯೊಂದರ ಮೇಲೆ ಬಿಂಬಿಸಿದ ಸ್ಲೈಡ್‌ಗಳದ್ದು ಎಂದು ತಿಳಿಯುತ್ತದೆ. ಅವು ಮೇಲುನೋಟದ ಚಿತ್ರಗಳೇ ವಿನಾ ನೀರಿನಾಳದಲ್ಲಿ ಏನಿದೆ ಎನ್ನುವುದರ ಚಿತ್ರಗಳಲ್ಲ! ಧರ್ಮದ ಅಫೀಮನ್ನು ತಿಂದ ಮನಸ್ಸುಗಳನ್ನು ದಿವ್ಯಾಂಧತೆಯಿಂದ ಪಾರು ಮಾಡುವುದೆಂತು ? ಸುಳ್ಳು ಸುಳ್ಳೇ ಹೆಣೆದ ಕಥೆಯೊಂದು ಈಗ ಪಾರ್ಲಿಮೆಂಟನ್ನು ಅಲ್ಲಾಡಿಸುತ್ತಿದೆ.

ಶ್ರೀಕೃಷ್ಣನ ದಿವ್ಯರೂಪಕ್ಕೆ ಪೂಜೆ ಸಲ್ಲಿಸುವುದೇ ದೊಡ್ಡ ಕಥೆಯಾಗಿ ಪತ್ರಿಕೆಗಳು ಮತ್ತು ಮಾಧ್ಯಮಗಳ ಪುಟಗಳನ್ನು ತಿನ್ನುತ್ತಿರುವುದು, ಅಷ್ಟಮಠದ ದಿವ್ಯಾಂಧ ಗ್ರಹಗಳು ಮಾಧ್ವ ಸರೋವರವೇ ಪೆಸಿಫಿಕ್ ಸಾಗರಕ್ಕಿಂತ ದೊಡ್ಡದು ಎಂಬ ದಿವ್ಯ ಕಲ್ಪನಾ ಲೋಕದಲ್ಲಿ ವಿಹರಿಸುತ್ತಿರುವುದು ನೋಡಿದಾಗ ನಮ್ಮ ಜನಕ್ಕೆ ಮಾಡಲು ಬೇರೆ ಕೆಲಸವೇ ಇಲ್ಲವೇ ಎನಿಸುತ್ತಿದೆ. ಪೂಜೆ ಎಂಬ ಮಾತಿಗೆ ಕುವೆಂಪು ಅವರ 'ಪ್ರಕೃತಿ ಪೂಜೆ' ಕವನ ಸಾಕ್ಷಿ ಯಾಗಬೇಕು. 'ಗುಡಿ, ಚರ್ಚು, ಮಸಜೀದಿಗಳ ಬಿಟ್ಟು ಹೊರಬಂದು ವಿಜ್ಞಾನ ದೀವಿಗೆಯನ್ನು ಹಿಡಿಯುವ' ಕಾರ್ಯಪಡೆ ನಿರ್ಮಾಣವಾಗಬೇಕು. ಗಂಟೆ ಹೊಡೆಯುವುದು, ಮಂಗಳಾರತಿ

೮ನೇ ಪುಟಕ್ಕೆ

### ಬ್ಯಾಕ್ ವಾಟರು

ನಮ್ಮ ಶಾಲೆ ಕಾನ್ವೆಂಟ್ ಶಾಲೆ
ಎದುರಿನ ಶಾಲೆ ಕನ್ನಡ ಶಾಲೆ
ನಮ್ಮಲ್ಲಿ ಮಾತು ಟಿಸ್‌ಪುಸ್
ಅವರ ಮಾತು ಅಕ್ಕ ಅಣ್ಣ
ನಮ್ಮ ಕೈಯಾಗ ಹ್ಯಾರಿ ಪಾಟರ್
ಅವರ ಕೈಯಾಗ ಚಂದಮಾಮ
ನನ್ನ ಮನಸಿಗೆ ಅನಿಸುತ್ತದೆ
ಅವರದು ಜೋಗ ಜಲಪಾತ
ನಮ್ಮದು ಬ್ಯಾಕ್ ವಾಟರ್

*ಧಾರವಾಡ* **ಸಿರಿ ಚೈತ್ರ**




ಸಂಪುಟ-೯ ಸಂಚಿಕೆ-೭ ಫೆಬ್ರವರಿ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@dataone.in**
**website : www.navakarnatakabooks.com**

# ಸಮಾಜವಾದಿ ಚಳುವಳಿ

**ಸಂಪಾದಕೀಯ**

**ಕಾ**ರ್ಲ್ ಮಾರ್ಕ್ಸ್‌ರ ಜೀವನಚರಿತ್ರೆಗಳ ಪೈಕಿ ಅವರ ಕಿರಿಯ ಸ್ನೇಹಿತ ಮತ್ತು ಸಹ-ಹೋರಾಟಗಾರ ಫ್ರಾನ್ಜ್ ಮೇರಿಂಗ್ ಬರೆದದ್ದು ಅಪೂರ್ವವಾಗಿದೆ. ೧೯೧೬ರಲ್ಲಿ ಅವರಿಗೆ ರೋಸಾ ಲುಕ್ಸೆಂಬರ್ಗ್ ಬರೆದ ಒಂದು ಪತ್ರದ ಕೆಲವು ಸಾಲುಗಳಿವು: ''ನಿನ್ನ ಅದ್ಭುತ ಲೇಖನಿಯಿಂದ ಬಂದ ಒಂದೊಂದು ಸಾಲೂ ದುಡಿಯುವ ಜನರಿಗೆ ಸಂದೇಶವೊಂದನ್ನು ಇತ್ತಿದೆ : ಸಮಾಜವಾದವು ಕೇವಲ ಹೊಟ್ಟೆ-ಬಟ್ಟೆಯ ಪ್ರಶ್ನೆಯಲ್ಲ; ಅದೊಂದು ಸಾಂಸ್ಕೃತಿಕ ಚಳುವಳಿ, ಮಹತ್ತರವಾದ ಹಾಗೂ ಹೆಮ್ಮೆಯ ಜಗತ್ಸಿದ್ಧಾಂತ, ಎಂಬುದು ಆ ಸಂದೇಶ.'' ರವಿಶಂಕರ ಎಂಬ ಸಾಧು ಮಹಾರಾಜನು ಸಮಾಜವಾದವನ್ನು ತೆಗಳಿ ಅಪಲಪಿಸಿದರೆ ಅದರಿಂದ ಯಾರೂ ವಿಚಲಿತರಾಗುವುದಿಲ್ಲ. ಆದರೆ ಆ ಸಿದ್ಧಾಂತದ ವಿರುದ್ಧವಾಗಿ ದೇಶದ ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆಯೊಂದು ದಾಖಲಾದಾಗ ಪ್ರಜ್ಞಾವಂತರು ಮತ್ತು ಪ್ರಜಾಪ್ರಭುತ್ವದಲ್ಲಿ ನಂಬಿಕೆಯುಳ್ಳವರು ಅಚ್ಚರಿಯಿಂದ ಕಣ್ಣುಬಿಡುವುದು ಸಹಜವಾಗಿರುತ್ತದೆ.

ನಮ್ಮ ದೇಶದ ಸಂವಿಧಾನಕ್ಕೆ ೪೨ನೆಯ ತಿದ್ದುಪಡಿ ತಂದಾಗ ಒಂದು ಧ್ಯೇಯ ವಾಕ್ಯವೆಂಬಂತೆ ''ಸಮಾಜವಾದಿ'' ಎಂಬ ಪದವನ್ನು ಸಂವಿಧಾನದ ಪೂರ್ವಾಂಗದಲ್ಲಿ ಸೇರಿಸಲಾಯಿತು. ಸಾರ್ವಭೌಮತ್ವ, ಪ್ರಜಾಪ್ರಭುತ್ವಗಳಂತೆ ಸಮಾಜವಾದಿ ಆಶಯವೂ ದೇಶದ ಆಗುಹೋಗುಗಳನ್ನು ನಿರ್ಧರಿಸುವ ಒಂದು ಸೂತ್ರವೆಂದು ಅದರಿಂದ ನಿರ್ದೇಶಿಸಲಾಯಿತು. ಸಮಾಜವಾದವೆಂದರೆ ಏನೆಂಬುದನ್ನು ಅಲ್ಲಿ ವಿವರಿಸಲಾಗಿಲ್ಲ. ಹಾಗೆ ನೋಡಿದರೆ ಸಾರ್ವಭೌಮತ್ವವನ್ನೂ ಅಲ್ಲಿ ವ್ಯಾಖ್ಯಾನಿಸಿಲ್ಲ. ಆದ್ದರಿಂದಲೇ ಅದನ್ನು ಕಳೆದುಕೊಳ್ಳುವಂತಹ ನೀತಿಯನ್ನು ವಾಜಪೇಯಿ-ಮನಮೋಹನ ಸಿಂಗ್ ಸರ್ಕಾರಗಳು ಅನುಸರಿಸಿದಾಗ ಅವು ಸಂವಿಧಾನ ಬಾಹಿರವೆಂದು ಹೇಳಲಾಗುತ್ತಿಲ್ಲವೆಂದು ತೋರುತ್ತಿದೆ. ಸಮಾಜವಾದವೆಂದರೆ ಸಮಾನತೆ ಎಂಬುದು ಬಹಳ ಸರಳೀಕೃತವಾದ ವಿವರಣೆ. ಐದು ಬೆರಳುಗಳೂ ಸಮವಾಗಿಲ್ಲವಾದ್ದರಿಂದ ಸಮಾಜದಲ್ಲಿ ಸಮಾನತೆಯನ್ನು ಅಪೇಕ್ಷಿಸಬಾರದೆಂದು ಹೇಳುವ ಜನರಿದ್ದಾರೆ; ಆದರೆ ಬೆರಳುಗಳನ್ನು ಸಮವಾಗಿಸಿ ಕೈಯಿನ ಕ್ಷಮತೆಯನ್ನು ನಾಶಮಾಡುವುದು ಸಮಾಜವಾದದ ಆಶಯವಲ್ಲ. ಉತ್ಪಾದನೆಯ ಸಾಧನೆಗಳು ಸಮುದಾಯದ ಆಸ್ತಿಯಾಗಿರಬೇಕೆಂಬುದು ಸಮಾಜವಾದದ ಪ್ರಮುಖ ಸೂತ್ರ. ಹಾಗಿಲ್ಲದೆ ಅವು ಕೆಲವು ವ್ಯಕ್ತಿಗಳ ಹತೋಟಿಯಲ್ಲಿದ್ದರೆ, ಉತ್ಪಾದನಾ ಸಂಬಂಧಗಳು ಅಥವಾ ಉತ್ಪಾದಕ ಮತ್ತು ಮಾಲಿಕರ ನಡುವಣ ಸಂಬಂಧಗಳು ವೈರುಧ್ಯದಿಂದ ಕೂಡಿರುತ್ತವೆ. ಸರ್ವಾಂಗೀಣ ಬೆಳವಣಿಗೆಗೆ ಇದು ಮಾರಕವಾದ್ದು. ನಿಜಾರ್ಥದಲ್ಲಿ ಪ್ರಜಾಪ್ರಭುತ್ವವು ನೆಲೆಸಲು ಇಂತಹ ವ್ಯವಸ್ಥೆಯು ಅಡೆತಡೆಗಳನ್ನು ಒಡ್ಡುತ್ತದೆ ಮತ್ತು ಸಮಾಜದ ವಿಕಾಸವು ಅಪೇಕ್ಷಿತ ಮಟ್ಟದಲ್ಲಿರುವುದಿಲ್ಲ. ನಿತ್ಯೋಪಯೋಗಿ ವಸ್ತುಗಳನ್ನು ಖಾಸಗಿ ವ್ಯಕ್ತಿಗಳ ಉಪಭೋಗಕ್ಕೆ ನೀಡದೆ ಅವನ್ನೆಲ್ಲಾ ಸಮುದಾಯದ ಆಸ್ತಿಯನ್ನಾಗಿ ಪರಿವರ್ತಿಸುವುದು ಸಮಾಜವಾದವೆಂಬ ಕುಹಕ ಮಾತುಗಳನ್ನು ಬಾಲಿಶವೆಂದು ನಿರಾಕರಿಸುವುದು ಸೂಕ್ತ; ಏಕೆಂದರೆ, ಉಪಭೋಗಕ್ಕೆ ಲಭ್ಯವಾದ ಸರಕು ಸ್ವತಃ ಉತ್ಪಾದನಾ ಸಾಧನವಾಗುವುದಿಲ್ಲ. ಅಂತಹ ಸರಕುಗಳನ್ನೆಲ್ಲಾ ಯಾರಾದರೂ ಸ್ವಾಧೀನ ಮಾಡಿಕೊಳ್ಳುವಂತಹ ಸನ್ನಿವೇಶ ವಿದ್ದರೆ ಅದಕ್ಕೆ ಪರಿಹಾರ ದೊರಕುವುದು ಸಮಾಜವಾದದಲ್ಲಿ. ಅಂದರೆ, ಪ್ರಮುಖವಾಗಿ ಸಮಾಜವಾದವು ಉತ್ಪಾದನೆ ಮತ್ತು ವಿತರಣೆಯ ವ್ಯವಸ್ಥೆಯನ್ನು ಕುರಿತಾದದ್ದು. ಒರಿಸ್ಸಾದಲ್ಲಿರುವ ಕಬ್ಬಿಣದ ಅದಿರನ್ನು ದೇಶದ ಜನರ ಸ್ವತ್ತಾಗಿಸಬೇಕೋ ಅಥವಾ ಅದನ್ನು ದಕ್ಷಿಣ ಕೊರಿಯಾದ ಯಾವನೋ ಉದ್ಯಮಿಗೆ ನವೀನ್ ಪಟ್ನಾಯಕ್ ಹಸ್ತಾಂತರಿಸುವ ಅಧಿಕಾರ ಹೊಂದಿರಬೇಕೋ ಎಂಬುದು ಸಮಾಜವಾದಿ ಆಶಯದಲ್ಲಿ ಮೂಲಭೂತ ವಿಷಯವಾಗುತ್ತದೆ. ಇದು ಕೇವಲ ಒಂದು ಉದಾಹರಣೆ; ಅಂತಹ ಸಾವಿರ ಉದಾಹರಣೆಗಳು ದಿನನಿತ್ಯದ ಜೀವನದಲ್ಲಿ ನಮಗೆ ಕಾಣಸಿಗುತ್ತವೆ.

ಸಮಾಜವಾದಿ ಆಶಯವನ್ನು ಸಂವಿಧಾನಕ್ಕೆ ಸೇರ್ಪಡೆಗೊಳಿಸಿದ್ದು ೪೨ನೆಯ ತಿದ್ದುಪಡಿ; ಅದು ತುರ್ತು ಪರಿಸ್ಥಿತಿಯ ಸನ್ನಿವೇಶದಲ್ಲಿ ಅಂಗೀಕೃತವಾದ ತಿದ್ದುಪಡಿ ಮತ್ತು ಸಂವಿಧಾನದ ಮೂಲ ಆಶಯಗಳಿಗೆ ಅದು ವಿರೋಧವಾಗಿದೆ; ಆದ್ದರಿಂದ ಅದನ್ನು ಅಸಂವೈಧಾನಿಕವೆಂದು ಘೋಷಿಸಬೇಕೆಂದು ''ಗುಡ್ ಗವರ್ನೆನ್ಸ್ ಇಂಡಿಯ ಫೌಂಡೇಶನ್'' ಎಂಬ ಸಂಸ್ಥೆಯು ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಿದೆ. ''ಸಮಾಜವಾದಿ'' ಆಶಯದಂತೆ ''ಧರ್ಮನಿರಪೇಕ್ಷತೆ''ಯ ಆಶಯ ಸಹ ೪೨ನೆಯ ತಿದ್ದುಪಡಿಯಲ್ಲಿ ಸೇರಿದ್ದಿತು. ಆದ್ದರಿಂದ ನ್ಯಾಯಾಲಯವು ಇವೆರಡನ್ನೂ ''ಸಂವಿಧಾನದ ಮೂಲ ಸ್ವರೂಪ''ಕ್ಕೆ ಹೊರತಾದುವೆಂದು ಘೋಷಿಸಬೇಕೆಂದು ಸದರಿ ಫೌಂಡೇಶನ್ ಮನವಿ ಮಾಡಿಕೊಂಡಿದೆ.

ಮೊದಲಿಗೆ, ಈ ಫೌಂಡೇಶನ್ನಿನ ಪೂರ್ವಾಪರಗಳನ್ನು ಪರೀಕ್ಷಿಸುವುದು ಅಪ್ರಸ್ತುತವಲ್ಲ. ಅನೇಕ ಸ್ವಯಂ ಸೇವಾಸಂಸ್ಥೆಗಳಂತೆ ಇದೂ ಸಹ ದೇಶ-ವಿದೇಶಗಳಿಂದ ಹಣದ ಹೊಳೆಯನ್ನು ಹರಿಸಿಕೊಳ್ಳುತ್ತದೆ. ಆ ಹಣದಿಂದ ಯಾರ ಸೇವೆ ನಡೆಯುತ್ತದೆ ಎಂಬುದು ನಿಗೂಢವಾದ್ದರಿಂದ ಅದನ್ನು ಪ್ರಸ್ತಾಪಿಸಿ ಪ್ರಯೋಜನವಿಲ್ಲ. ಯಾವ ಹಿತಾಸಕ್ತಿಗಳ ಪ್ರೇರಣೆಯಿಂದ ಇಂತಹ ಮೊಕದ್ದಮೆಯು ನ್ಯಾಯಾಲಯದ ಮುಂದೆ ಬಂದಿದೆಯೆಂಬುದನ್ನು ವಿವರಿಸಿ ಹೇಳುವ ಅಗತ್ಯವೂ ಇಲ್ಲ. ಹಿರಿಯ ಕಮ್ಯುನಿಸ್ಟ್ ನಾಯಕ ಶ್ರೀ ಜ್ಯೋತಿ ಬಸು ಅವರು ಸಮಾಜವಾದಿ ಆಕಾಂಕ್ಷೆಗಳ ಬಗ್ಗೆ ಕೆಲವು ವಿಮರ್ಶಾತ್ಮಕ ಮಾತುಗಳನ್ನು ಹೇಳಿದ ಸಂದರ್ಭದಲ್ಲೇ ಇಂತಹ ಮೊಕದ್ದಮೆಯು ದಾಖಲಾಗಿರುವುದು ಕೇವಲ ಕಾಕತಾಳೀಯವೋ ಅಥವಾ ಜ್ಯೋತಿ ಬಸು ಅವರ ಮಾತಿನ ದುರ್ಬಳಕೆಗೆ ಸನ್ನಾಹವೋ ಎಂಬುದನ್ನು ತಿಳಿಯಬೇಕು. ಮಾನ್ಯ ಬಸು ಅವರು ಸಮಾಜವಾದವನ್ನು ತಿರಸ್ಕರಿಸಿದ್ದಾರೆ ಎಂಬಂತೆ ಕೆಲವು ಮಾಧ್ಯಮಗಳು ಪ್ರತಿಬಿಂಬಿಸಿವೆ. ಅವರ ಹೇಳಿಕೆಯನ್ನು ಪ್ರಶ್ನಿಸಬಹುದು; ಆದರೆ ಅವರ ಎಪ್ಪತ್ತು ವರ್ಷಗಳ ಹೋರಾಟದ ಗುರಿಯನ್ನು ಒಮ್ಮೆಲೇ ನಿರಾಕರಿಸಿದ್ದಾರೆಂದು ಟೀಕಿಸುವುದು ಅಬದ್ಧ. ಸಮಾಜವಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಸದ್ಯದ ಸಾಂಸ್ಥಿಕ ರಚನೆಯಲ್ಲಿ ಮುಗ್ಗಟ್ಟುಗಳಿವೆಯೆಂದು ಅವರು ಬೆರಳುಮಾಡಿ ತೋರಿಸಿದ್ದಾರೆಯೇ ವಿನಾ ಸಮಾಜವಾದಿ ಆಶಯವನ್ನು ಮತ್ತು ವ್ಯವಸ್ಥೆಯನ್ನು ಅಸಾಧ್ಯವೆಂದು ತಳ್ಳಿಹಾಕಿಲ್ಲ. ಭಾರತದ ಒಕ್ಕೂಟದ ಸಂದರ್ಭದಲ್ಲಿ ರಾಜ್ಯಗಳು ಸ್ವಾಯತ್ತವಾಗಿ ಸಮಾಜವಾದದ ಧೋರಣೆಯನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲವೆಂಬುದು ಅವರ ಮಾತಿನ ತಿರುಳು. ಅದರ ಅಂತರಾರ್ಥವು ಬಂಡವಾಳಶಾಹಿಯನ್ನು ಅನಿವಾರ್ಯವಾಗಿ ಬೆಳೆಸಬೇಕು ಎಂದಾಗುತ್ತದೆಯೇ ಎಂಬುದು ಜಿಜ್ಞಾಸೆಗೆ ಒಳಗಾಗಿದೆ. ೧೯೫೦ ರಿಂದಲೂ ನಮ್ಮ ದೇಶವು

ಒಕ್ಕೂಟದ ಸ್ವರೂಪವನ್ನು ಹೊಂದಿದೆ; ಅದೇನೂ ಈಗ ಥಟ್ಟನೆ ನಮ್ಮ ಮುಂದೆ ಬಂದಿರುವ ಘಟನೆಯಲ್ಲ. ನವ ಉದಾರವಾದಿ ಧೋರಣೆಯನ್ನು ಅನುಸರಿಸುವುದು ಒಕ್ಕೂಟದ ಸಂದರ್ಭದಲ್ಲಿ ಕೂಡ ಸಮಾಜವಾದಿ ಹಾದಿಯಲ್ಲ. ಹಾಗಿದ್ದಿದ್ದರೆ ಭೂಸುಧಾರಣೆಯತ್ತ ಗಮನಹರಿಸಬೇಕಾಗಿರಲಿಲ್ಲ. ಒಕ್ಕೂಟದ ಒಂದು ರಾಜ್ಯದಲ್ಲಿ ಸಮಾಜವಾದವು ಅಸ್ತಿತ್ವಕ್ಕೆ ಬರಲಾರದೆಂಬುದು ಖಚಿತವಾದರೆ ಅಂತಹ ಸಂದರ್ಭದಲ್ಲಿ ಪ್ರತ್ಯೇಕ ರಾಜ್ಯ ರಚನೆಗಾಗಿ ಹೋರಾಟ ನಡೆಸಬೇಕೇ ಎಂಬ ಪ್ರಶ್ನೆಯನ್ನು ತಳ್ಳಿಹಾಕುವಂತಿಲ್ಲ. ಭಾರತವು ಹಲವು ರಾಷ್ಟ್ರೀಯತೆಗಳ ಸಂಘಾತವೆಂಬ ಅಂಶವು ಆಗಾಗ್ಗೆ ಪ್ರಸ್ತಾಪಕ್ಕೆ ಬಂದಿದೆ. ಏನೇ ಇರಲಿ, ಸಮಾಜವಾದಿ ವ್ಯವಸ್ಥೆಯ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಬಂಡವಾಳಶಾಹಿಯನ್ನು ಸದೃಢವಾಗಿ ನಿರ್ಮಿಸಬೇಕೆಂಬುದು ಸಮಾಜವಾದಿ ಹೋರಾಟದ ಭಾಗವಾಗುವುದಿಲ್ಲ. ಇನ್ನೊಂದು ಪ್ರಶ್ನೆಯಿದೆ: ಒಕ್ಕೂಟದ ಯಾವುದೋ ಒಂದು ರಾಜ್ಯದಲ್ಲಿ ಸಮಾಜವಾದದ ಸ್ಥಾಪನೆ ಸಾಧ್ಯವಿಲ್ಲವಾದ್ದರಿಂದ ಇಡೀ ಒಕ್ಕೂಟವನ್ನು ಆ ದಿಕ್ಕಿನಲ್ಲಿ ಕೊಂಡೊಯ್ಯುವುದು ಹೇಗೆ? ಅದಕ್ಕೆ ಎಂತಹ ಚಳುವಳಿಯ ರೂಪುಗೊಳ್ಳಬೇಕು? ಈ ಪ್ರಶ್ನೆಯನ್ನು ಹಾಕಿಕೊಳ್ಳದಿದ್ದರೆ ೧೯೨೦ರ ದಶಕದಲ್ಲಿ ಲಿಯಾನ್ ಟ್ರಾಟ್‌ಸ್ಕಿ ಪ್ರತಿಪಾದಿಸಿದ್ದುದನ್ನು ಮಾನ್ಯ ಮಾಡಬೇಕಾಗುತ್ತದೆ. ಪ್ರಪಂಚದ ಯಾವುದೋ ಒಂದು ದೇಶದಲ್ಲಿ ಆಂಶಿಕವಾಗಿ ಸಮಾಜವಾದಿ ವ್ಯವಸ್ಥೆಯು ನೆಲೆ ನಿಲ್ಲಲಾರದೆಂದು ಆತನ ವಾದವಾಗಿತ್ತು. ಹಾಗಿದ್ದರೆ ಕ್ರಾಂತಿಯ ಫಲಸ್ವರೂಪವಾದ ಸೋವಿಯೆತ್ ಪ್ರಭುತ್ವವನ್ನು ಅಳಿಸಿಹಾಕಿ ಬಂಡವಾಳಶಾಹಿಗೆ ಆಹ್ವಾನ ನೀಡಬೇಕೆ ಎಂದು ಟ್ರಾಟ್‌ಸ್ಕಿಯ ಸಿದ್ಧಾಂತವನ್ನು ಅಂದು ಪ್ರಶ್ನಿಸಲಾಗಿದ್ದಿತು. ಅಮೆರಿಕಾದ ಸಾರಥ್ಯದಲ್ಲಿ ಬಂಡವಾಳ ಶಾಹಿಯನ್ನು ಭಾರತದಲ್ಲಿ ಬೆಳೆಸಲು ಮನಮೋಹನ ಸಿಂಗ್-ಚಿದಂಬರಂ-ಅಹ್ಲುವಾಲಿಯ ಮುಂತಾದವರಿದ್ದಾರೆ; ಆ ಕೆಲಸಕ್ಕೆ ಶ್ರೀ ಜ್ಯೋತಿ ಬಸು ಮತ್ತು ಪಶ್ಚಿಮ ಬಂಗಾಳದ ಸರ್ಕಾರವು ಇಟ್ಟಿಗೆ ಹೊರಬೇಕಾಗಿಲ್ಲ. ಇದೆಲ್ಲದರ ಸಾರಾಂಶವಿಷ್ಟೆ: ನಮ್ಮ ಸಮಕಾಲೀನ ಪರಿಸ್ಥಿತಿಯಲ್ಲಿ ಚಳುವಳಿ ಏತಕ್ಕಾಗಿ ಮತ್ತು ಯಾವ ಸ್ವರೂಪದಲ್ಲಿ ಎಂಬುದು ಅತಿಮಹತ್ವದ ವಿಷಯವಾಗಿದೆ. ಬಂಡವಾಳಶಾಹಿಯನ್ನು ಬೆಳೆಸುವುದು ಎಂದರೆ ಕೇವಲ ಉದ್ಯಮದ ಕ್ಷೇತ್ರಕ್ಕೆ ಸೀಮಿತಗೊಳಿಸಿ ತಥಾಕಥಿತ ಅಭಿವೃದ್ಧಿಯನ್ನು ಸಾಧಿಸುವುದಲ್ಲ. ಉತ್ಪಾದಕ ಘಟಕಗಳಾದ ಕೈಗಾರಿಕೆಗಳು ಮಾತ್ರವೇ ಬಂಡವಾಳಶಾಹಿಯಡಿ ತಲೆಯೆತ್ತುವುದಿಲ್ಲ. ಭೂಕಬಳಿಕೆ, ಸಟ್ಟಾ ವ್ಯಾಪಾರ, ಸೇವಾಕ್ಷೇತ್ರದ ವ್ಯಾಪಕತೆ, ಮಾರುಕಟ್ಟೆಯ ದಾಂಧಲೆ, ಹಣಕಾಸಿನ ವಹಿವಾಟಿನಲ್ಲಿ ಅವ್ಯವಹಾರ, ರೈತರ ಆತ್ಮಹತ್ಯೆ, ಎಲ್ಲವೂ ಬಂಡವಾಳಶಾಹಿಯ ಅವಿಭಾಜ್ಯ ಅಂಗಗಳು. ಶಿಕ್ಷಣ ಕ್ಷೇತ್ರದಲ್ಲಿ ಕಳೆದ ಒಂದು ದಶಕದಲ್ಲಿ ಆದ್ಯತೆಗಳು ಹೇಗೆ ಬದಲಾಗಿವೆ ಎಂಬುದನ್ನು ಗಮನಿಸಿದರೆ ಜಾಗತೀಕರಣ ಮತ್ತು ವಿಶ್ವ ಬ್ಯಾಂಕಿನ ಪ್ರಭಾವ ದೇಶದ ಪ್ರಗತಿಗೆ ಮಾರಕವೆಂಬುದು ತಿಳಿಯುತ್ತದೆ. ಅದು ಕೂಡ ಬಂಡವಾಳಶಾಹಿಯ ಒಂದು ವಿಭಾಗ. ಆರೋಗ್ಯ ಕೇಂದ್ರಗಳು ಜನಸಾಮಾನ್ಯರಿಗೆ ಎಟುಕದಂತಾಗುವುದು ಇದರ ಇನ್ನೊಂದು ಪರಿಣಾಮ. ಆದ್ದರಿಂದ ಸಮಾಜವಾದಿ ವ್ಯವಸ್ಥೆಗೆ ಪೂರ್ವಭಾವಿಯಾಗಿ ಬಂಡವಾಳಶಾಹಿಯನ್ನು ಬೆಳೆಸಬೇಕೆಂಬುದು ಇಡೀ ಚಳುವಳಿಗಳ ಹಾದಿಯನ್ನು ತಪ್ಪಿಸುವಂಥದು. ಸಂವಿಧಾನದಲ್ಲಿ ಸಮಾಜವಾದದ ಆಕಾಂಕ್ಷೆ ಪ್ರಕಟವಾಗಿರುವಾಗಲೂ ಬಂಡವಾಳಶಾಹಿಯೇ ಕಾರ್ಯಗತವಾಗುತ್ತಿದೆ ಯಾದ್ದರಿಂದ 'ಸಮಾಜವಾದ' ಎಂಬ ಪದವನ್ನು ಸಂವಿಧಾನದಿಂದ ತೆಗೆದುಹಾಕಿದರೆ ವ್ಯತ್ಯಾಸವೇನೂ ಆಗುವುದಿಲ್ಲವೆಂಬ ವಾದವಿದೆ. ಆದರೆ ಅದು ಅರ್ಥವತ್ತಾಗಿರುವಂತೆ ಮಾಡುವ ಹೊಸ ಸಂವಿಧಾನದತ್ತ ನಾವು ಮುನ್ನಡೆಯಬೇಕೆಂಬ ಸೂಚನೆಯನ್ನಾದರೂ ಕೊಡುತ್ತದೆ. ಸಮಾಜದ ವಿಕಾಸದಲ್ಲಿ ಚಾರಿತ್ರಿಕವಾಗಿ ಸಮಾಜವಾದಿ ವ್ಯವಸ್ಥೆಯ ಉಗಮವು ಶತಸ್ಸಿದ್ಧವೆಂದು ಬಗೆದು ಚಳುವಳಿಗಳಿಂದ ವಿಮುಖರಾಗುವುದು ಜನಸಾಮಾನ್ಯರನ್ನು ಉಪೇಕ್ಷಿಸಿದಂತಾಗುತ್ತದೆ.

ಈಗ ನಮ್ಮ ನಡುವೆ, ವಿಕೃತ ಚಳುವಳಿಗಳ ಹಾವಳಿ ಹೆಚ್ಚಾಗಿದೆ. ಯಾರಿಗೆಲ್ಲಾ 'ಭಾರತ ರತ್ನ' ಪ್ರಶಸ್ತಿ ಕೊಡಿಸ ಬೇಕೆಂಬುದಕ್ಕೆ ರಾಜಕೀಯ ಚಳುವಳಿ ನಡೆಸುವ ಕಾಲ ನಮ್ಮದು. ವಾಜಪೇಯಿಯವರಿಗೆ ಆ ಪ್ರಶಸ್ತಿ ನೀಡಿದರೆ ಒಂದು ರೀತಿಯ ಚಳುವಳಿ: ''ತನಗೇ ರತ್ನವು ಇದೆಯೆಂದ, ಬೇರಾರಿಗೂ ಅದು ಇಲ್ಲೆಂದ.'' ನೀಡದಿದ್ದರೆ ಇನ್ನೊಂದು ರೀತಿಯ ಚಳುವಳಿ: ''ನಮ್ಮಲ್ಲಿ ರತ್ನವಿದೆ; ಅದನ್ನು ಗುರುತಿಸದಿರುವವರು ದ್ರೋಹಿಗಳು.'' ಅಡ್ವಾನಿ ರಾಜಕೀಯವನ್ನು ಬೆಂಬಲಿಸುವ ಒಂದು ಸಂಘಟನೆಯ ಕರಪತ್ರದಲ್ಲಿ ''ಧಾರ್ಮಿಕ-ಸಾಂಸ್ಕೃತಿಕ-ಶೈಕ್ಷಣಿಕ-ಆರೋಗ್ಯ ಸೇವಾ ಕಾರ್ಯಕ್ರಮ''ಗಳ ಪಟ್ಟಿಯಲ್ಲಿ ''ಸುಮಂಗಲಿಯರಿಂದ ಶ್ರೀ ಲಲಿತಾ ಸಹಸ್ರನಾಮ'' ಪೂಜೆ ಮಾಡಿಸುವುದೂ ಸೇರಿದೆ. ಅದೂ ರಾಜಕೀಯ ಚಳುವಳಿಯ ಒಂದು ಮುಖ! ದುಡಿಯುವ ಜನ, ಕೊಳಗೇರಿಯಲ್ಲಿ ವಾಸಿಸುವ ಸುಮಂಗಲಿಯರು, ತಮ್ಮ ತೊಟ್ಟ ಬಟ್ಟೆಯಲ್ಲಿ ಲಲಿತಾ ಪೂಜೆ ಮಾಡಹೋದರೆ ಜರತಾರಿ ಸೀರೆಗಳನ್ನುಟ್ಟ ಸುಮಂಗಲಿಯರು ಅವರೊಡನೆ ಕೂತು ಪೂಜೆ ಮಾಡುತ್ತಾರೆಯೆ? ಆದರೂ ಅದು ಸಾರ್ವಜನಿಕ ಪೂಜೆ! ಜನಗಳ ನಿಜವಾದ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಸಂಘಟನೆಯ ಹಾದಿ ತುಳಿಯುವ ರಾಜಕೀಯಕ್ಕೆ ಪರ್ಯಾಯವಾಗಿ ಇಂತಹ ಪೂಜಾ ಚಳುವಳಿಗಳು ತಲೆಯೆತ್ತುತ್ತಿವೆ. ''ಒಂದು ಲಕ್ಷ'' ಮಹಿಳೆಯರು ಶಂಕರಾಚಾರ್ಯರದ್ದಲ್ಲದ ''ಸೌಂದರ್ಯ ಲಹರಿ''ಯನ್ನು ಪಠಿಸುವಾಗ ಅಡ್ವಾನಿಯವರು ಅತಿಥಿಗಳಾಗಿ ಆಗಮಿಸುತ್ತಾರೆ, ಯಾರೋ ಅದ್ವೈತ ವೇದಾಂತ ವಿದ್ವಾಂಸರಲ್ಲ. ಅದೂ ಒಂದು ರಾಜಕೀಯ ಕಸರತ್ತು. ಗೋಮಾತೆ, ರಾಮಸೇತು, ಹೀಗೆ ಭಾವೋದ್ವೇಗದ ಆಯಾಮವನ್ನು ರಚಿಸುವ ಯಾವುದೇ ವಿಷಯವು ಚಳುವಳಿಯ ಸ್ವರೂಪವನ್ನು ತಾಳುತ್ತದೆ; ಅದರಿಂದ ನಮ್ಮ ರಾಜಕೀಯ ಕ್ಷೇತ್ರವು ಕುಲುಷಿತವಾಗಿದೆ, ಅರ್ಥರಹಿತವಾಗುತ್ತಿದೆ. ಇಂತಹ ಚಳುವಳಿಯನ್ನು ರೂಪಿಸುವವರು ಮಹಿಳೆಯರಿಗೆ ಶಾಸನಸಭೆಗಳಲ್ಲಿ ಶೇ. ೩೩ರಷ್ಟು ಮಹಿಳಾ ಮೀಸಲಾತಿ ಬೇಕೆಂಬುದಕ್ಕೆ ಚಳುವಳಿ ರೂಪಿಸುವುದಿಲ್ಲ. ವೈಯಕ್ತಿಕ ನೆಲೆಯಲ್ಲಿರುತ್ತಿದ್ದ ಪೂಜೆಯನ್ನು ಸಾರ್ವಜನಿಕ ವೇದಿಕೆಗೆ ತರುವುದು ಮತ್ತು ಸಾರ್ವಜನಿಕ ಸಮಸ್ಯೆಗಳನ್ನು ಪೂಜೆಗಾಗಿ ಕೂತ ಚಾಪೆಯ ಕೆಳಕ್ಕೆ ತಳ್ಳುವುದು, ಇದೇ ಗೋ-ಸೇತು-ಲಲಿತಾ ಇತ್ಯಾದಿ ಚಳುವಳಿಗಳ ಫಲ. ಇವಕ್ಕೆಲ್ಲಾ ಇರುವುದು ಒಂದೇ ಉತ್ತರ: ಸಮಾಜವಾದಿ ಚಳುವಳಿ. ಸಮಾಜವಾದಿ ವ್ಯವಸ್ಥೆಯು ಚಿಟಿಕೆ ಹೊಡೆಯುವಷ್ಟರಲ್ಲಿ ಅಸ್ತಿತ್ವಕ್ಕೆ ಬರುವುದಿಲ್ಲ, ನಿಜ; ಆದರೆ ಆ ದಿಕ್ಕಿನಲ್ಲಿ ಚಳುವಳಿಗಳು ವಿಫಲವಾಗುವುದಿಲ್ಲ.

ನ್ಯಾಯಾಲಯವು ಸಮಾಜವಾದವನ್ನು ಸಂವಿಧಾನ ಬಾಹಿರವೆಂದು ಘೋಷಿಸಿದರೂ ಸಮಾಜವಾದದ ಗುರಿ ನಶಿಸಿಹೋಗುವುದಿಲ್ಲ. ಚರ್ಚೆಯ ಸಲುವಾಗಿ ಆಗ ಹೀಗೂ ಹೇಳಬಹುದೆನಿಸುತ್ತದೆ: ಸಮಾಜವು ಸಂವಿಧಾನಕ್ಕಿಂತಲೂ

ಮುಂದಿನ ಪುಟಕ್ಕೆ

ತಿಂಗಳ ಪತ್ರಿಕೆ
ಹೊಸತು
ನಮ್ಮುಳಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಪತ್ರಗಳು (೫ನೇ ಪುಟದಿಂದ )*

ಬೆಳಗುವುದೇ ಧ್ಯೇಯವಾಗಬಾರದು!

ಉನ್ನತ ಶಿಕ್ಷಣದ ಬಗ್ಗೆ ಗಮನ ಸೆಳೆದಿರುವುದು ಸಕಾಲಿಕ. ಯು.ಜಿ.ಸಿ. ವೇತನ ಬಂದ ಹಿನ್ನೆಲೆಯಲ್ಲಿ ಹಣ ಹೆಚ್ಚಾಗಿ ನಮ್ಮ ಕೆಲವು ಉಪನ್ಯಾಸಕ ಮಿತ್ರರು ಎಂದಿನಂತಿಲ್ಲ! ಟೀಕೆ ಮಾಡುವ ಸಂದರ್ಭ, ಕಾಲ ಇದಲ್ಲ; ಇರಲಿ. ಹೊಸದಾಗಿ ತೆರೆದ ೧೭೬ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕೂರುವುದಕ್ಕೆ ಕೊಠಡಿ, ಮೇಜು ಕುರ್ಚಿಗಳೂ ಇಲ್ಲ! ಒಂದು ಕೋಟಿ ರೂಪಾಯಿಗಳ ವರೆಗೆ ಕಟ್ಟಡಕ್ಕೆ ಹಣ ಬಿಡುಗಡೆಯಾಗಿದೆಯಂತೆ! ಭೂಮಿ ಕೊಳ್ಳಲು ಹಣ ಕೊಡುವುದಿಲ್ಲವಂತೆ! ಯಾರಾದರೂ ದಾನ ಕೊಡಬೇಕಂತೆ! ಆಮೇಲೆ ಕಟ್ಟಡ ಕಟ್ಟಿಸುವ, ಉದ್ಘಾಟಿಸುವ ಭುವನ್ನಾಟಕದ ಕಾರ್ಯಕ್ರಮ. ಈಗ ಎಲ್ಲಿ ಕೂರಬೇಕು ಯುವಕರು? ಉಪನ್ಯಾಸಕರು?

ಇನ್ನು ಮೊನ್ನೆ ತಾನೇ ನಡೆದ ಉಪನ್ಯಾಸಕರ ನೇಮಕಾತಿಯಲ್ಲಿ ಒಬ್ಬೊಬ್ಬ ಅಭ್ಯರ್ಥಿಯೂ ಗುಟ್ಟಾಗಿ ಹೊರಬಿಟ್ಟ ಬೆಕ್ಕಿನ ಬೆಲೆ ಕೇವಲ ಆರರಿಂದ ಹನ್ನೆರಡು ಲಕ್ಷ! ಹರಾಜಿನೋಪಾದಿಯಲ್ಲಿ ನಡೆಯುತ್ತಿರುವ ಈ ನೇಮಕಾತಿಯ ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವ ಇಲಿಗಳು ಇನ್ನೂ ಹುಟ್ಟಿಲ್ಲ. ಹುಟ್ಟುವುದೂ ಇಲ್ಲ! ನ್ಯಾಕ್ ಸಮಿತಿಯ ಸದಸ್ಯರನ್ನು ರೇಷ್ಮೆ ಸೀರೆಯಿಂದ ಸನ್ಮಾನಿಸಲಿಲ್ಲ, ಸ್ಟಾರ್ ಹೋಟಲ್‌ನಲ್ಲಿ ಮರ್ಯಾದೆ ಮಾಡಲಿಲ್ಲ, ಏರ್ ಕಂಡೀಷನ್ಡ್ ಕಾರಿನಲ್ಲಿ ಬರಮಾಡಿ ಕೊಳ್ಳಲಿಲ್ಲ, ಆ ಕಾಲೇಜಿನಿಂದಲೂ ಟಿ.ಎ., ಡಿ.ಎ., ಕಾಣಿಕೆಗಳು ಸಲ್ಲಿಕೆಯಾಗಿಲ್ಲ ಎಂಬುದೇ ಮಾನದಂಡ ವಾಗಿ 'ಬಿ ದರ್ಜೆ'ಗಿಂತ ಕೆಳದರ್ಜೆ ಗಳಿಸಿಕೊಂಡಿರುವ ಕಾಲೇಜುಗಳ ಉಪನ್ಯಾಸಕರಿಗೆ ಸಂಬಳ ಕಡಿತದ ಕಿರಿಕಿರಿ. ಇದನ್ನು ಯಾರೂ ಯಾವ ಬಾಯಿಯಿಂದಲೂ ಹೇಳುವುದಿಲ್ಲ. ಬಾಯಿಬಿಟ್ಟರೆ ಬುಡಕ್ಕೇ ಏಟು!

ಇಷ್ಟೆಲ್ಲಾ ಚರ್ಚೆಗೆ ಕಾರಣ ನಿಮ್ಮ ಸಂಪಾದಕೀಯ. ತಪ್ಪು ತಿಳಿಯದಿದ್ದರೆ ಒಂದು ಮಾತು. ಈ ವಿಶೇಷಾಂಕದಲ್ಲಿ ಕೆಲವು ಪುಟಗಳು ಖಾಲಿ ಇದ್ದವು. ಪುಟ ೯೭ರಲ್ಲಿನ ಜಿ. ಎಂ. ಬೊಮ್ನಳ್ಳಿಯವರ ವ್ಯಂಗ್ಯಚಿತ್ರ ೨೬೩ರಲ್ಲೂ ಮರುಕಳಿಸಿದೆ. ಪುಟಗಳ ಗುಣಮಟ್ಟ ಕುಸಿದಿದ್ದು ಮುದ್ರಣದ ಕಪ್ಪುಶಾಹಿ ಹರಡಿ ಚಿತ್ರಗಳು ತುಂಬಾ ಕಳಪೆ ಎನಿಸಿವೆ. ಯು. ಆರ್. ರಾವ್ ಅವರೊಂದಿಗಿನ ಸಂದರ್ಶನ ಮತ್ತು ಇತರ ಸಂದರ್ಶನಗಳ ಚಿತ್ರಗಳು ತುಂಬಾ ಕಪ್ಪುಕಪ್ಪಾಗಿ ಬಂದಿವೆ. ಹಾಗೆಯೇ ನವಕರ್ನಾಟಕ ಪ್ರಕಾಶನದ ಪುಸ್ತಕಗಳ ಜಾಹೀರಾತಿಗಾಗಿ ನಾಲ್ಕೈದು ಕಡೆ ಜಾಗ ಒದಗಿಸಿದ್ದರೆ ಅವರ ಪುಸ್ತಕಗಳನ್ನು ಜನರ ಗಮನಕ್ಕೆ ತಂದಂತಾಗುತ್ತಿತ್ತಲ್ಲವೇ?

ಚಿತ್ರದುರ್ಗ *ಬೇದ್ರೆ ಎನ್. ಮಂಜುನಾಥ*

*ಸಂಪಾದಕೀಯ (ಹಿಂದಿನ ಪುಟದಿಂದ)*

ದೊಡ್ಡದು, ಏಕೆಂದರೆ ಸಮಾಜ ಯಾವಾಗಲೂ ಇರುತ್ತದೆ, ಆದರೆ ಸಂವಿಧಾನದ ವಯಸ್ಸು ಇನ್ನೂ ೫೮ ಅಷ್ಟೇ. ಸಮಾಜದ ಚರಿತ್ರೆಯನ್ನು ಸಂವಿಧಾನವು ಅಂತರ್ಗತ ಮಾಡಿಕೊಳ್ಳಬೇಕು; ಇಲ್ಲದಿದ್ದರೆ ಅದು ಶಿಥಿಲವಾಗಿಹೋಗುತ್ತದೆ. ಸಮಾಜವಾದವು ಸಮಾಜ ವಿಕಾಸದ ನಿಯಮ. ಅದನ್ನು ಔಪಚಾರಿಕವಾಗಿ ಸಂವಿಧಾನವು ಒಪ್ಪಿಕೊಳ್ಳದಿದ್ದರೂ ಆ ಆಶಯವು ಸ್ಥಿರವಾದ್ದು. ಅದರ ಆವಿರ್ಭಾವಕ್ಕಾಗಿ ಹೋರಾಡುವುದು ಸಮಾಜದ ಹಕ್ಕು. ಅದನ್ನು ಪ್ರಜಾಪ್ರಭುತ್ವದ ಪದ್ಧತಿಯಲ್ಲಿ ಅಸ್ತಿತ್ವಕ್ಕೆ ತರಬೇಕು. ಅದಕ್ಕೆ ಅವಕಾಶವನ್ನು ನಿರಾಕರಿಸಿದರೆ ಸಂವಿಧಾನ ಬಾಹಿರವಾದ ಕ್ರಮಗಳನ್ನು ಸಮರ್ಥಿಸುವ ಸನ್ನಿವೇಶಕ್ಕೆ ನಾವೇ ಸ್ವತಃ ಸ್ವಾಗತವನ್ನು ಕೋರಿದಂತಾಗುತ್ತದೆ.

ಸಂಕ್ಷಿಪ್ತವಾಗಿ ಹೇಳುವುದಾದರೆ, ಯಾವುದು ಬೇಡವೋ ಅದಕ್ಕೆ ಚಳುವಳಿಗಳು ಹತ್ತಾರಿವೆ; ಆದರೆ ಯಾವುದು ಬೇಕೋ ಅದಕ್ಕೆ ಚಳುವಳಿ ಆರಂಭವಾಗಿದೆ, ಆದರೆ ಕೆಲವೇಳೆ ಅದು ಮಸುಕಾಗಿಬಿಡುತ್ತದೆ. ದಲಿತರು, ಮಹಿಳೆಯರು, ಹಿಂದುಳಿದವರು, ಅಲ್ಪಸಂಖ್ಯಾತರು, ರೈತರು, ಕಾರ್ಮಿಕರು, ಯುವಜನರು, ವಿದ್ಯಾರ್ಥಿಗಳು, ಹೀಗೆ ಎಲ್ಲ ಜನವಿಭಾಗಗಳೂ ಚಳುವಳಿಗಳಲ್ಲಿ ಭಾಗವಹಿಸಬೇಕಾಗಿದೆ. ಅವೆಲ್ಲವೂ ಒಂದು ಬೃಹತ್ ಚಳುವಳಿಯ ವಿವಿಧ ಮುಖಗಳು. ಅವು ಪರಸ್ಪರ ಪೂರಕವಾದುವು; ಯಾವುದೂ ಪ್ರತ್ಯೇಕವಲ್ಲ. ಸಮಾಜದ, ಜನಸಾಮಾನ್ಯರ ಜೀವನದ, ಗುಣಾತ್ಮಕ ಬದಲಾವಣೆಗೆ ಅವೆಲ್ಲಾ ಒಟ್ಟಿಗೆ ಕೊಡುಗೆ ನೀಡುತ್ತವೆ. ಅವುಗಳ ಸಮಗ್ರತೆಯು ಸಮಾಜವಾದಿ ಚಳುವಳಿ ಎನಿಸಿಕೊಳ್ಳುತ್ತದೆ. ನಮ್ಮ ಕಾಲಘಟ್ಟದಲ್ಲಿ ಅದು ಸಾಧ್ಯವಿದೆ; ಅದಕ್ಕೆ ಕಾಲವನ್ನು ಪಕ್ವಗೊಳಿಸುವ ಶ್ರಮ ಅನಗತ್ಯ; ಅಗತ್ಯವಾಗಿರುವುದು ನಮ್ಮ ಪಕ್ವತೆ ಮತ್ತು ಚಳುವಳಿಯ ಪಕ್ವತೆ. ಬಹುರಾಷ್ಟ್ರೀಯ ಕಂಪನಿಗಳು, ಸಾಮ್ರಾಜ್ಯಶಾಹಿ, ಕೋಮುವಾದ, ಭಯೋತ್ಪಾದನೆ, ಎಲ್ಲವೂ ಸವಾಲುಗಳೇ; ಆದರೆ ಚಾರಿತ್ರಿಕ ಭೌತವಾದದ ನಿಯಮಗಳು ಅಜೇಯವೆಂಬುದೂ ಅಷ್ಟೇ ಸತ್ಯ. ಅಂಜಿಕೆ ಮತ್ತು ಹತಾಶೆಗಳಿಗೆ ಇಲ್ಲಿ ಪ್ರವೇಶವಿಲ್ಲ.

(signature)

## ಹೊಸ ವರುಷಕೆ...



ಹೊಸ ವರುಷವೆ
ನೀ ಬರುವುದಾದರೆ
ಭಾಗ್ಯೋದಯದ ಬಾಗಿಲು ತೆರೆದು
ಹರಿಯ ಬಿಡು
ಸೂರ್ಯೋದಯದ
ಹೊಸ ಬೆಳಕ
ಸರಸು ರಜನಿಯ ಪಕ್ಕಕೆ
ಕಣ್ಣಮುಚ್ಚಾಲೆ ಆಡುತ್ತಾ
ಕೊಂದು ಬಿಡು
ರಾಶಿ ರಾಶಿ ಅಸತ್ಯದ
ಹೆಣಗಳು ಉರುಳಲಿ
ಅಂತರ್ಯದ ಆಳದೊಳಗೆ
ಹುದುಗಿರುವ ದಿವ್ಯತೆ
ಅರಳಿ ಪ್ರಜ್ವಲಿಸಿ ಘಮಿಸಲಿ
ಸ್ವರ್ಧಾಮಯ ಜಗತ್ತಿಗೆ

ನೀ ಬರುವುದಾದರೆ
ರಜದ ವ್ರಜವಾಗಿ ಬರಬೇಡ
ರಂಜನ ಕರೆ ತಾ
ನಮ್ಮೂರಿಗೆ ಮಿನುಗುತ್ತಾ
ನಿಷ್ಪಂದವಾಗಿ ಬೇರು ಬಿಡು ನಗುತ್ತಾ
ತುತ್ತು ತುತ್ತಿಗೂ ತತ್ತರಿಸುವ
ಅಜ್ಞನಾಗಿ ಬರಬೇಡ
ಪ್ರಾಜ್ಞನಾಗಿ ಬರುವುದ ಬದಿಗಿಡಬೇಡ
ಕುಣಿಯತಾ ಹಾಡುತಾ
ಬಾ ಹಾಡ ಉತ್ತುಂಗಕ್ಕೇರಿಸು ಚೆಲುವಾದ
ಕನ್ನಡ ನಾಡ

**ಗೊರೂರು ಶಿವೇಶ**
ಪೇಟೆ ರಸ್ತೆ, ಗೊರೂರು - ೫೭೩ ೧೨೦

# ಸರ್ಕಾರವು ಹಲವು ಕಡೆ ಹಣ ವ್ಯರ್ಥ ಮಾಡುವುದು ಬೇಸರದ ಸಂಗತಿ

## – ಪ್ರೊ॥ ಯು. ಆರ್. ರಾವ್

ಪ್ರೊ॥ ಯು. ಆರ್. ರಾವ್ ಅವರೊಡನೆ 'ಹೊಸತು' ನಡೆಸಿದ ಸಂವಾದವನ್ನು ಸಂದರ್ಶನ ಲೇಖನದ ರೂಪದಲ್ಲಿ ಜನವರಿ ೨೦೦೮ರ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಿಸಲಾಗಿತ್ತು. ಬಾಹ್ಯಾಕಾಶ ವಿಜ್ಞಾನ ಸಂಸ್ಥೆಯ ಚಟುವಟಿಕೆಗಳು, ಉಪಗ್ರಹ ಉಡಾವಣೆ, ಕೃಷಿ ಕ್ಷೇತ್ರದ ತೊಡಕುಗಳು, ದೂರಸಂವಹನ ಸೌಲಭ್ಯಗಳು, ಮುಂತಾದ ವಿಷಯಗಳನ್ನು ಅಲ್ಲಿ ಚರ್ಚಿಸಲಾಗಿದ್ದಿತು. ಸಂದರ್ಶನದ ಮುಂದುವರಿದ ಭಾಗವು ಇಲ್ಲಿದೆ.


ಸಂದರ್ಶಿಸಿದವರು : *ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ*

ಲೇಖನ ಸಿದ್ಧಪಡಿಸಿದವರು : ಕೆ. ಎಸ್. ಪಾರ್ಥಸಾರಥಿ ಮತ್ತು ಡಿ. ಟಿ. ಲೋಹಿತ್

ಚಿತ್ರಗಳು : ಕೆ. ಪಿ. ಸ್ವಾಮಿ




**ಹೊ :** ಉದ್ಯೋಗವನ್ನು ಗುರಿಯಾಗಿಟ್ಟುಕೊಳ್ಳದೆ ಮನಸ್ಸಿಗೆ ಹಿಡಿಸುವ ವಿಷಯವನ್ನೇ ವಿದ್ಯಾರ್ಥಿಗಳು ಆಯ್ದುಕೊಳ್ಳಬೇಕೆಂದು ಹೇಳಿದ್ದಿರಿ. ಅದನ್ನು ವಿಸ್ತರಿಸಿ ಹೇಳುತ್ತೀರಾ ?

**ಯು. ಆರ್. ರಾವ್ :** ಇದು ವಿಜ್ಞಾನಿಗಳಿಗೆ ಮಾತ್ರವೇ ಅನ್ವಯವಾಗುವ ಮಾತಲ್ಲ. – ಹೇಳಿ, ನಮ್ಮ ದೇಶದಲ್ಲಿ ಒಳ್ಳೆಯ ಅರ್ಥಶಾಸ್ತ್ರಜ್ಞರು ಸಾಕಷ್ಟಿದ್ದಾರೆಯೆ ?

**ಹೊ :** ಉದ್ಯೋಗಾವಕಾಶಗಳಿದ್ದರೆ ಓದುತ್ತಾರಲ್ಲವೆ ?

**ಯು. ಆರ್. ರಾವ್ :** ಅದು ಕೇವಲ ಉದ್ಯೋಗದ ಪ್ರಶ್ನೆಯಲ್ಲ. ಎಲ್ಲರಿಗೂ ಏನೋ ಒಂದು ಉದ್ಯೋಗ ದೊರೆಯಬಹುದು. ಆದರೆ ಆಸಕ್ತಿ? ಹೋಮಿ ಭಾಭಾ ಅವರ ತಂದೆಗೊಂದು ಪತ್ರ ಬರೆದಿದ್ದರು : ಮೆಕ್ಯಾನಿಕಲ್ ಇಂಜಿನಿಯರಿಂಗ್ ಓದಲು ಇಂಗ್ಲೆಂಡಿಗೆ ಹೋಗಿದ್ದಾಗ. ''ನಾನಿದನ್ನು ಓದಬಲ್ಲೆ, ಆದರೆ ನನ್ನ ಮನಸ್ಸು, ಹೃದಯ ಅದರಲ್ಲಿಲ್ಲ. ನನಗೆ ಭೌತಶಾಸ್ತ್ರ ಓದಬೇಕೆಂಬ ಆಸೆ. ಅದರಲ್ಲಿ ನಾನೇನಾದರೂ ಸಾಧಿಸಬಲ್ಲೆನೆಂಬ ಭರವಸೆ ಇದೆ'' ಎಂದು. ಸಂಗೀತಗಾರ ಬೀಥೋವನ್‌ಗೆ ವಿಜ್ಞಾನಿಯಾಗಿ ಹಣ ಸಂಪಾದಿಸು, ಎಂದು ಹೇಳಿದ್ದರೆ ವಿಪರ್ಯಾಸವಾಗಿರುತ್ತಿರಲಿಲ್ಲವೆ ? ಅಥವಾ ಸಾಕ್ರೆಟೀಸ್‌ಗೆ ಇಂಜಿನಿಯರ್ ಆಗುವಂತೆ ಹೇಳಿದ್ದರೆ ! ಇದನ್ನು ಭಾಭಾ ಬರೆದದ್ದು ಎಷ್ಟು ದಶಕಗಳ ಹಿಂದೆ ಮತ್ತು ಎಂತಹ ಸುಂದರ ಪತ್ರ ! ಇಂದು ಐ.ಟಿ.ಯಲ್ಲಿ ಕೆಲಸ ಮಾಡುವವರ ಪೈಕಿ ಅರ್ಧಕ್ಕಿಂತ ಹೆಚ್ಚು ಜನ ಭ್ರಮನಿರಸನಗೊಂಡಿದ್ದಾರೆ. ಆದರೂ ಕೆಲಸದಲ್ಲಿ ಉಳಿಯಬೇಕಾದ ಸಂದರ್ಭ ಅವರದ್ದು.

**ಹೊ :** ಮೂರು-ನಾಲ್ಕು ವರ್ಷಗಳ ಹಿಂದೆ ಸುರತ್ಕಲ್ ಇಂಜಿನಿಯರಿಂಗ್ ಇನ್‌ಸ್ಟಿಟ್ಯೂಟ್‌ನ ಘಟಿಕೋತ್ಸವದಲ್ಲಿ ಕೆಲವು ವಿಚಾರಗಳನ್ನು ನೀವು ಪ್ರಸ್ತಾಪಿಸಿದ್ದಿರಿ. ಇಂಜಿನಿಯರಿಂಗ್ ಪದವೀಧರರನ್ನು ಬಳಸಿಕೊಳ್ಳುವ ಉದ್ಯಮಗಳು ಗಣನೀಯ ಪ್ರಮಾಣದಲ್ಲಿ ಸರ್ಕಾರಕ್ಕೆ ಸೆಸ್ ರೂಪದಲ್ಲಿ ಹಣ ನೀಡಬೇಕು ಎಂದಿದ್ದಿರಿ. ಅದನ್ನು ವಿಧಿಸುವ ಕ್ರಮ ಯಾವುದು ಮತ್ತು ಅದಕ್ಕೆ ಉದ್ಯಮಿಗಳ ಪ್ರತಿಕ್ರಿಯೆ ಹೇಗಿರಬಹುದು ?

**ಯು. ಆರ್. ರಾವ್ :** ಇದನ್ನು ಚರ್ಚಿಸಿದಾಗೆಲ್ಲಾ ಉದ್ಯಮಿಗಳು ಇಂದಿನ ರಾಜಕಾರಣಿಗಳನ್ನು ಬೊಟ್ಟುಮಾಡಿ ತೋರಿಸುತ್ತಾರೆ, ಸೆಸ್ ನೀಡಿದರೆ ಅದರ ವಿತರಣೆಯ ಬಗ್ಗೆ ಸಂಶಯ ಅನಿವಾರ್ಯವೆನ್ನುತ್ತಾರೆ. ಒಬ್ಬನು ವಿದ್ಯಾರ್ಜನೆ ಮಾಡಿದರೆ ಲಾಭವು ಕೇವಲ ಆ ವ್ಯಕ್ತಿಯೊಬ್ಬನಿಗಲ್ಲ – ಇಡೀ ಸಮಾಜಕ್ಕೆ ಅದರಿಂದ ಲಾಭವಿದೆ. ಉದ್ಯಮಕ್ಕೂ ಸಹ. ಆದ್ದರಿಂದ ಸೆಸ್ ಎಂಬುದನ್ನು ಹೊರೆಯೆಂದು ಪರಿಗಣಿಸಬಾರದು. ಕೇವಲ ಕೈಗಾರಿಕೆಗೆ ಅನ್ವಯ ಮಾಡಬೇಕೆಂಬುದು ಆಶಯವಲ್ಲ. ವಿದ್ಯಾರ್ಥಿಯು ಯಾವುದೇ ಉದ್ಯೋಗಕ್ಕೆ ಹೋಗಲಿ, ಅವನ ಆದಾಯದ ಶೇ. ೧/೨ರಷ್ಟನ್ನು ಕಡಿತ ಮಾಡಿ, ಅದಕ್ಕೆ ಸಮನಾದಷ್ಟು ಹಣವನ್ನು ಉದ್ಯಮವು ತುಂಬಿ, ಒಟ್ಟು ಹಣವನ್ನು ಒಂದು ಖಾತೆಯಲ್ಲಿರಿಸಬೇಕು. ಪ್ರಾವಿಡೆಂಟ್ ಫಂಡ್ ಎಂಬಂತೆ ಆ ಹಣವನ್ನು ಶಿಕ್ಷಣಕ್ಕೆ ಉಪಯೋಗಿಸಬೇಕು.

**ಹೊ :** ಎಂತಹ ವಿದ್ಯಾಸಂಸ್ಥೆಗಳಿಗೆ ಇದರಿಂದ ಹಣ ದೊರಕಬೇಕು ?

**ಯು. ಆರ್. ರಾವ್ :** ಎಲ್ಲ ವಿದ್ಯಾಸಂಸ್ಥೆಗಳಿಗೂ. ಇಂದಿನ ಐದುಸಾವಿರ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ೪೫,೦೦೦ ಸ್ನಾತಕೋತ್ತರ ಪದವಿ ಇರುವ ಅಧ್ಯಾಪಕರಿದ್ದಾರೆಯೆ ?

**ಹೊ :** ಮಧ್ಯಪ್ರದೇಶದಲ್ಲಿ ಇಂಜಿನಿಯರಿಂಗ್ ಕಾಲೇಜು ಸೇರಲು ವಿದ್ಯಾರ್ಥಿಗಳು ಮುಂದೆ ಬರುತ್ತಿಲ್ಲವೆನ್ನುತ್ತಾರೆ.

**ಯು. ಆರ್. ರಾವ್ :** ಇರಬಹುದು, ನಮ್ಮ ಕಾಲೇಜುಗಳ



*ಡಾ|| ಹೋಮಿ ಭಾಭಾ*

ಗುಣಮಟ್ಟ ಕುಸಿಯುತ್ತಿದೆ. ಉಳಿದೆಲ್ಲ ಕಡೆ ತಿರಸ್ಕೃತರಾದವರು ಬಿ.ಎಸ್ಸಿ, ಎಂ.ಎಸ್ಸಿ ಓದಿ ಕಾಲೇಜು ಅಧ್ಯಾಪಕರಾದರೆ ಏನು ಪ್ರಯೋಜನ ? ಅವರಿಗೂ ಸಂಬಳ ಸರಿಯಾಗಿ ಕೊಡುವುದಿಲ್ಲ. ೧೫,೦೦೦ಕ್ಕೆ ಹಸ್ತಾಕ್ಷರ ಹಾಕಿ ೫೦೦೦ ಪಡೆಯುವ ಅಧ್ಯಾಪಕರಿದ್ದಾರೆ, ಹಾಗೆ ಕೊಡುವ ಕಾಲೇಜುಗಳಿವೆ.

**ಹೊ :** ಇದಕ್ಕೆ ಪರಿಹಾರವೇನು ?

**ಯು. ಆರ್. ರಾವ್ :** ಪರಿಸ್ಥಿತಿ ಹೀಗೇ ಮುಂದುವರಿದರೆ ಪರಿಹಾರವೇ ಇರುವುದಿಲ್ಲ. ೩೫,೦೦೦ ಪಿಎಚ್.ಡಿ.ಗಳು ಬೇಕಾದ ದೇಶದಲ್ಲಿ ೫೦೦ ಪಿಎಚ್.ಡಿ.ಗಳು ಬಂದರೆ ಪರಿಸ್ಥಿತಿ ಹೇಗೆ ಸುಧಾರಿಸುತ್ತದೆ ? ಹೀಗೇ ನಡೆಯುತ್ತಿದ್ದರೆ ಕಾಲೇಜುಗಳಲ್ಲಿ ಅಧ್ಯಾಪಕರ ಸ್ಥಾನಗಳೆಲ್ಲಾ ಭರ್ತಿಯಾಗುವುದು ಯಾವಾಗ ? ಪ್ರತಿವರ್ಷ ೫೦,೦೦೦ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು, ಅವರಿಗೆ ಅಧ್ಯಾಪಕರನ್ನು ನೇಮಿಸದಿದ್ದರೆ ಶಿಕ್ಷಣದ ಗುಣಮಟ್ಟ ಕುಸಿಯುತ್ತಲೇ ಇರುತ್ತದೆ. ಅದಕ್ಕಾಗಿ ನಾವು ಕೆಲವು ಸಲಹೆಗಳನ್ನು ಕೊಟ್ಟಿದ್ದೇವೆ : ಕಾಲೇಜುಗಳು ಅಧ್ಯಾಪಕರಿಗೆ ಸರಿಯಾಗಿ ಸಂಬಳ ಕೊಡಬೇಕು, ಅಧ್ಯಾಪಕರಲ್ಲಿ ಶೇಕಡ ಇಂತಿಷ್ಟು ಎಂದು ನಿಗದಿಗೊಳಿಸಿ ಅವರನ್ನು ಪಿಎಚ್.ಡಿ.ಗೆ ಕಳಿಸಬೇಕು ಮತ್ತು ಒಳ್ಳೆಯ ಗುಣಮಟ್ಟ ಮತ್ತು ಕ್ಷಮತೆ ಇರುವ ಅಧ್ಯಾಪಕರನ್ನು ೬೫-೭೦ ವರುಷಗಳವರೆಗೆ ಉದ್ಯೋಗದಲ್ಲಿ ಮುಂದುವರಿಸಬೇಕು.

**ಹೊ :** ಇದನ್ನು ಕಾರ್ಯರೂಪಕ್ಕೆ ತರುವುದು ಯಾರ ಹೊಣೆ ?

**ಯು. ಆರ್. ರಾವ್ :** ಸಹಜವಾಗಿಯೇ ಎ.ಐ.ಸಿ.ಟಿ.ಇ. (ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಲಿ)ಯದು. ನಮ್ಮ ಸಲಹೆಗಳನ್ನು ಕಾರ್ಯರೂಪಕ್ಕೆ ತರುವುದಿರಲಿ, ಆ ಮಂಡಲಿಯು ಗುಣಮಟ್ಟದ ಪರಿಶೀಲನೆಯನ್ನೇ ಸರಿಯಾಗಿ ಮಾಡುತ್ತಿಲ್ಲ. ಕಾಲೇಜುಗಳಿಂದ ಹಣ ಪಡೆದು ಅರ್ಹತಾ ಪತ್ರ ಕೊಡಲಾಗುತ್ತಿದೆಯೆಂಬ ಗುಮಾನಿ ವ್ಯಕ್ತವಾಗಿದೆ.

**ಹೊ :** ಯಾವುದೇ ದೇಶದಲ್ಲೂ ವಿದ್ಯಾರ್ಥಿಗಳು ಶಿಕ್ಷಣದ ಸಂಪೂರ್ಣ ವೆಚ್ಚವನ್ನು ತಾವೇ ಭರಿಸುವುದಿಲ್ಲವೆಂದು ಹೇಳಿ, ಒಟ್ಟು ವೆಚ್ಚದ ಮೂರನೆಯ ಒಂದರಷ್ಟನ್ನು ಮಾತ್ರ ಅವರಿಂದ ಶುಲ್ಕವಾಗಿ ಪಡೆಯಬೇಕೆಂದು ನೀವು ಸೂಚಿಸಿದ್ದಿರಿ.

**ಯು. ಆರ್. ರಾವ್ :** ಮಿಕ್ಕಿದ್ದನ್ನು ಕೈಗಾರಿಕೆ ಮತ್ತು ಸಮಾಜಮುಖಿ ಸರ್ಕಾರ ಭರಿಸಬೇಕು.

**ಹೊ :** ಶಿಕ್ಷಣದ ವಾಣಿಜ್ಯೀಕರಣವು ಎಷ್ಟೋ ಅರ್ಹ ವಿದ್ಯಾರ್ಥಿಗಳಿಗೆ ಅವಕಾಶಗಳನ್ನು ತಪ್ಪಿಸುತ್ತಿದೆ, ವಿಶೇಷವಾಗಿ ತಾಂತ್ರಿಕ ಶಿಕ್ಷಣ.

**ಯು. ಆರ್. ರಾವ್ :** ನಿಜ, ಬಹುತೇಕ ಕಾಲೇಜುಗಳು ಶುಲ್ಕದ ಆದಾಯದಿಂದಲೇ ನಡೆಯುತ್ತವೆ. ಆದ್ದರಿಂದ ಹಣ ಕೊಡಬಲ್ಲವರಿಗೆ ಮಾತ್ರ ಅಲ್ಲಿ ಪ್ರವೇಶ. ಮೂರು ವರ್ಷಗಳ ಹಿಂದೆ ಕೆಲವು ವೈದ್ಯಕೀಯ ಕಾಲೇಜುಗಳ ಪ್ರತಿನಿಧಿಗಳನ್ನು ಭೇಟಿಯಾಗಿದ್ದೆ. ಆಗ್ಗೆ ಒಂದು ಸೀಟಿಗೆ ೧೦ರಿಂದ ೨೦ ಲಕ್ಷ ಕೊಡಬೇಕಾಗುತ್ತಿತ್ತು. ಅಷ್ಟು ಹಣ ಹೇಗೋ ಹೊಂದಿಸಿದರೆ ಮದುವೆಯ ಸಂದರ್ಭದಲ್ಲಿ ಅಷ್ಟೂ ಹಿಂದಕ್ಕೆ ಬರುತ್ತದೆಂದು ಮದ್ರಾಸಿನ ಒಬ್ಬ ವಿದ್ಯಾರ್ಥಿ ಹೇಳಿದ್ದ. ಆಡಳಿತದ ಪ್ರತಿನಿಧಿಯೊಬ್ಬರು ಇನ್ನೂ ಹೆಚ್ಚು ಆಘಾತಕಾರಿ ವಿದ್ಯಮಾನವನ್ನು ನನ್ನ ಗಮನಕ್ಕೆ ತಂದಿದ್ದರು : ವಿದ್ಯಾರ್ಥಿಯು ಆರಂಭದಲ್ಲಿ ಒಂದು ಕೋಟಿ ರೂಪಾಯಿ ಕೊಟ್ಟರೆ ಏಳು ವರ್ಷಗಳಲ್ಲಿ ಅವನಿಗೆ ಎಂ.ಡಿ. ಪದವಿ ಖಾತ್ರಿಯಾಗಿ ದೊರಕಿಸಿಕೊಡುತ್ತಾರಂತೆ. ಇದೊಂದು ಆತಂಕದ ವಿಷಯ.

**ಹೊ :** ಅಂದರೆ, ಬಡ್ಡಿ, ಚಕ್ರಬಡ್ಡಿ, ಎಲ್ಲಾ ಒಮ್ಮೆಗೇ ವಸೂಲು ಮಾಡಿಬಿಡುತ್ತಾರೆ ! ತಾವೊಮ್ಮೆ ಹೇಳಿದ್ದಿರಿ : ಕೆಳಮಟ್ಟದ ವ್ಯವಹಾರವು ಕೆಳಮಟ್ಟದ ಅರ್ಹತೆಯನ್ನು ವರ್ಧಿಸುತ್ತದೆ; ಅದು ಉತ್ತಮ ಮಟ್ಟದ ಏನನ್ನೂ ಸೃಷ್ಟಿಸುವುದಿಲ್ಲ, ಎಂದು.

**ಯು. ಆರ್. ರಾವ್ :** ಇನ್ನೊಂದು ಸ್ವಾರಸ್ಯ ಹೇಳಲೆ ? ಈ ವಿಷಯಗಳನ್ನೆಲ್ಲಾ ದಾಖಲಿಸಿದ್ದ ನಮ್ಮ ವರದಿಯು ಅಮೆರಿಕಾದಲ್ಲಿ ಲಭ್ಯವಿದೆ, ಆದರೆ ನಮ್ಮ ದೇಶದಲ್ಲಿ ಸಿಕ್ಕುವುದಿಲ್ಲ.

**ಹೊ :** ಆರ್ಥಿಕ ಅಭಿವೃದ್ಧಿಯ ಬಗ್ಗೆ ನೀವೊಮ್ಮೆ ಹೇಳಿದ್ದಿದು : ''ನಮ್ಮ ದೇಶದ ಆರ್ಥಿಕ ಬೆಳವಣಿಗೆ ಈಗ ಶೇ. ೮ ಇದೆ. ಅದು ಸದಾ ಅಷ್ಟರಲ್ಲೇ ಉಳಿಯಕೂಡದು. ದೇಶಕ್ಕೆ ಅಗತ್ಯವಾಗುವಷ್ಟು ತಂತ್ರಜ್ಞಾನ ಪರಿಣತರನ್ನು ತಯಾರುಮಾಡಲು ಬೆಳವಣಿಗೆಯು ಸಾಲದು. ಈಗಿರುವಷ್ಟು ಪರಿಣತರಿಗಿಂತ ನಮಗೆ ಶೇ. ೧೫ರಿಂದ ೨೦ರಷ್ಟು ಹೆಚ್ಚು ಬೇಕಾಗುತ್ತಾರೆ.''

**ಯು. ಆರ್. ರಾವ್ :** ಅದು ಸರಿ. ಈ ಅಭಿವೃದ್ಧಿಯ ಗುರಿಯನ್ನು ಶೇ. ೯-೧೦ಕ್ಕೆ ಏರಿಸಲಾಗಿದೆ. ರಿಸರ್ವ್ ಬ್ಯಾಂಕಿನ ವರದಿಯಲ್ಲಿ ಇದನ್ನು ಸೇರ್ಪಡೆ ಮಾಡಲಾಗಿದೆ.

**ಹೊ :** ನೀವು ಆ ಬ್ಯಾಂಕಿನ ನಿರ್ದೇಶಕ ಮಂಡಲಿಯಲ್ಲಿದ್ದೀರಿ ಮತ್ತು ಕರೆನ್ಸಿ ನೋಟುಗಳ ವಿಭಾಗದ ಉಸ್ತುವಾರಿಯನ್ನು ನೋಡಿಕೊಳ್ಳುತ್ತೀರಿ ಎಂದು ಕೇಳಿದ್ದೇವೆ. ಅಲ್ಲಿ ನೀವೇನು ಮಾಡುತ್ತೀರೆಂಬ ಆಶ್ಚರ್ಯ ನಮಗೆ.

**ಯು. ಆರ್. ರಾವ್ :** ಈ ವಿಭಾಗದಲ್ಲಿ ಖೋಟಾ ನೋಟುಗಳದ್ದು ದೊಡ್ಡ ಸಮಸ್ಯೆ. ನಾನು ಪ್ಲಾಸ್ಟಿಕ್ ನೋಟುಗಳನ್ನು ಅಳವಡಿಸಬೇಕೆಂಬ ಪ್ರಯತ್ನದಲ್ಲಿದ್ದೇನೆ. ಈಗ ತಯಾರಾಗುವ ನೋಟುಗಳಿಗೆ ಕಾಗದವನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ. ಈ ವರ್ಷ ನಮ್ಮದೇ ಕಾಗದ ಬಳಸುವ ಯೋಜನೆ ಇದೆ. ನೋಟುಗಳನ್ನು ಬಳಸುವ ನಮ್ಮ ವಿಧಾನ ಬಹಳ ಒರಟಾದ್ದು; ಆದ್ದರಿಂದ ಪ್ಲಾಸ್ಟಿಕ್ ನೋಟುಗಳು ಒಂದು ಪರಿಹಾರ ಒದಗಿಸಬಹುದು. ಹೇಗೇಗೋ ಮಡಿಸುವುದು, ಅದರ ಮೇಲೆ ಬರೆಯುವುದು, ಇವೆಲ್ಲಾ ನೋಟುಗಳನ್ನು ಹಾಳುಮಾಡುತ್ತವೆ.

**ಹೊ :** ಶಿಕ್ಷಣದ ಪ್ರಶ್ನೆಗೆ ಹಿಂದಿರುಗುವುದಾದರೆ, ಅನೇಕ ಸಂಸ್ಥೆಗಳು ಟ್ರಸ್ಟುಗಳನ್ನು ಮಾಡಿಕೊಂಡು ಒಳಗೊಳಗೇ ಏನು ನಡೆಸುತ್ತಾರೋ ತಿಳಿಯುವುದಿಲ್ಲವಲ್ಲ...

**ಯು. ಆರ್. ರಾವ್ :** ವಿದ್ಯಾರ್ಥಿಯು ವಿದ್ಯಾಸಂಸ್ಥೆಗೆ ನೀಡುವ ಹಣ ಕೇವಲ ಕಲಿಯಲು ತೆರುವ ಶುಲ್ಕವಲ್ಲ. ಜೀವನ ರೂಪುಗೊಳ್ಳಲು ಸಂಸ್ಥೆಯು ಸಹಕಾರ, ಮಾರ್ಗದರ್ಶನ, ಒತ್ತಾಸೆ ಎಲ್ಲಾ ನೀಡುತ್ತದೆ. ಅದಕ್ಕಾಗಿ ವಿದ್ಯಾರ್ಥಿಯು ಕೃತಜ್ಞನಾಗಿರಬೇಕು. ಐ.ಟಿ. ಕ್ಷೇತ್ರದ ನಾರಾಯಣಮೂರ್ತಿಗಳು ಅವರು ಶಿಕ್ಷಣ ಪಡೆದ ಕಾನ್ಪುರದ ಐ.ಐ.ಟಿ.ಗೆ ಏಳು ಕೋಟಿ ರೂಪಾಯಿ ಕೊಟ್ಟಿದ್ದಾರೆ. ಅದಕ್ಕೇ ನಾನು ಗೋಪಾಲಕೃಷ್ಣನ್ ಅವರಿಗೆ 'ಚೆನ್ನೈನ ಐ.ಐ.ಟಿ.ಗೆ ಏಳು ಕೋಟಿ ಕೊಡಿ' ಎಂದು ಹೇಳಿದ್ದೆ. ಆಗ ನಾನು ಅದರ ಅಧ್ಯಕ್ಷನಾಗಿದ್ದೆ.

**ಹೊ :** ವಿಶಾಲ ತಳಹದಿಯ ಮೇಲಿನ ಆರ್ಥಿಕ ಅಭಿವೃದ್ಧಿಯ ಬಗ್ಗೆ ಏನೋ ಹೇಳುತ್ತಿದ್ದಿರಿ...

**ಯು. ಆರ್. ರಾವ್ :** ಮುಖ್ಯವಾಗಿ ನಾವು ಅಗತ್ಯ ಸರಕು ಉತ್ಪಾದನೆಯ ಕೈಗಾರಿಕೆಗಳು ಮತ್ತು ಸೇವಾಕ್ಷೇತ್ರದ ಕೈಗಾರಿಕೆ, ಎರಡರ ಬೆಳವಣಿಗೆಯನ್ನೂ ಕಾದುಕೊಳ್ಳಬೇಕು. ಸರಕು ಉತ್ಪಾದನಾ ಕೈಗಾರಿಕೆಗಳಲ್ಲಿ ಕಳೆದ ವರ್ಷ ಶೇ. ೧೨ರಷ್ಟು ಬೆಳವಣಿಗೆ ಕಂಡುಬಂದಿತ್ತು; ಆದರೆ ಈ ವರ್ಷದ ಮೊದಲ ಮೂರು ತಿಂಗಳಲ್ಲಿ ಅದು ಕಡಿಮೆಯಾಗಿದೆ. ಕೃಷಿ ಕ್ಷೇತ್ರದಲ್ಲಿ ಶೇ. ೪ರಷ್ಟು ಮತ್ತು ಒಟ್ಟಾರೆ ಸರಾಸರಿ ಶೇ. ೯ರಷ್ಟು ಬೆಳವಣಿಗೆ ನಮ್ಮಲ್ಲಿ ಸ್ಥಾಯಿಯಾಗಿರಬೇಕು. ಹಾಗೆಂದು ಸುಮ್ಮನೆ ಮುನ್ನುಗ್ಗಲು ಆಗುವುದಿಲ್ಲ. ನಮ್ಮ ಮೂಲ ಕೈಗಾರಿಕೆಗಳು ದುಃಸ್ಥಿತಿಯಲ್ಲಿವೆ. ಕಾರಣ, ಏರುತ್ತಿರುವ ಬೆಲೆಗಳು; ಅಲ್ಲದೆ, ನಮ್ಮ ಉತ್ಪಾದನಾ ವಿಧಾನಗಳು ಪೈಪೋಟಿಗೆ ಇಳಿಯಲು ಅನುಕೂಲಕರವಲ್ಲ. ಜವಳಿ ಕೈಗಾರಿಕೆಯ ಪರಿಸ್ಥಿತಿ ನೋಡಿ, ಚೀಣಾದಿಂದ ಒಳನುಗ್ಗುವ ಬಟ್ಟೆಗೆ ನಾವು ಸ್ಪರ್ಧೆ ನೀಡಲಾಗಿಲ್ಲ. ಆ ದೇಶವು ಈ ಕೈಗಾರಿಕೆಯನ್ನು ಬೆಳೆಸುವ ರೀತಿ ನಮಗೆ ಪಾಠವಾಗಬೇಕು. ನಿರಂತಕರ ಆರ್ಥಿಕ ಅಭಿವೃದ್ಧಿಗಾಗಿ ಖಾತ್ರಿಯಾದ ಕ್ರಮಗಳು ಅಗತ್ಯ. ಮೂಲಭೂತ ಸೌಕರ್ಯಗಳು (ಕನ್ನಡದಲ್ಲಿ ಅದನ್ನು ಕೆಲವರು 'ಒಳಹಂದರ' ಎನ್ನುತ್ತಾರೆ; ಇಂಗ್ಲಿಷಿನಲ್ಲಿ 'ಇನ್‌ಫ್ರಸ್ಟ್ರಕ್ಚರ್') ವೃದ್ಧಿಯಾಗದೆ ನಿಶ್ಚಿತ ಆರ್ಥಿಕ ಬೆಳವಣಿಗೆ ಸಾಧ್ಯವಿಲ್ಲ. ನಮ್ಮ ದೊಡ್ಡ ಸಮಸ್ಯೆ ಇಂಧನದ್ದು; ಆಮೇಲೆ ಶಿಕ್ಷಣ, ಕುಶಲ ಕಾರ್ಮಿಕರ ಲಭ್ಯತೆ, ರಸ್ತೆ ಮುಂತಾದುವು. ನಮ್ಮ ಯೋಜನೆಗಳು ಈ ದೃಷ್ಟಿಯಲ್ಲಿ ಸಫಲವಾಗಿಲ್ಲ. ಬೆಳವಣಿಗೆಯು ಶೇ. ೯ ಇರಬೇಕಾದರೆ ಇಂಧನ ಕ್ಷೇತ್ರದಲ್ಲಿ ಕಡೇ ಪಕ್ಷ ಶೇ. ೧ರಷ್ಟು ನಿರಂತರ ಅಭಿವೃದ್ಧಿ ಅಗತ್ಯವಾಗುತ್ತದೆ.

**ಹೊ :** ಇಂಧನಕ್ಕೆ ಸಂಬಂಧಿಸಿದಂತೆ ಮುಂದಿನ ಹಾದಿ ಕಾಣದಾಗಿದೆಯೆ ? ನಾವು ಅಸಹಾಯಕರಾಗಿದ್ದೇವೆಯೆ ?

**ಯು.ಆರ್.ರಾವ್ :** ಅಸಹಾಯಕತೆ ಎನ್ನುವುದಕ್ಕಿಂತ ಆದ್ಯತೆಗಳ ಅಜ್ಞಾನ ಎನ್ನಬಹುದು. ವಿಶ್ವಾಸಾರ್ಹವಲ್ಲದ ದಿಕ್ಕುಗಳಲ್ಲಿ ವ್ಯರ್ಥವಾಗಿ ಹಣವನ್ನು ತೊಡಗಿಸಿ ಸೋತಿದ್ದೇವೆ.

**ಹೊ :** ಎನರ್ಜಿ ಅಥವಾ ಊರ್ಜೆಯ ಕ್ಷೇತ್ರದ ಬಗ್ಗೆ ಏನು ಹೇಳುತ್ತೀರಿ ?

**ಯು. ಆರ್. ರಾವ್ :** ಪರಮಾಣು ಇಂಧನದಿಂದ ವಿದ್ಯುಚ್ಛಕ್ತಿಯ ಉತ್ಪಾದನೆಯತ್ತ ಸಾಗುವುದು ನಮಗೆ ಅನಿವಾರ್ಯ. ನಮ್ಮ ದೇಶ ಮಾತ್ರವಲ್ಲ, ಎಲ್ಲರಿಗೂ ಅದೇ ದಾರಿ. ಯಾವ ಪರಿಮಾಣದಲ್ಲಿ ಎಂಬುದಷ್ಟೇ ಪ್ರಶ್ನೆ. ಪ್ರಸ್ತುತ ನಮ್ಮ ದೇಶದ ವಿದ್ಯುದುತ್ಪಾದನೆಯ ಕ್ಷಮತೆ ೧,೩೦,೦೦೦ ಮೆಗಾವಾಟ್‌ಗಳಷ್ಟು. ನಮಗೆ ಅಗತ್ಯವಿರುವುದು ಅದರ ಎರಡರಷ್ಟು. ಜನಸಂಖ್ಯೆ ಹೆಚ್ಚಿದಂತೆ ಅದು ಇನ್ನೂ ಹೆಚ್ಚು ಬೇಕಾಗುತ್ತದೆ. ಮುಂದಿನ ೪೦ ವರ್ಷಗಳಲ್ಲಿ ಅದು ಈಗಿರುವುದಕ್ಕಿಂತ ಮೂರರಷ್ಟು ಬೇಕಾಗುತ್ತದೆ. ೧೯೪೫-೪೭ರ ಅವಧಿಯಲ್ಲಿ ಚೀಣಾದ ವಿದ್ಯುತ್ ಉತ್ಪಾದನೆ ನಮ್ಮದರಷ್ಟೇ ಇತ್ತು, ಆದರೆ ಈಗ ಅಲ್ಲಿ ೨,೫೦,೦೦೦ ಮೆಗಾವಾಟ್‌ಗಳಷ್ಟಿದೆ. ಅಲ್ಲಿಯ ಆರ್ಥಿಕ ಬೆಳವಣಿಗೆಯು ಇದಿಲ್ಲದೆ ಸಾಧ್ಯವಾಗುತ್ತಿತ್ತೆ? ವಿದ್ಯುದುತ್ಪಾದನೆಯ ಸಂದರ್ಭದಲ್ಲಿ ನಾವು ವಿಶ್ವದಲ್ಲಿ ಹೆಚ್ಚುತ್ತಿರುವ ಉಷ್ಣತೆಯ ಮಟ್ಟವನ್ನು ಗಮನಿಸಬೇಕು. ಸೌರಶಕ್ತಿಯಿಂದ ಈಗ ೫ರಿಂದ ೬ ಸಾವಿರ ಮೆಗಾವಾಟ್ ವಿದ್ಯುತ್ ಉತ್ಪಾದಿಸುತ್ತಿದ್ದೇವೆ. ಗಾಳಿಯಿಂದ ಉತ್ಪಾದಿಸಲು ಈಗಿರುವುದಕ್ಕಿಂತಲೂ ದೊಡ್ಡ ಗ್ರಿಡ್‌ಗಳನ್ನು ತಯಾರಿಸಿಕೊಳ್ಳಬೇಕು. ಗಾಳಿ ಮೂಲದ್ದು ಈಗ ೧,೦೦೦ ಮೆಗಾವಾಟ್‌ಗಳಷ್ಟು. ಅದರಲ್ಲಿ ಏರಿಳಿತಗಳಿರಲು ಸಾಧ್ಯ. ಆದ್ದರಿಂದ ಗಾಳಿ ಮೂಲವೊಂದನ್ನೇ ಆಶ್ರಯಿಸಿದರೆ ಏರುಪೇರುಗಳನ್ನು ಎದುರಿಸಬೇಕಾಗುತ್ತದೆ.

**ಹೊ :** ೨೦೨೦ರ ವೇಳೆಗೆ ಪರಮಾಣು ಮೂಲದ ಇಂಧನದಿಂದ ವಿದ್ಯುದುತ್ಪಾದನೆಯು ೨೦,೦೦೦ ಮೆಗಾವಾಟ್‌ಗಳಷ್ಟು ಮಾತ್ರವೆಂದು ವರದಿಯಾಗಿದೆ. ಅದೆಂತಹ ಅಭಿವೃದ್ಧಿ?

**ಯು. ಆರ್. ರಾವ್ :** ೨೦೨೦ರ ವೇಳೆಗೆ ಅದು ಕಡೇಪಕ್ಷ ೪೦,೦೦೦ ಮೆಗಾವಾಟ್‌ಗಳಷ್ಟು ಆಗಬೇಕು. ೨೦೧೦ರ ವೇಳೆಗೆ ರಷ್ಯಾದ ಸಹಕಾರದಿಂದ ನಿರ್ಮಾಣವಾಗುವ ಘಟಕಗಳಿಂದ ೧೦,೦೦೦ ಮೆಗಾವಾಟ್‌ಗಳಷ್ಟು ದೊರೆಯುತ್ತದೆ.

**ಹೊ :** ಆದರೆ ರಷ್ಯಾದ ಜೊತೆ ಒಪ್ಪಂದ ಮಾಡಿಕೊಳ್ಳಲು ನಮ್ಮ ಪ್ರಧಾನಿ ಹಿಂದೇಟು ಹಾಕಿದರಲ್ಲ! ಅವರಿಗೆ ಅಮೆರಿಕಾದೊಡನೆ ೧೨೩ ಒಪ್ಪಂದದ ಮೇಲೆ ಗೀಳು. ಅದರಿಂದ ೨೦೪೦ರ ವೇಳೆಗೆ ೪೦,೦೦೦ ಮೆಗಾವಾಟ್‌ಗಳಷ್ಟು ಉತ್ಪಾದನೆಯಾಗುತ್ತದೆ ಎನ್ನುತ್ತಾರಲ್ಲ?

**ಯು. ಆರ್. ರಾವ್ :** ಅದು ಸರಿಯಲ್ಲ. ನಮ್ಮ ವರದಿಯಲ್ಲಿ ಇದನ್ನೆಲ್ಲಾ ವಿವರವಾಗಿ ಹೇಳಿದ್ದೇವೆ. ಜಲಮೂಲದ ವಿದ್ಯುತ್ ೫೦,೦೦೦ ಮೆಗಾವಾಟ್‌ಗಳಷ್ಟು ಮಾತ್ರ. ಅತಿಸಣ್ಣ ಪ್ರಮಾಣದ ಜಲವಿದ್ಯುತ್ ಘಟಕಗಳ ಸ್ಥಾಪನೆಗೆ ಅವಕಾಶವಿದೆ. ಅದರಿಂದ ಅದು ಹೆಚ್ಚಿನ ಪ್ರಮಾಣಕ್ಕೇರಬಹುದು, ಅಷ್ಟೆ.

**ಹೊ :** ಸೌರಶಕ್ತಿಯಿಂದ ಪ್ರಯೋಜನ ಪಡೆಯಬಹುದಲ್ಲವೆ ?

**ಯು. ಆರ್. ರಾವ್ :** ಅದು ಅಷ್ಟು ಸರಳವಲ್ಲ. ನ್ಯಾನೋ ತಂತ್ರಜ್ಞಾನದಿಂದ ಸೂಕ್ಷ್ಮಾತಿಸೂಕ್ಷ್ಮ ಸೋಲಾರ್ ಸೆಲ್‌ಗಳನ್ನು ಮಾಡಿದರೆ ಆ ಸೆಲ್‌ಗಳ ಕ್ಷಮತೆ ಹೆಚ್ಚಬಲ್ಲದು. ನಮ್ಮ ದೇಶದ ಸಮಸ್ಯೆ ಇದೇ : ನ್ಯಾನೋ ಕ್ಷೇತ್ರದಲ್ಲಿ ಸಂಶೋಧನೆ ನಡೆಯುತ್ತದೆ; ಅದನ್ನು ಉಪಯೋಗಿಸಿ ನಮಗೆ ಅವಶ್ಯಕತೆ ಇರುವ ರೂಪದಲ್ಲಿ ಜಾಗ್ರತೆಯಾಗಿ ಬೆಳವಣಿಗೆಯನ್ನು ಸಾಧಿಸುವುದಿಲ್ಲ. ಉದಾಹರಣೆಗೆ, ಎಲ್.ಸಿ.ಡಿ. ನೋಡಿ : ಹಾಗೆಂದರೆ ಲಿಕ್ವಿಡ್ ಕ್ರಿಸ್ಟಲ್ ಡಿಸ್‌ಪ್ಲೆ. ಅದನ್ನು ಕುರಿತಂತೆ ನಮ್ಮ ದೇಶದಲ್ಲಿ ಮುಂಚೆಯೇ ಪ್ರಯೋಗಗಳು ನಡೆದುವು. ಆದರೂ ನಮ್ಮ ಕೈಗಡಿಯಾರಗಳಿಗೆ ಎಲ್.ಸಿ.ಡಿ. ಈಗಲೂ ಜಪಾನಿನಿಂದಲೇ ಬರಬೇಕು !

**ಹೊ :** ಅದು ಯಾರ ತಪ್ಪು ? ವಿಜ್ಞಾನಿಗಳದ್ದೆ ?

**ಯು. ಆರ್. ರಾವ್ :** ಯಾರ ತಪ್ಪು ಎಂಬುದಲ್ಲ ಪ್ರಶ್ನೆ. ನಮ್ಮಲ್ಲಿ ಭವ್ಯ ಭವಿಷ್ಯದ ಕಲ್ಪನೆಯು ಸಾಂದ್ರವಾಗಿ ಮೂಡುತ್ತಿಲ್ಲ. ಅಂತಹ ಕಲ್ಪನೆ ಮೂಡಿದ್ದು ಐ.ಟಿ. ಕ್ಷೇತ್ರದಲ್ಲಿ. ಅಲ್ಲಿ ಅಭಿವೃದ್ಧಿ ಅಗಾಧವಾಗಿ ಆಗಿಲ್ಲವೆ ?

**ಹೊ :** ಅಲ್ಲಿ ಅಪಾರವಾದ ಹಣವಿದೆ, ಆದರೆ ಸಣ್ಣ ಪ್ರಮಾಣದಲ್ಲಿ ಕೂಡ ಅವರು ಮೂಲ ಸೌಲಭ್ಯಗಳ ನಿರ್ಮಾಣಕ್ಕೆ ಹಣ ತೊಡಗಿಸಿಲ್ಲವಲ್ಲ! ಅದಿರಲಿ, ಬಾಹ್ಯಾಕಾಶದಿಂದ ವಿದ್ಯುತ್ ಶಕ್ತಿಯನ್ನು ತಂದುಕೊಳ್ಳುವ ಸಾಧ್ಯತೆ ಎಷ್ಟರಮಟ್ಟಿಗಿದೆ ?

**ಯು. ಆರ್. ರಾವ್ :** ಪ್ರಯತ್ನ ನಡೆಯುತ್ತಿದೆ. ಇಂತಿಷ್ಟು ವರ್ಷಗಳಲ್ಲಿ ಅದು ನೆರವೇರುತ್ತದೆಂದು ಹೇಳುವುದು ಕಷ್ಟ. ಇನ್ನೊಂದು ಕ್ಲಿಷ್ಟವಾದ ಸಮಸ್ಯೆ ಇದೆ : ಬಾಹ್ಯಾಕಾಶದಿಂದ ವಿದ್ಯುತ್ತನ್ನು ರವಾನಿಸಿಕೊಳ್ಳಲು ವೆಚ್ಚ ಅಗಾಧವಾಗಿರುತ್ತದೆ. ಒಂದು ಕಿಲೋವಾಟ್‌ಗೆ ೨೦,೦೦೦ ಡಾಲರು ವೆಚ್ಚ ತಗುಲಬಹುದು. ಯಾರಾದರೂ ಬಾಹ್ಯಾಕಾಶಕ್ಕೆ ಪ್ರವಾಸ ಹೋಗಬೇಕಾದರೆ ೨೦೦ ಲಕ್ಷ ಡಾಲರು ಬೇಕಾಗುತ್ತದೆ, ಗೊತ್ತೆ? ಅದಕ್ಕೇ ಬಾಹ್ಯಾಕಾಶವೆಂಬುದು ಏಳು ಸ್ವಾರುಗಳ ಸಮಾಚಾರ ಎನ್ನುವುದು! ಇರಲಿ, ಬಾಹ್ಯಾಕಾಶದಿಂದ ವಿದ್ಯುತ್ತನ್ನು ತರಲು ಸಮರ್ಥವಾದರೆ ಅಲ್ಲಿ ಪ್ರವಹನ ಪ್ರಕ್ರಿಯೆಯಲ್ಲಿ, ಅಂದರೆ ಟ್ರಾನ್ಸ್‌ಮಿಶನ್‌ನಲ್ಲಿ, ನಷ್ಟವಿಲ್ಲದಂತೆ ಮಾಡಬಹುದು.

**ಹೊ :** ಉಪಗ್ರಹಗಳ ವಿಚಾರಕ್ಕೆ ಬಂದರೆ ಭಾರತದ ಸ್ಥಾನ ಯಾವುದು ?

**ಯು. ಆರ್. ರಾವ್ :** ನಾವು ಯಾರಿಗೂ ಹಿಂದಿಲ್ಲ. ರಾಕೆಟ್‌ಗಳ ವಿಷಯದಲ್ಲಿ ಚೀಣಾ ಬಹಳ ಮುಂದಿದೆ. ನಮಗಿಂತಲೂ ಮುಂಚೆಯೇ ಅವರು ಯೋಜನೆಗಳನ್ನು ಕೈಗೊಂಡಿದ್ದರು ಮತ್ತು ಇತರ ದೇಶಗಳ ಸಹಕಾರವೂ ಅವರಿಗೆ ಹೇರಳವಾಗಿ ದೊರೆಯಿತು.

**ಹೊ :** ೨೦೫೦ರ ವೇಳೆಗೆ ನಿಮ್ಮ, ಅಂದರೆ ನಮ್ಮ ದೇಶದ, ಭವ್ಯ ಕಲ್ಪನೆ ಏನು ?

**ಯು. ಆರ್. ರಾವ್ :** ನಮ್ಮ ದೃಷ್ಟಿಯಲ್ಲಿ ಹಲವು ಮಾರ್ಪಾಟುಗಳನ್ನು ಮಾಡಿಕೊಳ್ಳುತ್ತಿದ್ದೇವೆ. ಬರುವ ವರ್ಷಗಳಲ್ಲಿ ಚಂದ್ರಯಾನದ ಯೋಚನೆ ಇದೆ. ಮಾನವನನ್ನು ಚಂದ್ರನಲ್ಲಿಗೆ ಕಳಿಸುವ ಯೋಜನೆಯಲ್ಲಿ ಮೊದಲ ಪ್ರಯೋಗಕ್ಕೇ ಆರುಸಾವಿರ ಕೋಟಿ ರೂಪಾಯಿಗಳು ಬೇಕು. ಇನ್ನು ಆರೇಳು ವರ್ಷಗಳಲ್ಲಿ ನಾವು ಅದರ ಪ್ರಯತ್ನ ಮಾಡಬಹುದು. ಹಣದ ಪ್ರಶ್ನೆಗೆ ನಾವು ಕೊಟ್ಟುಕೊಳ್ಳಬೇಕಾದ ಉತ್ತರ ಇದು : ಅಷ್ಟು ಖರ್ಚು ಮಾಡಲಾಗದಿದ್ದರೆ ಬಾಹ್ಯಾಕಾಶ ವಿಭಾಗವನ್ನು ಮುಚ್ಚಿಬಿಡಬೇಕು, ಅಷ್ಟೆ. ೬,೦೦೦ ಕೋಟಿಗಳೆಂದರೆ ೨೦೦೦ ಮೆಗಾವಾಟ್ ವಿದ್ಯುತ್ತಿನ ಲೆಕ್ಕ. ಆದರೆ ನಮಗೆ ದೊರೆಯಬಹುದಾದ ವಿದ್ಯುತ್ತಿನ ಪ್ರಮಾಣ ೪೦,೦೦೦ ಮೆಗಾವಾಟ್‌ಗಳಷ್ಟು. ಹೀಗಿರುವಾಗ ೬೦೦೦ ಕೋಟಿ ತೊಡಗಿಸಲು ಅಸಮರ್ಥರೆಂದರೆ ಏನರ್ಥ ?

**ಹೊ :** ಒರಿಸ್ಸಾದಲ್ಲಿ ಕಬ್ಬಿಣದ ಅದಿರನ್ನು ಹೊರತೆಗೆದು ಕಡಿಮೆ ಬೆಲೆಗೆ ಮಾರಿಕೊಳ್ಳುವುದನ್ನು ನಿಯಂತ್ರಿಸಿದರೆ ೬೦೦೦ ಅಲ್ಲ, ೬೦,೦೦೦ ಕೋಟಿ ಬೇಕಾದರೂ ತೊಡಗಿಸಲು ನಮಗೆ ಸಾಮರ್ಥ್ಯ ಇರುತ್ತದೆ.

**ಯು. ಆರ್. ರಾವ್ :** ಮಾನವನನ್ನು ಚಂದ್ರನಲ್ಲಿಗೆ ಕಳಿಸುವ ಯೋಜನೆಯಲ್ಲಿ ನಾವು ಮರು-ಉಪಯೋಗ ಮಾಡಬಹುದಾದ ಕೋಶವನ್ನು ಹಿಂದಿರುಗಿ ತರುವುದರಲ್ಲಿ ಯಶಸ್ವಿಯಾಗಿದ್ದೇವೆ. ಅದರಲ್ಲಿ ಅತಿ ಹೆಚ್ಚಿನ ಬೆಲೆ ಬಾಳುವ ಉಪಕರಣಗಳು ಕೆಲವಿವೆ. ಅವು ಸಂಪೂರ್ಣವಾಗಿ ತಮ್ಮ ಸಾಮರ್ಥ್ಯವನ್ನು ಕಾಯ್ದುಕೊಂಡಿವೆ. ಬಾಹ್ಯಾಕಾಶಕ್ಕೆ ಹೋಗಿ ಹಿಂದಿರುಗಿದಾಗ ಇದು ಸಾಧ್ಯವಾಗಿದೆಯೆಂದರೆ ಮಾನವನನ್ನು ಬಾಹ್ಯಾಕಾಶಕ್ಕೆ ಕಳಿಸುವ ಯತ್ನದಲ್ಲಿ ಒಂದು ಮೆಟ್ಟಿಲು ಹತ್ತಿದ್ದೇವೆಂದೇ ಅರ್ಥ. ಬಾಹ್ಯಾಕಾಶದಲ್ಲಿ ವಿಕಿರಣವನ್ನು ತಡೆದುಕೊಳ್ಳುವ ಕ್ಷಮತೆ ಇತ್ಯಾದಿ ಇನ್ನೂ ಹಲವು ಮೆಟ್ಟಿಲುಗಳಿವೆ. ಪ್ರಯತ್ನ, ಸಂಶೋಧನೆ, ಮುಂದುವರಿಯುತ್ತಿವೆ.

**ಹೊ:** ಇನ್ನೊಂದು ಪ್ರಶ್ನೆ: ಅಂಟಾರ್ಕ್‌ಟಿಕಾ ಯೋಜನೆಯಲ್ಲೂ ನಿಮ್ಮ ಪಾತ್ರವಿದೆ. ಆ ಯೋಜನೆಯ ಬಗ್ಗೆ ಹೇಳುತ್ತೀರಾ ?

**ಯು. ಆರ್. ರಾವ್ :** ಒಂದಂತೂ ನಿಜ. ಅದರಲ್ಲಿ ಸದ್ಯಕ್ಕೆ ಯಾವ ಆರ್ಥಿಕ ಲಾಭವೂ ಇಲ್ಲ. ಏಕೆಂದರೆ, ಅದಕ್ಕೆ ಅಲ್ಲಿ ಅವಕಾಶವಿಲ್ಲ. ಅಲ್ಲಿಯ ಒಪ್ಪಂದಗಳ ಸ್ವರೂಪವೇ ಅಂಥದು. ನಾವಾಗಲಿ, ಅಮೆರಿಕಾದಂತಹ ದೇಶವಾಗಲಿ



ಪ್ರೊ|| ಯು. ಆರ್. ರಾವ್ ಅವರೊಡನೆ ಶ್ರೀ ಎಸ್. ಸುರೇಂದ್ರ, ಡಾ|| ಜಿ. ರಾಮಕೃಷ್ಣ ಮತ್ತು ಶ್ರೀ ಕೆ. ಎಸ್. ಪಾರ್ಥಸಾರಥಿ

ಅಲ್ಲಿ ಹಕ್ಕು ಸ್ಥಾಪಿಸಿಕೊಳ್ಳುವುದು ಸುಲಭವಲ್ಲ. ಒಪ್ಪಂದಗಳನ್ನು ಮಾಡಿಕೊಳ್ಳುವ ಸಮಿತಿಯ ಚುನಾಯಿತ ಅಧ್ಯಕ್ಷ ನಾನು. ತನ್ನ ಹಕ್ಕುಗಳ ಒತ್ತಾಯಕ್ಕೆ ಬ್ರಿಟನ್ ಯತ್ನಿಸಿದೆ. ೧೯೫೯ರಲ್ಲಿ ಮಾಡಿಕೊಳ್ಳಲಾದ ಒಪ್ಪಂದಕ್ಕೆ ಮುಂಚೆಯೇ ಬ್ರಿಟನ್ ಏಳು ಶಿಖರಗಳ ಮೇಲೆ ತನ್ನ ಹಕ್ಕನ್ನು ಸ್ಥಾಪಿಸಿಕೊಂಡಿತ್ತು. ಅದೇ ವೇಳೆಯಲ್ಲಿ ಆಸ್ಟ್ರೇಲಿಯಾ, ಅರ್ಜೆಂಟೈನಾ, ಅಮೆರಿಕಾ, ಮುಂತಾದ ಕೆಲವು ದೇಶಗಳು ಹಕ್ಕು ಸ್ಥಾಪಿಸಿಕೊಳ್ಳಲು ಯತ್ನಿಸಿದ್ದುವು. ಆದರೆ ಆ ಕಾಲದ ಹಕ್ಕುಗಳನ್ನು ಸ್ಥಗಿತಗೊಳಿಸಲಾಗಿದೆ. ಮುಂದಿನ ಹತ್ತು ವರ್ಷಗಳಲ್ಲಿ ಯಾರೂ ಹಕ್ಕೊತ್ತಾಯ ಮಾಡುವಂತಿಲ್ಲ. ಆಮೇಲೆ ಏನಾಗುವುದೋ ಈಗಲೇ ಹೇಳಲು ಬರುವುದಿಲ್ಲ.

**ಹೊ :** ಹಾಗಿದ್ದರೆ ನಾವೇಕೆ ಅಲ್ಲಿಗೆ ಹೋಗಿದ್ದೇವೆ ?

**ಯು. ಆರ್. ರಾವ್ :** ಯಾವ ಹಕ್ಕನ್ನೂ ಸ್ಥಾಪಿಸಿಕೊಳ್ಳಲು ಅಲ್ಲ, ಕೆಲವು ಸಂಶೋಧನೆಗಳಿಗೆ ಅದೊಂದು ಉತ್ತಮ ಪ್ರಯೋಗಶಾಲೆ. ಅದಕ್ಕೇ ನಾವಲ್ಲಿಗೆ ಹೋಗಿರುವುದು. ಅದನ್ನು ಹಾಗೆಯೇ ಉಳಿಸಬೇಕೆಂಬುದು ನಮ್ಮ ಆಶಯ. ಆದರೆ ಆರ್ಕ್‌ಟಿಕ್‌ನ ವಿಷಯ ಬೇರೆ. ಅಲ್ಲಿ ಹಕ್ಕುಗಳ ಸ್ಥಾಪನೆ ಆಗಲೇ ಆಗಿಹೋಗಿದೆ, ಹೊಸ ಪ್ರಯತ್ನಗಳೂ ಜಾರಿಯಲ್ಲಿವೆ. ಬ್ರಿಟನ್ನಿನ ತೈಲೋದ್ಯಮ ಒಂದು ಉದಾಹರಣೆ.

**ಹೊ :** ನೀವು ಬಾಹ್ಯಾಕಾಶದ ಶಾಂತಿಯುತ ಸಹಕಾರ ಸಂಸ್ಥೆಯ ಅಧ್ಯಕ್ಷರಾಗಿದ್ದಿರಿ. ಅದರ ಜವಾಬ್ದಾರಿ ಮತ್ತು ಚಟುವಟಿಕೆಗಳೇನು ?

**ಯು. ಆರ್. ರಾವ್ :** ಬಾಹ್ಯಾಕಾಶಕ್ಕೆ ಸಂಬಂಧಿಸಿದ ಎಲ್ಲ ಒಪ್ಪಂದಗಳಿಗೂ ಈ ಸಂಸ್ಥೆಯೇ ಹೊಣೆ. ಮೊದಲ ಒಪ್ಪಂದದಲ್ಲೇ ಬಾಹ್ಯಾಕಾಶವು ಶಾಂತಿಯುತ ಉದ್ದೇಶಗಳಿಗೆ ಮೀಸಲಾಗಿರಬೇಕೆಂಬ ಮಾತು ಇದೆ. ಆದರೆ ಬೇರೆ ಉದ್ದೇಶಗಳಿಗೆ ಬಳಸಿಕೊಳ್ಳುತ್ತಿರುವ ದೇಶಗಳಿವೆಯೆಂಬುದು ನಿಜ.

**ಹೊ :** ಪೋಲೆಂಡಿನಲ್ಲಿ ಅಮೆರಿಕಾ ಸ್ಥಾಪಿಸಹೊರಟಿರುವ ವೀಕ್ಷಣಾಲಯದ ಬಗ್ಗೆ ರಷ್ಯಾ ದೇಶವು ತಕರಾರು ಮಾಡಿದೆಯಲ್ಲವೆ ?

**ಯು. ಆರ್. ರಾವ್ :** ನೋಡಿ, ಮೊದಲಿಗೆ ಎಲ್ಲವನ್ನೂ ಶಾಂತಿಯುತ ಚಟುವಟಿಕೆಗಳಿಗೆಂದೇ ಸ್ಥಾಪಿಸಲಾಗುತ್ತದೆ. ಆಮೇಲಿನ ಕೃತ್ಯಗಳನ್ನು ನಿಯಂತ್ರಿಸಬೇಕು.

**ಹೊ :** ಕಡೆಯಲ್ಲಿ ಒಂದು ವೈಯಕ್ತಿಕ ಪ್ರಶ್ನೆ : ನಿಮ್ಮ ತಾತನವರು ಭಾಗವತರಾಗಿದ್ದರೆಂದು ಹೇಳಿದಿರಿ. ನಿಮಗೆ ಈಗಲೂ ಸಂಗೀತ, ಯಕ್ಷಗಾನ ಇತ್ಯಾದಿಗಳಲ್ಲಿ ಆಸಕ್ತಿಯುಂಟೆ ?

**ಯು. ಆರ್. ರಾವ್ :** ಆಸಕ್ತಿ ಇದೆ, ಆದರೆ ಸಮಯ ಸಾಲದು. ನನ್ನ ತಾಯಿಯ ತಂದೆ



ಭಾಗವತರಾಗಿದ್ದರು; ಆದರೆ ತಾಯಿಯ ಮಕ್ಕಳು ಯಾರೂ ಭಾಗವತರಾಗಿಲ್ಲ. ಸ್ವಲ್ಪಮಟ್ಟಿಗೆ ಸಂಗೀತ ಕೇಳುವುದು ಮಾತ್ರವಷ್ಟೇ ಉಳಿದಿದೆ.

**ಹೊ :** ನೀವು ಯಾರೂ ಭಾಗವತರಾಗಲಿಲ್ಲ ಎಂಬುದಕ್ಕಿಂತಲೂ ಮಿಗಿಲಾದದ್ದು ನೀವು ಯಾರಿಗೂ ಸರ್ವಥಾ ಭಾರವಾಗಲಿಲ್ಲವೆಂಬುದು. ದೇಶದ ಭಾರ ಇಳಿಸುವುದರಲ್ಲಿ ನಿಮ್ಮದು ಮಹತ್ತಾದ ಪಾತ್ರವಿದೆ, ಅದಕ್ಕೆ ನಮ್ಮ ಅಭಿನಂದನೆಗಳು. ನಿಮ್ಮೊಡನೆ ಮಾತನಾಡುವುದೆಂದರೆ ಅದು ಕೇವಲ ಬಾಹ್ಯಾಕಾಶಕ್ಕೆ ಸೀಮಿತಗೊಳ್ಳುವುದಿಲ್ಲ. ನಿಮ್ಮ ಕಾರ್ಯಕ್ಷೇತ್ರದ ವ್ಯಾಪ್ತಿ ಅಷ್ಟು ವಿಶಾಲವಾದುದು. ಇಷ್ಟು ಸಮಯ ಕೊಟ್ಟು ಬಹಳ ಉಪಯುಕ್ತವಾದ ವಿಷಯಗಳನ್ನು ಮನದಟ್ಟುಮಾಡಿಕೊಟ್ಟಿದ್ದೀರಿ. ನಮ್ಮ ಪತ್ರಿಕೆಯ ಎಲ್ಲ ಓದುಗರ ಪರವಾಗಿ ನಿಮಗೆ ವಂದನೆಗಳು. ○



# ಜಗದ ಹಾದಿಗಳು

ಆ ದಿನಗಳಿಂದ ಆರಂಭಿಸುತ್ತೇನೆ
ನೆನಪುಗಳ ಹೆಕ್ಕಿ ತೆಗೆಯಲು...
ಅಲ್ಲಿ ಮತ್ತೇನೂ ಕಾಣುವುದಿಲ್ಲ
ಜಿಟಿಜಿಟಿ ಮಳೆಯ ಹೊರತು
ಆಕಾಶಕ್ಕೆ ಮುಖಮಾಡಿ
ಕೈ ಚಾಚಿ ಅಂಗಳದಲಿ ನಿಂತು

ಆತು ಗುಟುಕರಿಸಿದ ಹನಿಗಳು
ಭೂಮಿಗೆ, ಬದುಕಿಗೆ, ಕಾವ್ಯಕ್ಕೆ
ತುಂಬಿದ ಸಿಹಿ;

ಕಿಟಕಿಯ ಪರದೆಯೊಳಗಿಂದ
ನೋಡುತ್ತೇನೆ...
ಕುಂಟೋಬಿಲ್ಲೆ ಆಡಿದ ಎದುರು...
ಮನೆಯಂಗಳ
ಕೆಸರಿನ ಕಡಲಾಗಿದೆ,
ಅಲ್ಲೇ ಪಕ್ಕದ ನಡುರಸ್ತೆಯಲಿ
ಗಾಡಿಯೆತ್ತುಗಳು ಹೂತುಹೋಗಿವೆ
ಮಳೆಗೊಪ್ಪೆಯ ಹೊದ್ದ ಆ ಗಾಡಿಯವನ
ಬೆತ್ತಕ್ಕೆ ಮಲಕುತ್ತಿಲ್ಲ...
ಮಳೆ;

ಸುಮ್ಮನೆ ತೆರೆಯುವವೆ ಜಗದ ಹಾದಿಗಳು ?
ಇಲ್ಲ, ಸುರಿವ ಮಳೆ ನಿಲ್ಲಬೇಕು
ನಿಂತು ಮತ್ತೆ ಸುರಿಯಬೇಕು !

ಜ. ನಾ. ತೇಜಶ್ರೀ
ನಂ. ೧೨೩, 'ಹೊನ್ನು', ಹಳೇ ಬೋರ್‌ವೆಲ್ ಕಚೇರಿ ಹಿಂಭಾಗ
ವಿಶ್ವೇಶ್ವರಯ್ಯ ರಸ್ತೆ ಹತ್ತಿರ, ವಿದ್ಯಾನಗರ, ಹಾಸನ - ೫೭೩೨೦೧

ಡಿಸೆಂಬರ್ ೨೮, ಬೆಳಗ್ಗೆ ಬ್ಯಾಂಕಿಗೆ ಹೊರಟಿದ್ದೆ. ಜಿ.ಆರ್.ರವರಿಂದ ಬಂದ ಫೋನ್ ಕರೆ - 'ಶ್ರೀನಿವಾಸರಾಜುರವರು ಬೆಳಗ್ಗೆ ಹೋಗಿಬಿಟ್ಟರು'. ತಕ್ಷಣಕ್ಕೆ ಈ ಮಾತು ಅರ್ಥವೇ ಆಗಲಿಲ್ಲ. 'ಶ್ರೀನಿವಾಸರಾಜು ಯಾರು ? ಏನು ?' ಎನ್ನುವಂತೆ ಮನಸ್ಸು ಗೊಂದಲದ ಗೂಡಾಯಿತು. ಕಳೆದ ವಾರವಷ್ಟೇ, ಕೇಂದ್ರ ಸಾಹಿತ್ಯ ಅಕಾಡೆಮಿಯ ವಿಚಾರ ಸಂಕಿರಣವೊಂದರಲ್ಲಿ ಭೇಟಿಯಾಗಿದ್ದ, ನಗು ನಗುತ್ತಾ ಮಾತನಾಡಿದ್ದ ಶ್ರೀನಿವಾಸರಾಜುರವರು ಮರಣಿಸಿದರು ಎಂಬುದನ್ನು ಊಹಿಸುವುದಾದರೂ ಹೇಗೆ ಸಾಧ್ಯ ? ಆದ್ದರಿಂದ ಈ ಸಾವಿನ ವಾರ್ತೆ ಮನಸ್ಸಿನಾಳಕ್ಕೆ ಇಳಿಯಲೇ ಇಲ್ಲ. ಈ ಮಾತಿನರ್ಥ ಕುರಿತು ಚಿಂತಿಸುತ್ತಿದ್ದಂತೆ ಪರಿಸ್ಥಿತಿಯ ಗಂಭೀರತೆ ನನ್ನನ್ನು ಆವರಿಸಿತು. ಮನಸ್ಸು ಒಪ್ಪಲು ತಕರಾರು ಮಾಡುತ್ತಿದ್ದ ಈ ಸತ್ಯ ನೋವಿನ ಎಳೆಯನ್ನು ನನ್ನ ಮುಂದೆ ಹರಡಿತು. ಬ್ಯಾಂಕ್ ತಲುಪಿದ ತಕ್ಷಣ ಈ ನೋವನ್ನು ಹಂಚಿಕೊಳ್ಳಲು ಮೊದಲು ನೆನಪಾದದ್ದು ನನ್ನ ಮಗಳು. ವೆಲ್ಲೂರಿನಲ್ಲಿ ಓದುತ್ತಿರುವ ಮಗಳಿಗೆ ಸುದ್ದಿ ತಿಳಿಸಿದ್ದೇ ತಡ ಅವಳು ಗಾಬರಿಯಾಗಿ 'ಯಾಕೆ ? ಏನಾಗಿತ್ತು ?' ಅಂತ ದೂರವಾಣಿ ಕರೆ ಮಾಡಿದಳು. ಹೀಗೆ ಎರಡು ತಲೆಮಾರಿಗೆ ಸೇರಿದ ಅಮ್ಮ-ಮಗಳಿಬ್ಬರಿಗೂ ಪ್ರೋತ್ಸಾಹದ ಬೆಳಕು ಬೀರಿದ, ಸಮಾನಾಂತರವಾಗಿ ಸ್ಪಂದಿಸಿದ ಸಹೃದಯ ಜೀವಿ ದಿ|| ಶ್ರೀನಿವಾಸರಾಜುರವರು.

೧೯೭೪ರಲ್ಲಿ ನಾನು ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಐಚ್ಛಿಕ ಕನ್ನಡ ಓದುವ ಬಿ.ಎ. ವಿದ್ಯಾರ್ಥಿನಿ. ನಮ್ಮ ಕನ್ನಡ ವಿಭಾಗದ ಅಧ್ಯಾಪಕರುಗಳಿಗೂ ಶ್ರೀನಿವಾಸರಾಜುರವರಿಗೂ ಅಸಾಧ್ಯ ನಂಟು. (ಈ ಭಾಗ್ಯ ಬೆಂಗಳೂರಿನ ಹಲವಾರು ಕಾಲೇಜುಗಳಿಗ ಲಭಿಸಿದೆ !) ಕನ್ನಡ ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಯಾಗಿ ಆಸಕ್ತರಿಗೆಂದು ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದುದುಂಟು. ನಾನು ಜಿ. ಪಿ. ರಾಜರತ್ನಂರವರನ್ನು ಮೊದಲ ಬಾರಿಗೆ ನೋಡಿದ್ದು ಮತ್ತು ಅವರ ಉಪನ್ಯಾಸ ಕೇಳಿದ್ದು ಇಲ್ಲೇ. ಈ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವಲ್ಲಿ ಶ್ರೀನಿವಾಸರಾಜುರವರ ಕೈವಾಡವಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಇಲ್ಲಿ ನಾನು ಬಿ.ಎ. ಓದುತ್ತಿದ್ದ ಸಂದರ್ಭದಲ್ಲಿ ಕನ್ನಡ ವಿಭಾಗಕ್ಕೆ ಆಗಾಗ್ಗೆ ಬರುತ್ತಿದ್ದ ಅವರನ್ನು ಹಲವಾರು ಬಾರಿ ಭೇಟಿಯಾಗಿದ್ದೇನೆ. ಕ್ರೈಸ್ಟ್ ಕಾಲೇಜು ಕನ್ನಡ ಸಂಘವು ನಡೆಸುತ್ತಿದ್ದ ಅ.ನ.ಕೃ. ಸ್ಮಾರಕ ಲೇಖನ ಸ್ಪರ್ಧೆಯಲ್ಲಿ ಬಹುಮಾನ ಪಡೆದ ಶರತ್‌ಚಂದ್ರರ 'ಅಧಿಕಾರ'

# ಹಚ್ಚಿಟ್ಟ ಹಣತೆ

ಕಾದಂಬರಿಯ ಪುಸ್ತಕ ವಿಮರ್ಶೆಯೇ ನನ್ನ ಮೊದಲ ಸಾಹಿತ್ಯ ವಿಮರ್ಶೆಯ ಲೇಖನವೂ ಹೌದು. ಬಹುಮಾನಿತ ಲೇಖನಗಳು ಪುಸ್ತಕ ರೂಪದಲ್ಲಿ ಅಚ್ಚಾಗಿ ಬಂದಾಗ ನಾನೂ ಲೇಖಕಿಯೆನಿಸಿ ಕೊಂಡೆನೆಂಬ ವಿಚಿತ್ರ ಪುಳಕ ನನ್ನಲ್ಲಿ. ನನ್ನ ತಂಗಿ ಮಂಗಳಾ ಕೂಡ ಈ ಕನ್ನಡ ಸಂಘದ ಬೇಂದ್ರೆ ಸ್ಮೃತಿ-ಕಾವ್ಯ ಸ್ಪರ್ಧೆಯಲ್ಲಿ ಕವನ ಬರೆದು ಕವಯಿತ್ರಿಯೆನಿಸಿಕೊಂಡಿದ್ದಳು. ಹೀಗೆ ನಮ್ಮ ಆರಂಭದ ಬರವಣಿಗೆಯ ಓನಾಮ ತಿದ್ದಿಸಿದವರು ಶ್ರೀನಿವಾಸರಾಜುರವರು.

ಎಲ್ಲರಿಗೂ ಪ್ರಿಯರಾದ ಈ 'ರಾಜು ಮೇಷ್ಟರಲ್ಲಿ' ನಾನೆಂದೂ ಶಿಷ್ಯಳಾಗಿ ನಡೆದುಕೊಳ್ಳಲಿಲ್ಲ. ಹಾಗೆಯೇ ಅವರಿಗೆ ಶಿಷ್ಯೆಯಾಗುವ ಭಾಗ್ಯವಾಗುವುದೂ ನನಗೆ ಒದಗಿಬರಲಿಲ್ಲ. ಆದರೆ ಅವರ ಸಮಗ್ರ ವ್ಯಕ್ತಿತ್ವದ ಬಗ್ಗೆ ಗೌರವ, ಆದರ ಬೆಳೆಸಿಕೊಂಡೆ. ಅವರ ಸಂಘಟನಾ ಸಾಮರ್ಥ್ಯದ ಬಗ್ಗೆ ಬೆರಗಾದೆ. ಅವರ ಪ್ರೋತ್ಸಾಹದ ಸಂಜೀವಿನಿಯಿಂದ ಲಾಭ ಪಡೆದೆ. ಇದು ನನ್ನೊಬ್ಬಳ ಕಥೆಯಲ್ಲ. ಸುಮಾರು ಮೂರು ದಶಕಗಳ ಅವಧಿಯಲ್ಲಿ ನಾಡಿನ ನೂರಾರು ಯುವ ಪ್ರತಿಭೆಗಳಿಗೆ ಅವರು ಮಾರ್ಗದರ್ಶಕರಾಗಿ ಕನ್ನಡ ಪ್ರೀತಿ, ಸಾಹಿತ್ಯ ಪ್ರೀತಿಯನ್ನು ನಾಡಿನ ಉದ್ದಗಲಕ್ಕೂ ಬೀರಿದ ಪುಸ್ತಕ ಪುಷ್ಪವಾದರು.

ಲೇಖಕರುಗಳು ತಮ್ಮ ಲೇಖನ, ಪುಸ್ತಕ ಪ್ರಕಟವಾಗಬೇಕು ಎಂಬ ಪೈಪೋಟಿಯಲ್ಲಿ ನಿರತರಾಗಿರುವ ಇಂದಿನ ಸ್ಪರ್ಧಾಯುಗದಲ್ಲಿ ಬೇರೆಯವರಿಂದ ಬರೆಸುವುದು ಮತ್ತು ಬೇರೆಯವರು ಬರೆದದ್ದನ್ನು ಪ್ರಕಟಿಸುವುದರಲ್ಲೇ ಅಪಾರ ಪ್ರೀತಿ, ವಿಶ್ವಾಸ ತೋರಿದ ಶ್ರೀನಿವಾಸರಾಜುರಂತಹವರು ಬಹು ಅಪರೂಪ. ನಾನು ಎಂ.ಎ. ವಿದ್ಯಾರ್ಥಿನಿಯಾಗಿದ್ದಾಗ ಸೆಮಿನಾರ್‌ನಲ್ಲಿ ಮಂಡಿಸಿದ್ದ ಪ್ರಬಂಧಗಳನ್ನು ತೆಗೆದುಕೊಂಡುಹೋಗಿ ಅವರ 'ಅಂಕಣ' ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಹಾಗೆಯೇ ವಿದ್ಯಾರ್ಥಿನಿಯಾಗಿದ್ದಾಗ ಬರೆದ ಲೇಖನವನ್ನು ನನಗೂ ತಿಳಿಸದೆ, ಇಪ್ಪತ್ತು ವರ್ಷಗಳ ನಂತರ ಜಿ.ಎಸ್.ಎಸ್.ರವರ ಅಭಿನಂದನ ಗ್ರಂಥದಲ್ಲಿ ಪ್ರಕಟಿಸಿ ನನಗೆ ಆಶ್ಚರ್ಯ ಹುಟ್ಟಿಸಿದ್ದರು. ಹಾಗೆಯೇ ಅವರ ಮೇಲೆ ಸಿಟ್ಟು ಮಾಡಿಕೊಂಡಿದ್ದೆ.

ಕ್ರೈಸ್ಟ್ ಕಾಲೇಜು ಅವರ ವೃತ್ತಿರಂಗವಾದರೂ ಅವರು ನಗರದ ಹಲವಾರು ಕಾಲೇಜುಗಳ ಕನ್ನಡ ವಿಭಾಗದೊಂದಿಗೆ ಸಂಬಂಧಪಿರಿಸಿಕೊಂಡಿದ್ದರು ಮತ್ತು ಆ ಕಾಲೇಜುಗಳಿಗೆ ಸಾಹಿತ್ಯ ಸಲಹೆಗಾರರಂತೆ



ಶ್ರೀನಿವಾಸರಾಜುರವರು ಆಸ್ತಿಕರಲ್ಲದಿದ್ದರೂ ಅವರ ಸಾಹಿತ್ಯಕೃಷಿಯ ಕಾಯಕ ರಿಲಿಜಿಯಸ್ ಎನ್ನುವ ಗುಣವನ್ನು ಪಡೆದಿತ್ತು. ಅದೆಂತಹ ಶ್ರದ್ಧೆ. ಯಾವ ಧಾರ್ಮಿಕ ಶ್ರದ್ಧೆಗೂ ಸರಿಸಾಟಿಯಲ್ಲ! ಆದ್ದರಿಂದಲೇ ಇವರನ್ನು 'ಕನ್ನಡ ಕೈಲಾಸ ನಿರ್ಮಿಸುವ ಕನಸು ಕಂಡ ಶರಣ' ಎನ್ನಬೇಕೆನಿಸುತ್ತದೆ. ಕನ್ನಡ ಶಬ್ದ ಜಗತ್ತಿನ ಈ ನಿಶ್ಶಬ್ದ ಆರಾಧಕನ ಸಂಸ್ಕೃತಿ ಪೂಜೆ ನಿರಂತರವಾಗಿ ನಮ್ಮ ಸ್ಮರಣೆಯಲ್ಲಿರುತ್ತದೆ. ಅಸಂಖ್ಯಾತ ಶಿಷ್ಯಂದಿರ, ಎಳೆಯರ ಪ್ರತಿಭೆಯ ದೀಪಗಳನ್ನು ಬೆಳಗಿದ ಶ್ರೀನಿವಾಸರಾಜುರವರು ತಾವೇ ಒಂದು ಜ್ಯೋತಿಯಾಗಿ ಕನ್ನಡದ ಬೆಳಕು ಹರಡಿದವರು. ಇಂತಹ ಸಜ್ಜನ, ಹೃದಯವಂತರೊಡನೆ ಒಡನಾಡಿದ, ಕೆಲಸಮಾಡಿದ ಅವಕಾಶ ದೊರೆತದ್ದಕ್ಕೆ ಮನಸ್ಸಿನಲ್ಲಿ ಧನ್ಯತೆಯ ಭಾವ ಮೂಡುತ್ತದೆ.

ಎಸ್. ಗಾಯತ್ರಿ

ಕಾರ್ಯ ನಿರ್ವಹಿಸುತ್ತಿದ್ದರು. ಶ್ರೀನಿವಾಸರಾಜುರವರ ಪ್ರೋತ್ಸಾಹದ ಜೀವಸೆಲೆಯ ಲಾಭ ನಗರದ ಹಲವಾರು ವಿದ್ಯಾರ್ಥಿಗಳ ಪಾಲಿಗೆ ದೊರಕಲು ಅವಕಾಶ ಒದಗಿದ್ದು ಹೀಗೆ. ಅಂತಹ ಲಾಭ ಪಡೆದವರಲ್ಲಿ ನನ್ನ ಮಗಳು ಮೈತ್ರಿಯೂ ಒಬ್ಬಳು. ಅವರು ವ್ಯವಸ್ಥೆಗೊಳಿಸಿದ್ದ 'ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಕಾರಂತರು' ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸುವ ಅವಕಾಶ ಮೈತ್ರಿಗೆ ಪಿಯುಸಿ ಓದುವಾಗಲೇ ದೊರೆಯಿತು. ಅವಳ ಪ್ರಬಂಧವನ್ನು 'ಸಂಚಯ' ಪತ್ರಿಕೆಯಲ್ಲಿ ಪ್ರಕಟಿಸುವ ವ್ಯವಸ್ಥೆ ಮಾಡಿದ್ದು ಶ್ರೀನಿವಾಸರಾಜುರವರೇ. ಕಥಾ ಸ್ಪರ್ಧೆ ಮತ್ತು ಕವನ ಸ್ಪರ್ಧೆಯಲ್ಲಿ ಅವಳು ಬಹುಮಾನ ಪಡೆದಾಗ ಹಿಗ್ಗಿ ಅದನ್ನು ಪ್ರಕಟಿಸುವಲ್ಲಿ ಮುಂದಾದರು. ಭಾಷಾ ಕಲಿಕೆಯ ಬಗ್ಗೆ ಅಭಿಮಾನ, ಆಸ್ಥೆಯೇ ನಶಿಸಿಹೋಗುತ್ತಿರುವ ಇಂದಿನ ವ್ಯಾಪಾರಿ ಸಂಸ್ಕೃತಿಯ ಭರಾಟೆಯಲ್ಲಿ ಉತ್ಸಾಹ ಕಳೆದು ಕೊಳ್ಳದೆ ಕನ್ನಡದ ಜ್ಯೋತಿ ಬೆಳಗುವುದರಲ್ಲೇ ತನ್ಮಯ ರಾಗಿದ್ದ ಈ ಸಂತ ಎಲ್ಲ ವಯೋಮಾನದವರಿಗೂ ಸಲ್ಲುವವರಾಗಿದ್ದರು. ನನ್ನ ಮಗಳಲ್ಲಿ ಹಸಿರಾಗಿ ಉಳಿದಿರುವ ಕನ್ನಡ ಪ್ರೀತಿ, ಪುಸ್ತಕ ಪ್ರೀತಿಯ ಹಿಂದೆ ಶ್ರೀನಿವಾಸರಾಜು ರವರ ಮತ್ತು ಅವಳ ಕಾಲೇಜಿನ ಅಧ್ಯಾಪಕರ ಪ್ರೋತ್ಸಾಹ, ಪರಿಶ್ರಮವೇ ಮುಖ್ಯ ಕಾರಣವಾಗಿದೆ.

ಶ್ರೀನಿವಾಸರಾಜುರವರ ಸಾಹಿತ್ಯ ಪ್ರೀತಿ ಅಚ್ಚರಿ ಹುಟ್ಟಿಸುವಂತಹುದು. ಸಾಹಿತ್ಯದ ಮುಂದೆ ಅವರಿಗೆ ಬೇರೇನೂ ಕಾಣುತ್ತಿರಲಿಲ್ಲವೇ ಎನ್ನುವ ಅನುಮಾನ ನನಗೆ ಕಾಡುತ್ತಿತ್ತು. ಸಿಕ್ಕಾಗಲೆಲ್ಲಾ ಸಾಹಿತ್ಯ ಮತ್ತು ಸಾಹಿತಿಗಳನ್ನೇ ಕುರಿತು ಮಾತನಾಡುತ್ತಿದ್ದರು – ಯಾವುದಾದರೂ ಪತ್ರಿಕೆಯ ಹೆಸರು ಹೇಳಿ, ಅದರಲ್ಲಿ ಎಷ್ಟೋ ಒಳ್ಳೆಯ ಲೇಖನ ಗಳಿದ್ದರೂ, ಅದನ್ನೆಲ್ಲಾ ಬಿಟ್ಟು ಸಾಹಿತ್ಯದ ಲೇಖನವನ್ನೇ ಉಲ್ಲೇಖಿಸಿ, 'ಅದನ್ನು ಓದಿ' ಎನ್ನುತ್ತಿದ್ದರು. ನಮ್ಮ 'ಅಚಲ' ಪತ್ರಿಕೆಯಲ್ಲಿ ಸಾಹಿತ್ಯದ ಬಗೆಗಿನ ಲೇಖನವಿದ್ದರೆ, ಅದನ್ನು ಕುರಿತು ಮಾತ್ರ ಪ್ರಸ್ತಾಪ. ಬಹುಶಃ ಇವರ ಈ ಸಾಹಿತ್ಯ ಪ್ರೀತಿಯೇ ಕನ್ನಡದ ಸಾಹಿತ್ಯ ಪತ್ರಿಕೆಗಳೊಂದಿಗೆ ಅವರ ಪರಿಶ್ರಮ ಕೆಲಸ ಮಾಡಿದೆ. ಹಾಗೆಂದು ಅವರಿಗೆ ಸಾಮಾಜಿಕ ಕಳಕಳಿಯ ಕೊರತೆಯಿದೆಯೆಂದಲ್ಲ. ಹೊಸೂರಿನ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಅವರು ಮಂಡಿಸಿದ ಅಧ್ಯಕ್ಷ ಭಾಷಣ ಅವರ ಸಾಹಿತ್ಯಿಕ, ಸಾಂಸ್ಕೃತಿಕ ಜವಾಬ್ದಾರಿಗೆ ಸ್ಪಷ್ಟ ನಿದರ್ಶನ.

ಮೂರು ದಶಕಗಳ ಹಿಂದೆಯೇ ಕನ್ನಡದಲ್ಲಿ 'ಅಂಕಣ' ಸಾಹಿತ್ಯ ಪತ್ರಿಕೆಯನ್ನು ಆರಂಭಗೊಳಿಸುವುದರಲ್ಲಿ ಪ್ರಮುಖರಾದ ಶ್ರೀನಿವಾಸರಾಜುರವರು ನಂತರ ಹಲವಾರು ಸಾಹಿತ್ಯ ಪತ್ರಿಕೆಗಳಿಗೆ ಬೆಂಗಾವಲಾಗಿ ನಿಂತರು. ತಮ್ಮ ಸಂಪಾದನೆಯ ಹಣವಷ್ಟೇ ಅಲ್ಲ, ಪ್ರಶಸ್ತಿ, ಬಹುಮಾನ ಗಳಿಂದ ಬಂದ ಹಣವನ್ನು ಸ್ವಂತಕ್ಕೆ ಉಪಯೋಗಿಸಿ ಕೊಳ್ಳದೆ ಪತ್ರಿಕೆಗಳಿಗೆ ದಾನವಾಗಿ ನೀಡುತ್ತಿದ್ದ ಉದಾರ ಬುದ್ಧಿ ಅವರದು. ಅವರಿಗೊಂದು ಪ್ರಶಸ್ತಿ ಬಂದಾಗ ಅದರ ಹಣವನ್ನು 'ಅಚಲ'ಗೆ ಕೊಡುಗೆಯಾಗಿ ಕೊಟ್ಟಿದ್ದರು. ಸ್ವತಃ ತಾವೇ ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಲ್ಲದೆ ಕನ್ನಡದ ಇತರ ಸಂಘ, ಸಂಸ್ಥೆಗಳ ಕಾರ್ಯ ಚಟುವಟಿಕೆಗಳ ಹಿಂದೆ ಸಕ್ರಿಯವಾಗಿ ಕೆಲಸ ಮಾಡುತ್ತಿದ್ದರು. ಕರ್ನಾಟಕ ಲೇಖಕಿಯರ ಸಂಘದ ಸಲಹಾ ಸಮಿತಿಯ ಸದಸ್ಯರಾಗಿ ಅವರು ತೋರಿದ ಕ್ರಿಯಾಶೀಲತೆ ಮೆಚ್ಚುವಂತಹದ್ದು.

ರಾಜ್ಯೋತ್ಸವ ಪ್ರಶಸ್ತಿ

...ನಿಂ ಕ್ಯಾಲಿಬರ್‌ಗೆ ಈ ಪ್ರಶಸ್ತಿ
ಸಿಗ್ಲಿಲ್ಲ ಅಂತ ಚಿಂತೆ ಮಾಡ್ಬೇಡ್ರೀ...!
ಗಣರಾಜ್ಯೋತ್ಸವ ಪ್ರಶಸ್ತಿ
ಸಿಗುತ್ತೆ ಬಿಡ್ರಿ...!!

ನಾನು ಮತ್ತು ಶ್ರೀ ಶ್ರೀನಿವಾಸರಾಜುರವರು ಒಂದೇ ಜಿಲ್ಲೆಗೆ ಸೇರಿದವರೆಂಬ ಕಾರಣದಿಂದಾಗಿಯೇ ವೇದಿಕೆಯನ್ನು ಹಂಚಿಕೊಂಡದ್ದಿದೆ. ಅವರು ಹುಟ್ಟಿದ ಊರು ಚಿಕ್ಕಬಳ್ಳಾಪುರ. ಅದು ನನ್ನ ತಾಯಿಯ ತವರೂರು. ನನ್ನ ತಂದೆಯ ಊರಾದ ಹೊಸೂರಿನಲ್ಲಿ ನಡೆದ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀನಿವಾಸರಾಜುರವರು ಅಲಂಕರಿಸಿದ ಸಂದರ್ಭ ಸ್ಮರಣೀಯವಾಗಿದೆ. ಅವರ ಎಂದಿನ ಸರಳತೆ, ಸ್ನೇಹಪರತೆ ಸಮ್ಮೇಳನಕ್ಕೆ ವಿಶೇಷ ಕಳೆಯನ್ನು ನೀಡಿತ್ತು. ಸಮ್ಮೇಳನಾಧ್ಯಕ್ಷರೆಂಬ ಯಾವ ಬಿಂಕ, ಬಿಗುಮಾನ ಗಳಿಲ್ಲದೆ ಹಳ್ಳಿಯಲ್ಲಿ ಅವರು ಓಡಾಡಿದ ರೀತಿ ಮರೆಯಲಾಗದ್ದು.

ಶ್ರೀನಿವಾಸರಾಜುರವರೇ ನನಗೊಂದು ಗ್ರಂಥ ಭಂಡಾರವಾಗಿದ್ದರು. ನನ್ನ ಅಧ್ಯಯನಕ್ಕಾಗಿ ನಾನು ಯಾವುದೇ ಸಾಹಿತ್ಯಕ ಪುಸ್ತಕ ಬೇಕೆಂದಾಗಲೂ ನಾನು ಸಹಾಯ ಯಾಚಿಸುತ್ತಿದ್ದುದು ಶ್ರೀನಿವಾಸರಾಜು ಮತ್ತು ಅವರ ಆತ್ಮೀಯ ಮಿತ್ರರಾದ ಶ್ರೀ ಎಚ್. ಎಸ್. ರಾಘವೇಂದ್ರ ರಾವ್‌ರವರನ್ನು. ಈ ಇಬ್ಬರೂ ಮಹನೀಯರೂ ತಮ್ಮ ಬಳಿ ಇರುವ ಪುಸ್ತಕಗಳನ್ನು ಕೊಡುವುದಲ್ಲದೆ, ಅವರಲ್ಲಿ ಇಲ್ಲದಿರುವ ಪುಸ್ತಕ ಮತ್ತು ಮಾಹಿತಿಯ ಬಗೆಗೂ ನನಗೆ ಸಹಾಯಹಸ್ತ ನೀಡಬಲ್ಲ ಆತ್ಮೀಯತೆಯನ್ನು ನೀಡಿದ್ದಾರೆ. ಒಮ್ಮೆ ಅಕ್ಕಮಹಾದೇವಿಯ ವಚನಗಳ ಬಗ್ಗೆ ಪ್ರಬಂಧ ಬರೆಯಬೇಕೆಂದು ಅವರನ್ನು ಕೇಳಿಕೊಂಡಾಗ ಆ ವಿಷಯಕ್ಕೆ ಸಂಬಂಧಪಟ್ಟ ಹತ್ತು ಪುಸ್ತಕಗಳ ಒಂದು ಬಂಡಲ್ ಮಾಡಿ ನನಗೆ ರವಾನಿಸಲೆಂದು 'ಹೊಸತು' ಕಛೇರಿಯಲ್ಲಿ ತಂದಿಟ್ಟಿದ್ದರು. ಇಂತಹ ಮನೆಬಾಗಿಲ ಸೇವೆಯನ್ನು ಕೊಡುವ ಸಜ್ಜನನ ಔದಾರ್ಯತೆಯನ್ನು ಕಂಡಾಗ ಕಣ್ಣು ತೇವವಾಗುತ್ತದೆ.

ಇಂತಹ ಶ್ರೀನಿವಾಸರಾಜುರವರ ಜೊತೆಗೆ ಕೆಲಸ ಮಾಡುವ ಅನುಭವ ಹೆಚ್ಚಿನ ಹುಮ್ಮಸ್ಸನ್ನು ಕೊಡುತ್ತಿತ್ತು. ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಪ್ರಕಟಣೆಯಾದ 'ಭಾರತೀಯ ಸ್ತ್ರೀವಾದ'ದ ಪುಸ್ತಕವನ್ನು ಲೇಖಕಿಯರ ಸಂಘದ ಜೊತೆ ಸೇರಿ ಬಿಡುಗಡೆ ಮಾಡಬೇಕೆಂದಾಗ ಅವರು ತೋರಿಸಿದ ಕಾರ್ಯಕ್ಷಮತೆ ಮರೆಯಲಾಗದ್ದು. ಇತ್ತೀಚೆಗಂತೂ ಅವರು 'ಹೊಸತು' ಬಳಗದಲ್ಲೊಬ್ಬ ರಾಗಿದ್ದರಿಂದ ಅವರನ್ನು ಮತ್ತೆ ಮತ್ತೆ ಭೇಟಿಮಾಡುವ ಸುಯೋಗ ಒದಗಿಬರುತ್ತಿತ್ತು. 'ಹೊಸತು' ಸಂಪಾದಕ ಸಭೆ ಗಳಲ್ಲಿ ಅವರ ಕ್ರಿಯಾಶೀಲ ಭಾಗವಹಿಸುವಿಕೆ ಪತ್ರಿಕೆಯ ಮೌಲಿಕತೆ ಮತ್ತು ಅರ್ಥವ್ಯಾಪ್ತಿಯನ್ನು ಹಿಗ್ಗಿಸಲು ನೆರವಾಗಿತ್ತು. ನವಕರ್ನಾಟಕ ಪ್ರಕಾಶನದ ಹಲವಾರು ಪುಸ್ತಕಗಳಿಗೆ ಸಹಸಂಪಾದಕರಾಗಿ ಕೆಲಸ ಮಾಡಿರುವ ಶ್ರೀನಿವಾಸರಾಜುರವರು ಸಂಪಾದಿಸಿಕೊಟ್ಟಿರುವ 'ಪರಿಮಳದ ಸುಗ್ಗಿ' ನಾಡಿನ ಹಲವಾರು ಕವಿಗಳ ಕಾವ್ಯ ಸೌರಭವನ್ನು ಒಟ್ಟಾಗಿ ಪಡೆಯಲು ನೆರವಾಗಿದೆ. ಎಂ. ಎಸ್. ಕೃಷ್ಣನ್ ಸ್ಮಾರಕ ಟ್ರಸ್ಟ್‌ನ ಸದಸ್ಯರೂ ಆಗಿರುವ ಅವರು ನಗರದ ಹಲವಾರು ಸಂಘ, ಸಂಸ್ಥೆಗಳಲ್ಲಿ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸಿದ್ದಾರೆ.

ಕಳೆದ ತಿಂಗಳಷ್ಟೇ ನಮ್ಮ ಗೆಳತಿ ಹೇಮಲತಾ ಮಹಿಷಿ ಯವರೊಂದಿಗೆ ಮಾತನಾಡುವಾಗ ಮಹಿಳಾ ಸಾಹಿತ್ಯದ ಕಾರ್ಯಕ್ರಮವನ್ನು ರೂಪಿಸಿ ಮೇಲುಕೋಟೆಯಲ್ಲಿ ನಡೆಸುವುದರ ಬಗ್ಗೆ ಚರ್ಚಿಸಿದ್ದರು. ಅವರು ಗತಿಸುವ ಮುನ್ನ ವಾರಕ್ಕೆ ಹಿಂದೆ ಸಿಕ್ಕಾಗಲೂ ಈ ಕಾರ್ಯಕ್ರಮದ ಬಗ್ಗೆ ಏನು ಮಾಡಿದಿರಿ ಎಂದು ನನ್ನ ಬಳಿ ಕೇಳಿದ್ದರು. ಅರವತ್ತೈದರ ವಯಸ್ಸಿನ ಈ ಯುವಕರ ಕಾರ್ಯಶೀಲತೆ, ಜೀವನೋತ್ಸಾಹವನ್ನು ನೆನಸಿಕೊಂಡರೆ ಈಗಲೂ ಮನಸ್ಸು ಮೂಕವಾಗುತ್ತದೆ. ಕವಿ, ನಾಟಕಕಾರ, ವಿಮರ್ಶಕ – ಎಲ್ಲದರ ಸಂಮಿಶ್ರಣವಾಗಿದ್ದ ಈ ಸಾಹಿತಿಯ ಸಾಹಿತ್ಯ ಪ್ರಭೆ ವಿಶೇಷವಾಗಿ ಪ್ರಕಟಗೊಂಡಿದ್ದು ಅವರು ನೀರೆರೆದು ಪೋಷಿಸಿದ್ದ ಎಳೆಯ ಬರಹಗಾರರ ಪ್ರತಿಭೆಯ ಮೂಲಕವೇ. ಅವರ ಸಾಹಿತ್ಯಕ ಕಾರ್ಯಚಟುವಟಿಕೆಗಳು ಯಾವ ಎಲ್ಲೆಗೂ ಸೀಮಿತವಾಗದೆ ನಾಡಿನ ಹಲವಾರು ಸಂಘ-ಸಂಸ್ಥೆಗಳೊಂದಿಗೆ ಅಭಿವ್ಯಕ್ತಗೊಳ್ಳುತ್ತಿತ್ತು.

ಶ್ರೀನಿವಾಸರಾಜುರವರು ಆಸ್ತಿಕರಲ್ಲದಿದ್ದರೂ ಅವರ ಸಾಹಿತ್ಯ ಕೃಷಿಯ ಕಾಯಕ ರಿಲಿಜಿಯಸ್ ಎನ್ನುವ ಗುಣ ವನ್ನು ಪಡೆದಿತ್ತು. ಅದೆಂತಹ ಶ್ರದ್ಧೆ. ಯಾವ ಧಾರ್ಮಿಕ ಶ್ರದ್ಧೆಗೂ ಸರಿಸಾಟಿಯಲ್ಲ! ಆದ್ದರಿಂದಲೇ ಇವರನ್ನು 'ಕನ್ನಡ ಕೈಲಾಸ ನಿರ್ಮಿಸುವ ಕನಸು ಕಂಡ ಶರಣ' ಎನ್ನಬೇಕೆನಿಸುತ್ತದೆ. ಕನ್ನಡ ಶಬ್ದ ಜಗತ್ತಿನ ಈ ನಿಶ್ಶಬ್ದ ಆರಾಧಕನ ಸಂಸ್ಕೃತಿ ಪೂಜೆ ನಿರಂತರವಾಗಿ ನಮ್ಮ ಸ್ಮರಣೆ ಯಲ್ಲಿರುತ್ತದೆ. ಅಸಂಖ್ಯಾತ ಶಿಷ್ಯಂದಿರ, ಎಳೆಯರ ಪ್ರತಿಭೆಯ ದೀಪಗಳನ್ನು ಬೆಳಗಿದ ಶ್ರೀನಿವಾಸರಾಜುರವರು ತಾವೇ ಒಂದು ಜ್ಯೋತಿಯಾಗಿ ಕನ್ನಡದ ಬೆಳಕು ಹರಡಿದವರು. ಇಂತಹ ಸಜ್ಜನ, ಹೃದಯವಂತರೊಡನೆ ಒಡನಾಡಿದ, ಕೆಲಸಮಾಡಿದ ಅವಕಾಶ ದೊರೆತದ್ದಕ್ಕೆ ಮನಸ್ಸಿನಲ್ಲಿ ಧನ್ಯತೆಯ ಭಾವ ಮೂಡುತ್ತದೆ.

**ಎನ್. ಗಾಯತ್ರಿ**
೧೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಸಂದರ್ಶನ ಜ್ಞಾನದೀವಿಗೆ ಕೆ.ವಿ.ಆರ್.

ದೇಶಾದ್ಯಂತ ಸಾವಿರಾರು ವಿದ್ಯಾರ್ಥಿಗಳಿಗೆ, ಶಿಕ್ಷಕ ವೃಂದದವರಿಗೆ, ದೇಶದ, ಕೆಲವು ಹೊರದೇಶಗಳ ಶಿಕ್ಷಣ ತಜ್ಞರಿಗೆ, ಸಂಶೋಧನಾಸಕ್ತರಿಗೆ ಕೆ.ವಿ.ಆರ್. ಎಂದು ಪರಿಚಿತರಾದವರು ತುಮಕೂರಿನ ಕೆ. ವೆಂಕಟ ರಾಮಯ್ಯನವರು. ಕೆ.ವಿ.ಆರ್. ೧೯೪೪ರಲ್ಲಿ ಬೆಂಗಳೂರಿನ ಬಸವನಗುಡಿಯಲ್ಲಿರುವ ಆಚಾರ್ಯ ಪಾಠ ಶಾಲೆಯಲ್ಲಿ ಪ್ರೌಢಶಾಲಾ ಶಿಕ್ಷಕರಾಗಿ ತಮ್ಮ ಶಿಕ್ಷಕ ವೃತ್ತಿಯನ್ನು ಆರಂಭಿಸಿದರು. ಅಂದಿನಿಂದ ಇಂದಿನವರೆಗೆ – ಕಳೆದ ಆರು ದಶಕಗಳಿಂದ ಅವಿರತವಾಗಿ ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.

೧೯೪೮ರವರೆಗೆ ಬೆಂಗಳೂರಿನ ಆಚಾರ್ಯ ಪಾಠಶಾಲೆಯಲ್ಲಿ, ೧೯೪೮ರಿಂದ ೧೯೭೭ರವರೆಗೆ ತುಮಕೂರಿನ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಉಪನ್ಯಾಸಕರಾಗಿದ್ದು ಮತ್ತೆ ೧೯೭೫ರಿಂದ ೧೯೯೯ರವರೆಗೆ ಸರ್ವೋದಯ ಪದವಿ ಪೂರ್ವ ಕಾಲೇಜಿನಲ್ಲಿ ಗೌರವ ಇಂಗ್ಲಿಷ್ ಉಪನ್ಯಾಸಕರಾಗಿದ್ದವರು. ೧೯೮೬ರಲ್ಲಿ ಹಿತೈಷಿಗಳ ಒತ್ತಾಯದ ಮೇರೆಗೆ ತುಮಕೂರಿನಲ್ಲಿ ಮಾರುತಿ ವಿದ್ಯಾಕೇಂದ್ರವನ್ನು ಸ್ಥಾಪಿಸಿ ನಡೆಸುತ್ತಾ ಬಂದಿದ್ದಾರೆ. ಈ ಶಾಲೆ ಶೈಕ್ಷಣಿಕ ಪ್ರಯೋಗಗಳಿಗೆ ಮುಡಿಪಾಗಿದ್ದು ಮಾಡಿರುವ ಸಾಧನೆ ಅಪೂರ್ವ ವಾದದ್ದು. ಇದರ ಪ್ರೇರಕ ಶಕ್ತಿ , ಬೆನ್ನೆಲುಬು ಕೆ.ವಿ.ಆರ್.

ಶ್ರೀಯುತರ ಎಂಟು ಪ್ರಬಂಧಗಳಿಗೆ ಎನ್.ಸಿ.ಇ.ಆರ್.ಟಿ. ರಾಷ್ಟ್ರ ಪ್ರಶಸ್ತಿಗಳು ಸಂದಿವೆ. ಪ್ರೌಢಶಾಲಾ ಶಿಕ್ಷಕರಿಗಾಗಿ 'ಟೀಚರ್ಸ್ ವಾಯ್ಸ್' ಎಂಬ ಮಾಸಿಕ ಪತ್ರಿಕೆಯನ್ನು ಕೆಲವು ವರ್ಷಗಳ ಕಾಲ ಪ್ರಕಟಿಸಿದ್ದರು. ೧೯೫೯ರಲ್ಲಿ ಎನ್.ಸಿ.ಇ.ಆರ್.ಟಿ. ಬೆಂಗಳೂರಿನ ಆರ್.ವಿ. ಟೀಚರ್ಸ್ ಕಾಲೇಜಿನಲ್ಲಿ ಅನೇಕ ಜಿಲ್ಲೆಗಳ ಪ್ರೌಢಶಾಲಾ ಶಿಕ್ಷಕರಿಗಾಗಿ ತರಬೇತಿ ಕಾರ್ಯ ಪ್ರಾರಂಭಿಸಿತು; ಈ ಇಲಾಖೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ೨೦೦ಕ್ಕೂ ಹೆಚ್ಚು ಕಾರ್ಯಾಗಾರಗಳನ್ನು ನಡೆಸಿದ್ದಾರೆ. ಭಾರತ ಸರಕಾರ ೧೯೭೬ರಲ್ಲಿ ಶಿಕ್ಷಕರ ದಿನದಂದು ರಾಷ್ಟ್ರಾಧ್ಯಕ್ಷರು ನೀಡುವ ರಾಷ್ಟ್ರ ಪ್ರಶಸ್ತಿಯನ್ನು ಇವರಿಗಿತ್ತು ಗೌರವಿಸಿದೆ.

ನಿರಂತರ ಓದು, ಸಂಶೋಧನೆ, ಪ್ರಯೋಗ, ಶಿಕ್ಷಕ ವೃತ್ತಿಯಲ್ಲಿ ದಣಿವರಿಯದ ಶ್ರದ್ಧೆ, ಎಳೆಯರ ಬಗೆಗಿನ ಪ್ರೀತಿ ಮತ್ತು ನಿಯಮಬದ್ಧತೆಗೆ ಕೆ.ವಿ.ಆರ್. ತಮ್ಮ ಜೀವನವನ್ನು ಮೀಸಲಿಟ್ಟಿದ್ದಾರೆ. ಸದ್ದಿಲ್ಲದೆ ದುಡಿಯು ತ್ತಿರುವ ಈ ಹಿರಿಯ ಚೇತನವನ್ನು 'ಹೊಸತು' ಪತ್ರಿಕೆಯ ಪರವಾಗಿ ಸಹನ ಸಂದರ್ಶಿಸಿ ತಯಾರಿಸಿದ ಲೇಖನವಿದು.

ಡಾ|| ರೊದ್ದಂ ನರಸಿಂಹ ಅವರು 'ಹೊಸತು' ಸಂದರ್ಶನದಲ್ಲಿ ತಮ್ಮ ಗುರುಗಳೆಂದು ಇವರನ್ನು ಗೌರವದಿಂದ ಹೆಸರಿಸಿದ್ದರು. ಅದನ್ನು ನೋಡಿದ ಶ್ರೀ ಕೆ.ವಿ.ಆರ್. ಡಾ|| ನರಸಿಂಹ ಅವರನ್ನು ಸಂಪರ್ಕಿಸುವ ಸೌಜನ್ಯವನ್ನು ತೋರಿದ್ದುದನ್ನು ಇಲ್ಲಿ ನೆನೆಯಬಹುದು.



ಸಂದರ್ಶಿಸಿದವರು:
ಸಹನ

**ಹೊ** : ಇಂದಿನ ಶೈಕ್ಷಣಿಕ ಗುಣಮಟ್ಟದ ಸ್ಥಿತಿಗತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ಕೆ.ವಿ.ಆರ್.** : ನಮ್ಮ ಕರ್ನಾಟಕಕ್ಕೆ ಸಂಬಂಧಪಟ್ಟ ಹಾಗೆ ದೊಡ್ಡ ಸಮಸ್ಯೆ ಅಂದರೆ ಸರ್ಕಾರ ನೂರಾರು ಕೋಟಿ ರೂಪಾಯಿ ಪ್ರಾಥಮಿಕ ಶಿಕ್ಷಣಕ್ಕೆ ಖರ್ಚು ಮಾಡ್ತಾ ಇದ್ದರೂ ಕೂಡ ಪರಿಣಾಮ ಬಹಳ ಕಡಿಮೆ. ಮಕ್ಕಳ ಶಿಕ್ಷಣ ಮಟ್ಟದಲ್ಲಿ, ಕಲಿಕೆಯಲ್ಲಿ ಪ್ರಗತಿ ಕಾಣಬರುತ್ತಿಲ್ಲ. ಏಳನೇ ತರಗತಿಯ ವಿದ್ಯಾರ್ಥಿಗಳಿಗೆ ಕನ್ನಡದಲ್ಲಾಗಲೀ, ಇಂಗ್ಲಿಷಿನಲ್ಲಾಗಲೀ ಸರಿಯಾಗಿ ಅಕ್ಷರಗಳನ್ನು ಬರೆಯಲು ಬರುವುದಿಲ್ಲ. ಕೆಲವು ವರ್ಷಗಳ ಹಿಂದೆ ಬೆಂಗಳೂರು ನಗರ ಹಾಗೂ ಸುತ್ತಮುತ್ತಲಿನ ಗ್ರಾಮಾಂತರ ಪ್ರದೇಶಗಳ ಕೆಲವು ಪ್ರಾಥಮಿಕ ಶಾಲೆಗಳ ೨೫೦೦ ಏಳನೇ ತರಗತಿಯ ವಿದ್ಯಾರ್ಥಿಗಳನ್ನು ಪರೀಕ್ಷೆ ಮಾಡಿದಾಗ ಈ ಅಂಶ ಬೆಳಕಿಗೆ ಬಂದಿದೆ. ಸುಮಾರು ಶೇ. ೬೮ ರಷ್ಟು ಮಂದಿಗೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಯ ಅಕ್ಷರ ಮಾಲೆಯನ್ನು ತಪ್ಪಿಲ್ಲದೆ ಬರೆಯುವ ಸಾಮರ್ಥ್ಯವೇ ಇಲ್ಲ ಎಂಬುದು ವ್ಯಕ್ತವಾಗಿದೆ. ಕನ್ನಡ ಅಕ್ಷರ ಮಾಲೇನೇ ಬರದೇ ಇದ್ದ ೭ನೇ ತರಗತಿ ವಿದ್ಯಾರ್ಥಿಗಳು ಸಮಾಜ, ವಿಜ್ಞಾನದ ದಪ್ಪದಪ್ಪ ಪುಸ್ತಕ ಗಳನ್ನು ಹೇಗೆ ಓದಿ ಅರ್ಥಮಾಡಿಕೊತಾರೆ? ಇಲ್ಲಿ ಮಾಧ್ಯಮದ್ದಲ್ಲ ಪ್ರಶ್ನೆ. ಕನ್ನಡ ಭಾಷೇನೇ ಬರಲ್ಲ. ಸಂಬಂಧಪಟ್ಟವರು ಇದರ ಬಗ್ಗೆ ಗಮನವೇ ಕೊಡೊಲ್ಲ.

ಇದು ಬರಿ ಸರ್ಕಾರಿ ಶಾಲೆಗಳ ಕಥೆಯಷ್ಟೇ ಅಲ್ಲ. ಕೆಲವು ಅನುದಾನಿತ ಶಾಲೆಗಳ ಸ್ಥಿತಿಯೂ ಹೀಗೇ ಇದೆ. ದೇಶದ ಉತ್ತರ ಭಾಗದ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ರಾಜ್ಯದಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಿದೆ ಎಂಬುದು ಸಮಾಧಾನಪಟ್ಟುಕೊಳ್ಳುವ ವಿಷಯ. ಆದರೆ ೭ನೇ ತರಗತಿಯಲ್ಲಿ ಓದುವವರಿಗೆ ತಪ್ಪಿಲ್ಲದೆ ಅಕ್ಷರಗಳನ್ನು ಬರೆಯುವ, ಪದ-ವಾಕ್ಯಗಳನ್ನು ರಚಿಸುವ ಸಾಮರ್ಥ್ಯ ಇಲ್ಲವೆನ್ನುವುದು ಶಿಕ್ಷಣದ ಗುಣಮಟ್ಟಕ್ಕೆ ಹಿಡಿದ ಕನ್ನಡಿ ಯಾಗಿದೆ. ಕನ್ನಡ ಭಾಷೆಯ ವಿಚಾರದಲ್ಲಿ ಸರ್ಕಾರಿ ಶಾಲೆ ವಿದ್ಯಾರ್ಥಿಗಳು ಅನುದಾನಿತ ಶಾಲೆಗಳ ವಿದ್ಯಾರ್ಥಿ ಗಳಿಗಿಂತ ಮುಂದಿದ್ದರೆ, ಇಂಗ್ಲಿಷ್, ಗಣಿತಗಳಲ್ಲಿ ಅನುದಾನಿತ ಶಾಲೆಗಳ ವಿದ್ಯಾರ್ಥಿಗಳದೇ ಮೇಲುಗೈ. ಸರ್ಕಾರಿ ಶಾಲಾ ಕಾಲೇಜುಗಳಲ್ಲಿ ಕಲಿತು ಪದವೀಧರ ರಾಗಿರುವವರಲ್ಲಿ ಬಹಳಷ್ಟು ಮಂದಿಗೆ ಈಗಲೂ ಕನ್ನಡ ದಲ್ಲಾಗಲೀ ಇಂಗ್ಲಿಷಿನಲ್ಲಾಗಲೀ ತಪ್ಪಿಲ್ಲದೆ ಬರೆಯುವ, ಮಾತಾಡುವ ಸಾಮರ್ಥ್ಯ ಇಲ್ಲ ಎನ್ನುವುದು ಸುಳ್ಳಲ್ಲ. ಇಂಥ ಪರಿಸ್ಥಿತಿಗೆ ಶಾಲೆಗಳ ದುಃಸ್ಥಿತಿ ಒಂದು ಕಾರಣ ವಾದರೆ, ಅಲ್ಲಿ ಕಲಿಸುವ ಶಿಕ್ಷಕರಿಗೆ ಸಾಕಷ್ಟು ತರಬೇತಿ ಇಲ್ಲದಿರುವುದು, ಶಿಕ್ಷಕರ ಶಿಕ್ಷಣ ಮಟ್ಟದಲ್ಲಿ ಕುಸಿತ, ಅವರ ಭಾಷಾಜ್ಞಾನ ಹೆಚ್ಚಿಲ್ಲದಿರುವುದು, ಕಲಿಕೆ ವಿಚಾರದಲ್ಲಿ ಅದರ ಮೇಲೆ ಸೂಕ್ತ ಉಸ್ತುವಾರಿ ಇಲ್ಲದಿರುವುದೂ ಕಾರಣ.

ಕನ್ನಡವನ್ನೇ ಅವರು ಕಲಿಯದಿದ್ದ ಮೇಲೆ ಪ್ರಾಥಮಿಕ ಶಿಕ್ಷಣವೇ ಪ್ರಯೋಜನ ಆಗೊಲ್ಲ. ಈಗ ಹೊಸದಾಗಿ ಮಧ್ಯಾಹ್ನ ಬಿಸಿ ಊಟ ಆರಂಭಿಸಿದ್ದಾರೆ. ಅದಕ್ಕೆ

ಬೆಳಗಾಗೆದ್ದರೆ ಸೌದೆ ಹೊಂಚೋದು, ನೀರು ಹೊಂಚೋದು, ರೇಷನ್ ಹೊಂಚೊ ಕೆಲಸ, ಆಮೇಲೆ ಅಡುಗೆ ತಯಾರಿಸಿ ಹಂಚುವುದು. ಕೆಲವು ಕಡೆಗಳಲ್ಲಿ ಯಾವುದೊ ಒಂದು ಶಾಲೆಯಲ್ಲಿ ಅಡುಗೆ ಎಲ್ಲ ಆಗುತ್ತೆ, ಹತ್ತಿರದಲ್ಲಿ ಇರೋ ಶಾಲೆಗಳು ಮಕ್ಕಳನ್ನು ಅಲ್ಲಿಗೆ ಕರೆದುಕೊಂಡು ಹೋಗಬೇಕು. ಹತ್ತುಗಂಟೆಗೆ ಎಲ್ಲ ಬಂದು ಸೇರಿದ್ರೆ ಅವರನ್ನ ಕರಕೊಂಡು ಅಲ್ಲಿಗೆ ಹೋಗ್ತಾರೆ ಮೇಷ್ಟು. ಅಲ್ಲಿ ಊಟ ಆದ ಮೇಲೆ ಮತ್ತೆ ಎಲ್ಲ ನಡೆದು ಕೊಂಡು ವಾಪಸ್ಸು ಬರ್ತಾರೆ. ಸುಸ್ತಾಗಿರತ್ತೆ. ಮಕ್ಕಳು ಆಟ ಆಡಬಹುದು, ಇವರು ನಿದ್ದೆ ಮಾಡಬಹುದು. ಅಕ್ಯಾಡೆಮಿಕ್ ಕೆಲಸ ಏನೂ ನಡೆಯೊಲ್ಲ, ಶಿಕ್ಷಕರೇ ಹೇಳ್ತಾರೆ, 'ಇದೆಲ್ಲಾ ಆಗುತ್ತೆ ಸಾರ್, ಇವರ ಮಧ್ಯೆ ಏನ್ ಕಲಿಸೋಕೆ ಆಗತ್ತೆ?' ಅಂತ. ಏಕೋಪಾಧ್ಯಾಯ ಶಾಲೆಗಳೂ ಇವೆ. ಬೆಂಗಳೂರಿನ ಸುತ್ತಮುತ್ತಲೇ ಈ ಸ್ಥಿತಿ ಆದ್ರೆ ಇನ್ನು ದೂರದ ಗ್ರಾಮಾಂತರ ಪ್ರದೇಶಗಳಲ್ಲಿ ಹೇಗಿರಬಹುದು?!

ಬ್ರಿಟಿಷರ ಕಾಲದಿಂದ ಬಂದಿರುವ ಶಿಕ್ಷಣ ಪದ್ಧತಿ ಈಗ ನಮ್ಮ ಅಗತ್ಯಗಳಿಗೆ ತಕ್ಕಂತೆ ಮಾರ್ಪಾಡಾಗಬೇಕಾಗಿದೆ. ಮುಖ್ಯವಾಗಿ ಮೂಲಭೂತ ಸೌಲಭ್ಯಗಳನ್ನು ನಿರ್ಮಿಸಿ, ಅರ್ಹ ಶಿಕ್ಷಕರನ್ನು ನೇಮಿಸಿ, ಇವರಲ್ಲಿ ಹೊಣೆಗಾರಿಕೆಯನ್ನು ಹೆಚ್ಚಿಸಬೇಕಿದೆ.

ಕಲಿಕೆ ಮಕ್ಕಳಿಗೆ ರಕ್ತಗತವಾದದ್ದು. ಆಟ ಆಡುವಾಗ 'ಟಪಕ್' ಅಂತ ಬಿದ್ದು ಹೋಗತ್ವೆ, ನಗುತ್ವೆ. ಅವು ಅಳೋಲ್ಲ! ಮತ್ತೆ ಎದ್ದೇಳತ್ವೆ. ಕಲಿಕೆ ಅವರಿಗೆ ಸ್ವಾಭಾವಿಕ, ಸಹಜ. ಕಲಿಕೆಯಲ್ಲಿ ಮಕ್ಕಳನ್ನ ತೊಡಗಿಸಿಕೊಳ್ಳುವುದು ಮುಖ್ಯ. ಮೊದಲು ಮಕ್ಕಳು ಪಾಲ್ಗೊಳ್ಳುವಂತೆ ಮಾಡಬೇಕು. ಇನ್ನೊಂದು, ಕಲಿಕೆಯ ಅನುಭವ ಮಗುವಿಗೆ ಆಸಕ್ತಿದಾಯಕವಾಗಿ ಇರಬೇಕು. ಇವೆರಡೂ ಈಗಿನ ಶಿಕ್ಷಣ ಪದ್ಧತಿಯಲ್ಲಿ ಇಲ್ಲ. ಆದ್ದರಿಂದ ಈಗಿನ ಮಕ್ಕಳು ಏನೂ ಕಲೀತಾ ಇಲ್ಲ.

**ಹೊ :** ಆಂಗ್ಲಭಾಷೆಯನ್ನ ಪ್ರಾಥಮಿಕ ಹಂತದಲ್ಲಿಯೇ ಮಕ್ಕಳಿಗೆ ಪರಿಚಯಿಸಬೇಕೆ ಬೇಡವೆ – ಇದರ ಬಗ್ಗೆ ವ್ಯಾಪಕ ಚರ್ಚೆ, ಗೊಂದಲ ನಡೆಯುತ್ತಲೇ ಇದೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಕೆ.ವಿ.ಆರ್. :** ಎಲ್ಲರೂ ಹೇಳೋದು ಮಾತೃಭಾಷೆ ಕಲಿಕೆಯ ಮಾಧ್ಯಮವಾಗಿರಬೇಕು ಅಂತ. ಇಂಗ್ಲಿಷ್ ಹೇಳಿಕೊಡೋದು ಸರಿ ಇಲ್ಲ ಅಂತ. ಈ ಮಾತು ಜರ್ಮನ್, ಫ್ರೆಂಚ್, ಸ್ಪ್ಯಾನಿಷ್ ಭಾಷೆಗಳಿಗೆ ಸರಿಹೊಂದಬಹುದು. ಈ ಸಂಶೋಧನೆ ನಮ್ಮಲ್ಲಿಯ ಇಂಗ್ಲಿಷ್‌ಗೆ ಅನ್ವಯಿಸೋಲ್ಲ, ಕಾರಣ ನಮ್ಮ ಪರಿಸರದಲ್ಲಿ ಇಂಗ್ಲಿಷ್ ಇನ್ನೂರು ವರ್ಷಗಳ ಬ್ರಿಟಿಷರ ಆಳ್ವಿಕೆಯಿಂದ ಬಂದುಬಿಟ್ಟಿದೆ. ಎದುರುಗಡೆ ಅಂಗಡಿ ಕಾಣಿಸ್ತಿದೆ ನೋಡಿ. 'ಟೈಲರ್ರು'– ಅವನ ನಾಮಫಲಕದಲ್ಲಿ ಇಂಗ್ಲಿಷ್ ಇದೆ. ಅಂಗಡಿ ಮಳಿಗೆಗಳ ನಾಮಫಲಕಗಳಲ್ಲೆಲ್ಲ ಇಂಗ್ಲಿಷ್ ಪದಗಳಿವೆ. ಬೈಸಿಕಲ್ಲು... ಎಷ್ಟು ಕನ್ನಡ ಪದಗಳನ್ನ ಬರೀತೀರ? ಚಕ್ರ, ಗಂಟೆ – ಅಷ್ಟೆ. ಪೆಡಲ್ಲು, ಬ್ರೇಕು, ಚೈನು, ಸೀಟು, ಕ್ಯಾರಿಯರ್ರು, ಫ್ರೇಮ್ – ಇವೆಲ್ಲ ಇಂಗ್ಲಿಷಿನ ಪದಗಳೆ! 'ಉ' ಪ್ರತ್ಯಯ ಸೇರಿಸ್ತೀವಿ ಅಷ್ಟೆ. ಇಂಗ್ಲಿಷ್ – ಪದಗಳು ನಮ್ಮ ಬಳಕೆಯಲ್ಲಿ ಸೇರಿಬಿಟ್ಟಿವೆ. ನಮ್ಮ ವಾತಾವರಣದಲ್ಲಿ, ಸಂಸ್ಕೃತಿಯಲ್ಲಿ ಇಂಗ್ಲಿಷ್ ಹಾಸುಹೊಕ್ಕಾಗಿದೆ. ಹಳ್ಳಿಯ ಅನಕ್ಷರಸ್ಥರಿಗೂ ಪೊಲೀಸ್ ಸ್ಟೇಷನ್ನು, ಬಸ್‌ಸ್ಟ್ಯಾಂಡು, ಹೋಟೆಲು ಅಂದ್ರೆ ಅರ್ಥ ಆಗುತ್ತೆ. ಮಕ್ಕಳು ಇಂಗ್ಲಿಷನ್ನು ಕಲಿಯಲೇನೂ ಒದ್ದಾಡೊಲ್ಲ, **ಕಲಿಸುವ ಕ್ರಮ ಅತ್ಯಂತ ಮುಖ್ಯ.**

ಶಿಕ್ಷಣ ತಜ್ಞರು, ನರವಿಜ್ಞಾನ ತಜ್ಞರು ಮಿದುಳಿನ ಸ್ಕ್ಯಾನಿಂಗ್ ಆಧಾರದ ಮೇಲೆ ಮಾಡಿದ ಪ್ರಯೋಗಗಳಲ್ಲಿ ಮಕ್ಕಳಿಗೆ ೮ ವರ್ಷದವರೆಗೆ ಭಾಷೆಗಳನ್ನು ಕಲಿಯುವ ಸಾಮರ್ಥ್ಯ ಹೆಚ್ಚಾಗಿರುತ್ತದೆ ಎಂಬುದು ಸಾಬೀತಾಗಿದೆ. ಆದ್ದರಿಂದ ಕಲಿಯಬೇಕಾದ ಭಾಷೆಗಳನ್ನು ಎಷ್ಟು ಬೇಗ ಪ್ರಾರಂಭಿಸಿದರೆ ಅಷ್ಟೂ ಒಳ್ಳೆಯದು.

**ಹೊ :** ಅನಕ್ಷರಸ್ಥ ಕುಟುಂಬಗಳಿಂದ ಬಂದ ಮಕ್ಕಳಿಗೆ, ತೀರಾ ಬಡತನದಿಂದ ಬಂದ ಮಕ್ಕಳಿಗೆ ಶಾಲೆಗೆ ಬರುವಂತೆ, ಓದಿನಲ್ಲಿ ಪ್ರೀತಿ ಬೆಳೆಯುವಂತೆ ಏನು ಮಾಡಬಹುದು?

**ಕೆ.ವಿ.ಆರ್. :** ಅನಾನುಕೂಲ ಪರಿಸ್ಥಿತಿಗಳಿಂದ ಬಂದ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಪರಿಣಾಮಕಾರಿಯಾಗಲು ಪೂರ್ವಸಿದ್ಧತೆ ಕಾರ್ಯಕ್ರಮ ಅಗತ್ಯ ಇದೆ. ಇರೊ ಕಾಲಾವಧಿ ಜೂನ್‌ನಿಂದ ಸೆಪ್ಟೆಂಬರ್‌ವರೆಗೆ, ಅವರು ಒಂದನೇ ತರಗತಿಗೆ ಬಂದು ಸೇರುತ್ತಾರೆ. ಶುರುವಿಗೇ ಅ ಆ ಇ ಈ ಬರಿ, ಕಾಗುಣಿತ ಬರಿ ಅಂದ್ರೆ ಬಿಟ್ಟು ಹೊರಟುಹೋಗ್ತಾರೆ. ಆದ್ದರಿಂದ ಏನು ಮಾಡಬೇಕು? ಶಾಲೆಗೆ ಹೊಂದಿಕೊಳ್ಳುವ ಹಾಗೆ ಒಂದು ನಾಲ್ಕು ತಿಂಗಳು ತರಬೇತಿ ಕೊಡಬೇಕು. ಹೇಗೆ? ಜ್ಞಾನೇಂದ್ರಿಯಗಳ ಮೂಲಕ ವೀಕ್ಷಣಾ ಕೌಶಲ್ಯಗಳ ಬೆಳವಣಿಗೆ. ನಮ್ಮ ಹಿಂದಿನ ಸಂಸ್ಕೃತಿಯಲ್ಲಿ ಇದು ಇತ್ತು. ಕಥೆಗಳ ಮೂಲಕ ಶಿಕ್ಷಣ ಕೊಡುವುದು. ಪಾಶ್ಚಾತ್ಯ ದೇಶಗಳಲ್ಲಿ ಅನೇಕರು ಸಂಶೋಧನೆಗಳನ್ನ ಮಾಡಿದ್ದಾರೆ. 'ಫ್ರೋಬೆಲ್' ಎನ್ನುವ ಜರ್ಮನ್ 'ಕಿಂಡರ್‌ಗಾರ್ಟನ್' ಎಂಬ ಪದ್ಧತಿ ತಂದ. ಅಂದರೆ 'ಮಕ್ಕಳ ತೋಟ' ಅಂತ. ಎಲ್.ಕೆ.ಜಿ., ಯು.ಕೆ.ಜಿ. ಅಂತಾರೆ. ಹಾಗಂದ್ರೇನು ಅಂತಾನೇ ನರ್ಸರಿ ಶಿಕ್ಷಕರಿಗೆ ಗೊತ್ತಿರೊಲ್ಲ. ಸುಮ್ಮನೆ A ಇಂದ Bವರೆಗೂ ಬರಿ, ೧ರಿಂದ ೧೦೦ರವರೆಗೆ ಬರಿ ಅಂತ ಪ್ರಾಣ ತೆಗೀತಾರೆ. ಮಕ್ಕಳಿಗೆ ಅವು 'ಟಾರ್ಚರ್ ಚೇಂಬರ್', ಬಾಲಕಾರ್ಮಿಕರಿಗೂ ಇವರಿಗೂ ಏನೂ ವ್ಯತ್ಯಾಸವೇ ಇರೊಲ್ಲ. ಇದು ತಪ್ಪಬೇಕು. ಮಕ್ಕಳಿಗೆ ಪದಸಂಪತ್ತು ಹೆಚ್ಚಬೇಕು, ಭಾಷಾ ಕೌಶಲ್ಯ ಹೆಚ್ಚಬೇಕು. ಭಾಷಾ ಕೌಶಲ್ಯಗಳಿಗೂ ಬುದ್ಧಿಶಕ್ತಿಗೂ ನಿಕಟವಾದ ಸಂಬಂಧವಿದೆ.

**ಹೊ :** ಜ್ಞಾನೇಂದ್ರಿಯಗಳ ಮೂಲಕ ವೀಕ್ಷಣಾ ಕೌಶಲ್ಯಗಳ ಬೆಳವಣಿಗೆ ಎಂದಿರಿ. ಹೇಗೆ?

**ಕೆ.ವಿ.ಆರ್. :** ''ಜ್ಞಾನಾರ್ಜನೆಗೆ ಜ್ಞಾನೇಂದ್ರಿಯಗಳು ದಿಡ್ಡಿ ಬಾಗಿಲುಗಳು'' ಎನ್ನುತ್ತಾರೆ ಶಿಕ್ಷಣ ತಜ್ಞರು. ನಮ್ಮ ಜ್ಞಾನಾರ್ಜನೆ ಶೇ. ೮೫ ಪಾಲು ಕಣ್ಣಿನ ಮೂಲಕ, ಶೇ. ೧೧ ಪಾಲು ಕಿವಿಯ ಮೂಲಕ, ಉಳಿದ ನಾಲ್ಕು ಪಾಲು ವಾಸನೆ, ರುಚಿ ಮತ್ತು ಸ್ಪರ್ಶೇಂದ್ರಿಯಗಳ ಮೂಲಕ ಆಗುತ್ತದೆ. ಆದ್ದರಿಂದ ಜ್ಞಾನಾರ್ಜನೆಯ ಸಾಮರ್ಥ್ಯ ಬೆಳೆಯಲು ವೀಕ್ಷಣಾ ಸಾಮರ್ಥ್ಯ ಬೆಳೆಯಬೇಕು. ವೀಕ್ಷಣೆಯಲ್ಲಿ ನೋಡುವುದು, ಕೇಳುವುದು, ಮೂಸುವುದು, ರುಚಿ ನೋಡುವುದು, ಮತ್ತು ಸ್ಪರ್ಶ ಮಾಡಿ ತಿಳಿಯುವುದು ಸೇರಿವೆ.

ಮಕ್ಕಳು ಸುತ್ತಲಿನ ಪರಿಸರದಲ್ಲಿರುವ ವಸ್ತುಗಳನ್ನು ಗಮನಿಸುವಂತಾಗಬೇಕು. ಅಧ್ಯಾಪಕರೂ ಗಿಡ, ಮರ, ಪ್ರಾಣಿ ಹಾಗೂ ಇತರ ಭೌತಿಕ ವಸ್ತುಗಳನ್ನು ವೀಕ್ಷಿಸಿ ಅವುಗಳ ಬಣ್ಣ, ಆಕಾರ, ಗಾತ್ರ, ರೂಪ ವಿವರಿಸಲು ಸಂಭಾಷಣೆಯಲ್ಲಿ ತೊಡಗಿಸಬೇಕು. ಹತ್ತು ವರ್ಷದವರೆಗೂ ಮಕ್ಕಳಿಗೂ ನೇರ ಅನುಭವಗಳು ಬಹಳ ಮುಖ್ಯ. ಅನುಭವಗಳ ಆಧಾರದ ಮೇಲೆ ಸಂಭಾಷಣೆಯಲ್ಲಿ ತೊಡಗಿಸಿದಾಗ ಅವರ ಬುದ್ಧಿಶಕ್ತಿ ಅರಳುತ್ತದೆ. ಪದ ಸಂಪತ್ತು ಹೆಚ್ಚುತ್ತದೆ. ಕಲಿಕೆಯ ಸಾಮರ್ಥ್ಯ ಬೆಳೆಯುತ್ತದೆ.

ಉದಾಹರಣೆಗೆ: ಒಂದು ಮೂಲಂಗಿ ತೋರಿಸಿ.

ಇದರ ಹೆಸರೇನು? ಇದರ ಬಣ್ಣವೇನು? ವಾಸನೆ ಇದೆಯೆ? ರುಚಿ ಹೇಗಿದೆ? ಮುಟ್ಟಿ ನೋಡಿದರೆ ಮೃದುವಾಗಿದೆಯೆ? ಕಠಿಣವಾಗಿದೆಯೆ? ಎಂದು ಕೇಳಬೇಕು. ಮಕ್ಕಳು ಅನುಭವಿಸಿ ಉತ್ತರ ಕೊಡಬೇಕು. ಈ ಅನುಭವಗಳು ಮತ್ತು ಉತ್ತರ ಮಗುವಿನಲ್ಲಿ ಮೂಲಂಗಿಯ ಪರಿಕಲ್ಪನೆಯನ್ನು ಬೆಳೆಸುತ್ತದೆ.

ಇದೇ ರೀತಿ ಕ್ಯಾರಟ್, ಕೋಸು, ಆಲೂಗಡ್ಡೆ, ಈರುಳ್ಳಿ, ಬದನೆಕಾಯಿ, ಹುರುಳಿಕಾಯಿ, ಬೆಂಡೆಕಾಯಿ, ಕುಂಬಳಕಾಯಿ, ಹಾಗಲಕಾಯಿ, ಪಡವಲಕಾಯಿ ಮುಂತಾದ ತರಕಾರಿಗಳನ್ನು ಮಕ್ಕಳಿಗೆ ತೋರಿಸಿ ಪ್ರತಿಯೊಂದರ ಹೆಸರು, ಬಣ್ಣ, ಆಕಾರ, ವಾಸನೆ, ರುಚಿ ಹೇಳಲು ಮಾರ್ಗದರ್ಶನ ಕೊಡಬೇಕು.

ಅನಂತರ ಮೂಲಂಗಿ, ಕ್ಯಾರಟ್ ಎರಡನ್ನೂ ವೀಕ್ಷಿಸಿ ಅವುಗಳಲ್ಲಿ ಕಾಣುವ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಪತ್ತೆಮಾಡಿ ಹೇಳುವಂತೆ; ಹಾಗೆಯೇ ಟೊಮ್ಯಾಟೊ-ಆಲೂಗಡ್ಡೆ; ಹಾಗಲಕಾಯಿ-ಪಡವಲಕಾಯಿ; ಕೋಸು-ಕುಂಬಳಕಾಯಿ – ಹೀಗೆ ಎರಡೆರಡನ್ನು ಹೋಲಿಸಿ ಅವುಗಳ ಬಣ್ಣ, ವಾಸನೆ, ತೂಕ, ಆಕಾರ, ರುಚಿಗಳಲ್ಲಿ ಕಾಣುವ ಹೋಲಿಕೆ ವ್ಯತ್ಯಾಸಗಳನ್ನು ತಿಳಿಸಬೇಕು.

ಹಾಗೆಯೇ ಬಾಳೆಹಣ್ಣು, ಸೀಬೆಹಣ್ಣು, ಹಲಸಿನ ಹಣ್ಣು, ಸೇಬು, ದ್ರಾಕ್ಷಿ, ಮಾವು ಮುಂತಾದ ಹಣ್ಣುಗಳನ್ನು ತೋರಿಸಿ ಪ್ರತಿಯೊಂದರ ಹೆಸರು, ಬಣ್ಣ, ಗಾತ್ರ, ಆಕಾರ, ವಾಸನೆ, ರುಚಿ ಹೇಳುವುದು, ಅನಂತರ ಪರಸ್ಪರ ಹೋಲಿಕೆ ವ್ಯತ್ಯಾಸಗಳನ್ನು ಪತ್ತೆ ಮಾಡಲು ಮಗುವಿಗೆ ಸಹಾಯ ಮಾಡಬೇಕು.

ಇದರಂತೆಯೇ ಪರಿಸರದಲ್ಲಿ ಕಾಣುವ ಗಿಡ ಮರಗಳನ್ನು, ಪ್ರಾಣಿಗಳನ್ನು ವೀಕ್ಷಿಸಿ ಗುರುತಿಸುವಂತಾಗಬೇಕು. ಹಸು, ನಾಯಿ, ಬೆಕ್ಕು, ಕುದುರೆ, ಕುರಿ, ಮೇಕೆ, ಕೋಳಿ, ಕಾಗೆ, ಗುಬ್ಬಚ್ಚಿ, ಹಲ್ಲಿ, ಕಪ್ಪೆ, ಜಿರಲೆ, ನೊಣ, ಸೊಳ್ಳೆ ಮುಂತಾದ ಪ್ರಾಣಿಗಳನ್ನು ನೋಡುತ್ತಾ ಮಕ್ಕಳು ಕಲಿಕೆ ಪ್ರಾರಂಭಿಸಬೇಕು. ಆ ಪ್ರಾಣಿಯ ಉಪಯೋಗ ಅಥವಾ ಹಾನಿ ಹೇಳಬೇಕು. ಎರಡೆರಡು ಪ್ರಾಣಿಗಳನ್ನು ಹೋಲಿಸಿ ಅವುಗಳಲ್ಲಿನ ವ್ಯತ್ಯಾಸಗಳನ್ನು ತಿಳಿಸಬೇಕು. ಉದಾಹರಣೆಗೆ: ಹಸುವಿನ ಬಾಲ ಹಾಗೂ ಕುದುರೆ ಬಾಲಕ್ಕೆ ಏನು ವ್ಯತ್ಯಾಸ? ನಾಯಿಯ ಬಾಲ ಹಾಗೂ ಬೆಕ್ಕಿನ ಬಾಲಕ್ಕೂ ಏನು ವ್ಯತ್ಯಾಸ? ಕುರಿಯ ಆಹಾರ ಮತ್ತು ಬೆಕ್ಕಿನ ಆಹಾರಕ್ಕೂ ಏನು ವ್ಯತ್ಯಾಸ? ಎಮ್ಮೆಯ ಗೊರಸಿಗೂ ಮೇಕೆಯ ಗೊರಸಿಗೂ ಏನು ವ್ಯತ್ಯಾಸ? ಚಿಟ್ಟೆಯಿಂದ ಏನು ಉಪಯೋಗ?

ಮಕ್ಕಳು ತಮ್ಮ ತಮ್ಮ ಧ್ವನಿಗಳಲ್ಲೇ ಕಾಣುವ ಹೋಲಿಕೆ – ವ್ಯತ್ಯಾಸಗಳನ್ನು ಹೇಳುವಂತೆ ಮಾರ್ಗದರ್ಶನ ಮಾಡಬೇಕು. ಪಿಸುಗುಟ್ಟುವುದು, ಮಾತಾಡುವುದು, ಕಿರುಚುವುದು, ಕೂಗುವುದು, ಅಳುವುದು, ನಗುವುದು – ಇವುಗಳನ್ನು ಅವರಿಂದಲೇ ಅಭಿನಯಿಸಿ ತೋರಿಸಬೇಕು. ಬೇರೆ ಬೇರೆ ಪದಗಳನ್ನು ಹೇಳಿದಾಗ ಅದಕ್ಕೆ ತಕ್ಕ ಶಬ್ದಗಳನ್ನು ಮಕ್ಕಳು ಹೇಳಲು ಪ್ರಚೋದಿಸಬೇಕು. ಹಾಗೆಯೇ ವಾಹನಗಳ ಶಬ್ದ, ಹಕ್ಕಿಗಳ ಶಬ್ದ ಹಾಗೂ

ಹಸು, ನಾಯಿ, ಬೆಕ್ಕು, ಕುದುರೆ, ಕತ್ತೆ ಮುಂತಾದ ಪ್ರಾಣಿಗಳ ಶಬ್ದಗಳನ್ನು ಮಕ್ಕಳು ತಮ್ಮ ತಿಳುವಳಿಕೆ ಮೂಲಕ ಹೇಳುವಂತೆ ಮಾಡುವುದು.

ಸಂತೆ, ದೇವಸ್ಥಾನ, ಶಾಲೆ, ಆಸ್ಪತ್ರೆ, ಅಂಗಡಿ, ಬಸ್ ಸ್ಟ್ಯಾಂಡ್ ಮುಂತಾದ ಸ್ಥಳಗಳಲ್ಲಿ ಯಾವ ಬಗೆ ಶಬ್ದಗಳನ್ನು ಕೇಳುತ್ತೇವೆ ?

ವಾಸನೆಯಿಂದ ವಸ್ತುಗಳನ್ನು ಗುರುತಿಸಲು ಮಾರ್ಗದರ್ಶನ ಅವಶ್ಯಕ. ಈರುಳ್ಳಿ, ಬೆಳ್ಳುಳ್ಳಿ, ಮೂಲಂಗಿ, ಕರಿಬೇವಿನ ಸೊಪ್ಪು, ಕೊತ್ತಂಬರಿ ಸೊಪ್ಪು, ದವನ, ಮಲ್ಲಿಗೆ ಹೂ, ಸಂಪಿಗೆ ಹೂವು, ಸುಗಂಧ ರಾಜ ಹೂವು, ಬಾಳೆಹಣ್ಣು, ಹಲಸಿನ ಹಣ್ಣು, ಏಲಕ್ಕಿ, ಲವಂಗ, ಇಂಗು, ಟೀ ಪುಡಿ, ಕಾಫಿಪುಡಿ, ಸೋಪು, ಸೀಗೆಪುಡಿ, ಮೆಣಸಿನಪುಡಿ ಮುಂತಾದವುಗಳನ್ನು ಮೂಸಿ ನೋಡಿ ಪ್ರತಿಯೊಂದರ ವಾಸನೆ ಗುರುತಿಸಲು ಕಲಿಸಬೇಕು. ಅನಂತರ ಮಕ್ಕಳಿಗೆ ಕಣ್ಣಿಗೆ ಬಟ್ಟೆ ಕಟ್ಟಿ ಯಾವುದಾದರೂ ವಸ್ತುವನ್ನು ಮೂಸಲು ಕೊಟ್ಟಾಗ ಅದರ ವಾಸನೆಯಿಂದ ವಸ್ತುವನ್ನು ಸರಿಯಾಗಿ ಹೆಸರಿಸಿದರೆ ಮೌಲ್ಯಮಾಪನವಾಯಿತು. ಇದನ್ನು ಆಟದ ತರಹ ಮಾಡಬಹುದು.

ಬೆಲ್ಲ, ಸಕ್ಕರೆ, ಜೇನುತುಪ್ಪ, ಹಾಗಲಕಾಯಿ, ಉಪ್ಪಿನಕಾಯಿ, ಹುಣಿಸೆಹಣ್ಣು, ನಿಂಬೆ ಹಣ್ಣು, ಮೆಣಸಿನಕಾಯಿ ಮುಂತಾದವನ್ನು ರುಚಿ ನೋಡಿ ಸಿಹಿ, ಹುಳಿ, ಉಪ್ಪು, ಕಹಿ, ಕಾರ ಪತ್ತೆ ಮಾಡಬೇಕು. ಅನಂತರ ಅವರು ದಿನವೂ ತಿನ್ನುವ ತಿಂಡಿಗಳಲ್ಲಿ ಪ್ರತಿ ರುಚಿಗೂ ಎರಡು ಉದಾಹರಣೆ ಕೊಡಲು ಹೇಳಬೇಕು. ಪಾಯಸ, ಸಜ್ಜಿಗೆ – ಸಿಹಿ ; ಪಕೋಡಾ, ಬೋಂಡಾ – ಖಾರ... ಹೀಗೆ.

ಮುಟ್ಟಿ ನೋಡಿ, ಎತ್ತಿ ನೋಡಿ ವಸ್ತುಗಳು ಮೃದುವಾಗಿದೆಯೇ ? ಒರಟಾಗಿದೆಯೇ ? ಹಗುರವೇ ? ಭಾರವೇ ? ಬಿಸಿಯೇ ? ತಂಪೇ ? ಹೇಳಬೇಕು. ಉದಾಹರಣೆಗೆ, ಗೋಣಿ ಚೀಲ ಒರಟು, ರೇಷ್ಮೆ ಬಟ್ಟೆ ಮೃದು, ತೆಂಗಿನಕಾಯಿ ಭಾರ, ಮೆಣಸಿನಕಾಯಿ ಹಗುರ, ಹಲಸಿನ ಹಣ್ಣಿನ ಸಿಪ್ಪೆ ಒರಟು, ಬಾಳೆಹಣ್ಣಿನ ಸಿಪ್ಪೆ ಮೃದು, ಕುಂಬಳಕಾಯಿ ಭಾರ, ಬೆಂಡೆಕಾಯಿ ಹಗುರ, ಕಲ್ಲು ಕಠಿಣ, ಹತ್ತಿ ಮೃದು, ಕಂಬಳಿ ದಪ್ಪ, ಪಂಚೆ ತೆಳು. ಈ ರೀತಿ ಜ್ಞಾನೇಂದ್ರಿಯಗಳಿಗೆ ನೇರ ಅನುಭವಗಳ ಆಧಾರದ ಮೇಲೆ, ಸಂಭಾಷಣೆಯ ಮೂಲಕ ಮಕ್ಕಳಿಗೆ ವಿವಿಧ ವಿಷಯಗಳನ್ನು ತಿಳಿಸಬೇಕು. ಇದು ಎಲ್ಲ ಜ್ಞಾನಾರ್ಜನೆಗೂ ಸಹಕಾರಿ.

**ಹೊ :** ಭಾಷಾ ಕೌಶಲ್ಯಗಳ ಬೆಳವಣಿಗೆ ಎಂದಿರಿ. ಹೇಗೆ ?

**ಕೆ.ವಿ.ಆರ್. :** ಪ್ರತಿದಿನವೂ ಮಕ್ಕಳಿಗೆ ಒಂದಾದರೂ ಪದ್ಯ ಹೇಳಿಕೊಡಬೇಕು. ಸರ್ವಜ್ಞನ ಪದಗಳಲ್ಲಿ ಶಿಶುಗೀತೆಯ ಲಕ್ಷಣಗಳೂ ಸೇರಿವೆ. ಕಲಿಯಲು ಸುಲಭ. ಉದಾಹರಣೆಗೆ :

ವಿದ್ಯೆಯುಳ್ಳವನ ಮುಖವು ಮುದ್ದು ಬರುವಂತಿಕ್ಕು
ವಿದ್ಯೆಯಿಲ್ಲದವನ ಬರಿ ಮುಖವು ಹಾಳೂರ
ಹದ್ದಿನಂತಕ್ಕು ಸರ್ವಜ್ಞ

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ ನಡುವೆ ಎತ್ತಣಹು ? (ಸರ್ವಜ್ಞ)

ಮಕ್ಕಳು ಇವುಗಳನ್ನು ಉತ್ಸಾಹದಿಂದ ಕಲಿತು ತಮ್ಮಷ್ಟಕ್ಕೆ ತಾವೇ ಹಾಡಿಕೊಳ್ಳುತ್ತಾರೆ. ಇದೇ ರೀತಿ ಬಸವಣ್ಣ, ದೇವರದಾಸಿಮಯ್ಯ, ಅಕ್ಕಮಹಾದೇವಿ, ಕನಕದಾಸರ ಪದ್ಯಗಳನ್ನು ಹೇಳಿಕೊಡಬೇಕು. ಅದರಲ್ಲೂ ಸುಲಭವಾಗಿ ಅರ್ಥವಾಗುವ ಜೀವನ ಮೌಲ್ಯಗಳನ್ನು ಪರೋಕ್ಷವಾಗಿ ಹೇಳಿಕೊಡುವ ಪದ್ಯಗಳಿಗೆ ಹೆಚ್ಚಿನ ಒತ್ತು ಕೊಡಬೇಕು.

ಒಟ್ಟಿಗೆ ಹೇಳಿಕೊಡಬೇಕು. ನಂತರ ಸಣ್ಣ ಗುಂಪಾಗಿ ಹೇಳುವುದು, ಸಾಮೂಹಿಕವಾಗಿ ಹೇಳುವುದು ರೂಢಿಯಾಗಬೇಕು. ಆಮೇಲೆ ಒಬ್ಬೊಬ್ಬರೆ... 'ಯಾರು ಹೇಳ್ತೀರ ನೋಡೋಣ, ಹೇಳಿ' ಅಂತ ಪ್ರೋತ್ಸಾಹಿಸುವುದು. ಸಾಧ್ಯವಾದರೆ ಟೇಪ್ ರೆಕಾರ್ಡರ್ ಬಳಸುವುದರ ಮೂಲಕ ಮಕ್ಕಳ ಉತ್ಸಾಹವನ್ನು ಹೆಚ್ಚಿಸಬೇಕು. ಮಕ್ಕಳು ಹೇಳಿದ ಪದ್ಯಗಳ ಟೇಪುಗಳನ್ನು ಪೋಷಕರು ಕೇಳಿದರೆ ಮಕ್ಕಳನ್ನು ಶಾಲೆಗೆ ಕಳುಹಿಸಲು ಶ್ರದ್ಧೆವಹಿಸುತ್ತಾರೆ.

ಒಂದು ಪದ್ಯ ಚೆನ್ನಾಗಿ ಕಲಿತ ಮೇಲೆ ಮತ್ತೊಂದನ್ನು ಹೇಳಿಕೊಡಬೇಕು. ಅವಸರ ಪಡಬಾರದು. ವಾರಕ್ಕೆ ಒಂದು ಪದ್ಯ ಕಲಿತರೂ ಸಾಕು. ಅವರ ಉತ್ಸಾಹಕ್ಕೆ ತಕ್ಕಂತೆ ಕಲಿಕೆಯ ವೇಗವಿರಬೇಕು.

## ಅಬ್ಬರದ ಸುನಾಮಿ !!

ರಾತ್ರಿ ಮಲಗಿದ ಕಂದಮ್ಮಗಳ
ಅಳುವಿನ ಸದ್ದಿಲ್ಲ
ಅದೃಶ್ಯ ಅನಾಮಿಕ
ಸಾವಿಗೆ ಮದ್ದಿಲ್ಲ
ಕನಸು ಮನಸುಗಳಲ್ಲಿ ತುಂಬಿದೆ
ಅಗೋಚರ ಸುನಾಮಿ !

ಒಡೆದ ಮನೆಗಳೆಷ್ಟೊ
ಮುರಿದ ಮನಗಳೆಷ್ಟೊ
ಬದಲಾಗುವ ಚಿತ್ತಾರಗಳ
ಸದ್ದು ಕೇಳುವರ‍್ಯಾರೊ ?
ಅನಾಥನಿಗೆ ಆಸರೆ, ಮಾನಿನಿಗೆ ಮಾನ
ವಚನಭ್ರಷ್ಟನಿಗೆ ವಚನ
ಕೊಡುವರ‍್ಯಾರು ?

ಎತ್ತ ನೋಡಿದರತ್ತ
ಗತಿಯಿಲ್ಲದ, ಗಡಿಯಿಲ್ಲದ ಚಿತ್ತಗಳು
ನೆಮ್ಮದಿ ಇಲ್ಲದ ಚಲಿಸುವ ಸಮಾಧಿಗಳು
ದಾರಿ ತಪ್ಪಿಸುವವರ ದಾರಿ ತಪ್ಪಿಸಬೇಕು
ಬಹುರೂಪಿ ಸುನಾಮಿಗೆ
ಗುಂಡಿ ತೋಡಬೇಕು.

ಖುರ್ಷಿದ್ ಆಲಂ ಮೋಮಿನ
'ರೆಹಮಾನ್ ಮಂಜಿಲ್', ಗುರುವಾರಪೇಟೆ
ಕಿತ್ತೂರು - ೫೯೧ ೧೧೫, ಬೆಳಗಾವಿ ಜಿಲ್ಲೆ





ಮಕ್ಕಳಿಗೆ ಕತೆ ಕೇಳಲು ಆಸೆ. ಚೆನ್ನಾಗಿರುವ ಕತೆಯೊಂದನ್ನು ಹೇಳಿದ ಮೇಲೆ ಪ್ರತಿ ಮಗುವೂ ಅದನ್ನು ಹೇಳಲು ಪ್ರೋತ್ಸಾಹಿಸಬೇಕು. ಸಾಧ್ಯವಾದಲ್ಲಿ ಸಣ್ಣ ಗುಂಪುಗಳಲ್ಲಿ ಕತೆಯನ್ನು ಮಕ್ಕಳು ಅಭಿನಯಿಸಲು ಮಾರ್ಗದರ್ಶನ ಮಾಡಬೇಕು. ಈ ಕಾರ್ಯಕ್ರಮಕ್ಕೆ ಬಳಸಲು ಕತೆಗಳಿಗೆ ಮಿತಿಯೇ ಇಲ್ಲ. ಪಂಚತಂತ್ರದ ಕತೆಗಳು, ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣದಿಂದ ಆಯ್ದ ಕತೆಗಳು, ಜೀವನ ಚರಿತ್ರೆಗಳು, ಈಸೋಪನ ಕತೆಗಳು, ಬೀರಬಲ್ಲನ ಕತೆಗಳು, ತೆನಾಲಿ ರಾಮಕೃಷ್ಣನ ಕತೆಗಳು... ದಿನವೂ ಕತೆ ಹೇಳುವುದು ಮುಖ್ಯ. ಅದೇ ರೀತಿ ಮಕ್ಕಳ ಅಭಿನಯಕ್ಕೂ ಪ್ರೋತ್ಸಾಹ ಕೊಡಬೇಕು. ಅವರ ಪದಸಂಪತ್ತು ಹೆಚ್ಚುತ್ತದೆ. ಗ್ರಹಿಕೆ, ಅಭಿವ್ಯಕ್ತಿ ಉತ್ತಮಗೊಳ್ಳುತ್ತವೆ.

**ಹೊ** : ಬರವಣಿಗೆಯನ್ನು ರೂಢಿಮಾಡಿಸುವುದು, ಗಣಿತದ ಪರಿಚಯ ಮಾಡಿಸುವುದು ಹೇಗೆ ?

**ಕೆ.ವಿ.ಆರ್.** : ಮೊದಲಿಗೆ ಸಂಖ್ಯಾಜ್ಞಾನ. ಅದನ್ನು ಬೆಳಸಲು ಅವರ ಶರೀರ ಭಾಗಗಳೇ ಮೊದಲ ಪಾಠೋಪ ಕರಣಗಳು. ನನಗೆ ಒಂದು ಮೂಗಿದೆ, ಒಂದು ಬಾಯಿ ಇದೆ, ಎರಡು ಕಣ್ಣುಗಳಿವೆ, ಎರಡು ಕಿವಿಗಳಿವೆ, ಎರಡು ಕೈಗಳಿವೆ, ಎರಡು ಕಾಲುಗಳಿವೆ. ಹಾಗೆಯೇ ಕೈ ಬೆರಳುಗಳ, ಕಾಲ್ಬೆರಳುಗಳ ಸಹಾಯದಿಂದ ಎಣಿಕೆ ಮಾಡುವುದನ್ನು ಕಲಿಸಬೇಕು. ಹುಣಿಸೆ ಬೀಜ, ಪರಕೆ ಕಡ್ಡಿ, ಕಲ್ಲು, ಮಕ್ಕಳು ಎಣಿಕೆ ಕಲಿಯಲು ಒಳ್ಳೆಯ ಪಾಠೋಪಕರಣಗಳು. ನಾಣ್ಯಗಳನ್ನು ತೋರಿಸಿ ಬೇರೆ ಬೇರೆ ಮೊತ್ತದ ಹಣ ಪರಿಚಯ ಮಾಡಿಕೊಡಬೇಕು.

ಕ್ರಮೇಣ ಸ್ಲೇಟು ಬಳಪ ಬಳಸುವ ಅಭ್ಯಾಸವಾಗಬೇಕು. ಮೊದಲು ಬಳಪವನ್ನು ಸರಿಯಾಗಿ ಹಿಡಿಯಲು ತೋರಿಸಿ ಕೊಡಬೇಕು. ಸೊನ್ನೆ ಸುತ್ತುವುದು – ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ, ವೃತ್ತಗಳನ್ನು ಗೀಚುವುದು, ಅರ್ಧವೃತ್ತಗಳನ್ನು ಗೀಚುವುದು, ಸರಳರೇಖೆಗಳನ್ನು, ಬಗೆಬಗೆಯ ವಕ್ರರೇಖೆಗಳನ್ನು ಗೀಚಲು ರೂಢಿಯಾಗಬೇಕು. ಅನಂತರ ಸೊನ್ನೆ ಸುತ್ತಿ ಅದರಲ್ಲಿ ಸಣ್ಣ ಬದಲಾವಣೆಗಳನ್ನು ಮಾಡಿ ರ, ಡ, ಈ, ಲ, ಯ, ವ, ಮ, ಗ ಮುಂತಾದ ಅಕ್ಷರಗಳನ್ನು ಬರೆಯುವಂತೆ ಮಾರ್ಗದರ್ಶನ ಮಾಡಬೇಕು. ದಿನಕ್ಕೆ ಒಂದೆರಡು ಅಕ್ಷರಗಳ ಪರಿಚಯವಾದರೆ ಸಾಕು. ಆ ಅಕ್ಷರಗಳನ್ನು ಬಳಸಿ ಸಣ್ಣ ಸಣ್ಣ ಪದಗಳನ್ನು ಮಾಡಿಸಬೇಕು. ಉದಾಹರಣೆಗೆ, ರಂಗ, ಗಂಗ, ಈಗ, ಈರ, ಮರ, ವರ, ಯಮ, ಲಂಗ. ಪ್ರಾಥಮಿಕ ಪೂರ್ವ ಸಿದ್ಧತೆಯಲ್ಲಿ ಇಷ್ಟನ್ನು ಹೇಳಿಕೊಟ್ಟು ಅನಂತರ ಕಾಗುಣಿತ. ಅದು ಚೆನ್ನಾಗಿ ಬಂದ ಮೇಲೆ ಸಂಯುಕ್ತಾಕ್ಷರಗಳು. ಹೀಗೆ ಕಲಿಸಿದರೆ ಮಕ್ಕಳು ಖುಷಿಯಿಂದ ಕಲಿಯುತ್ತವೆ. ಒತ್ತಕ್ಷರಗಳನ್ನು ಮೊದಲೇ ಕಲಿಸಿ ಅವಾಂತರ ಮಾಡಿಬಿಡ್ತಾರೆ. ಅದಕ್ಕೇ ಅವರು ೭ನೇ ತರಗತಿಗೆ ಬಂದ್ರೂ ಓದೋಕೇ ಬರೋಲ್ಲ. ಎರಡನೇ ತರಗತಿಗೇ ಪಾಠಗಳು ಇರ್‍ತಾವೆ. ಶಿಕ್ಷಕರು ಏನು ಮಾಡ್ತಾರೆ, ಪಠ್ಯಪುಸ್ತಕ ಇಟ್ಟಿದ್ದಾರೆ, ಪಾಠ ಮಾಡ್ತಾರೆ. ಒಂದನೇ ತರಗತಿಯಲ್ಲಿ ಅಕ್ಷರಗಳು ಅರ್ಥವಾಗದೇ ಇದ್ದರೆ ಮುಂದಿನದೇನೂ ತಿಳಿಯೋಲ್ಲ. ನಾಲ್ಕನೇ ತರಗತಿಯಲ್ಲಿ ಓದೋಕೆ ಬರೊಲ್ಲ ಅಂದ್ರೆ ಪುನಃ ಅಕ್ಷರಗಳಿಂದ ಏನೂ ಹೇಳಿಕೊಡಲ್ಲ. ಪಾಠ ಮುಂದೆ ಮುಂದೆ ಮಾಡ್ತಾರೆ ಅಷ್ಟೆ.

**ಹೊ** : ಅನಾನುಕೂಲ ಪರಿಸ್ಥಿತಿಗಳಿಂದ ಬಂದ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಪರಿಣಾಮಕಾರಿಯಾಗಲು ಪೂರ್ವಸಿದ್ಧತೆ ಕಾರ್ಯಕ್ರಮ ಅಗತ್ಯ ಎಂದಿರಿ. ಈ ಪೂರ್ವಸಿದ್ಧತೆ ಕಾರ್ಯಕ್ರಮದಲ್ಲಿ ಇನ್ನೇನೇನು ಮಾಡಬಹುದು ?

**ಕೆ.ವಿ.ಆರ್.** : ಜ್ಞಾನೇಂದ್ರಿಯಗಳ ಮೂಲಕ ವೀಕ್ಷಣಾ ಕೌಶಲ್ಯಗಳ ಬೆಳವಣಿಗೆ, ಭಾಷಾ ಕೌಶಲ್ಯಗಳು, ಸಂಖ್ಯಾಜ್ಞಾನ, ಬರವಣಿಗೆಯ ಅಭ್ಯಾಸವಾಗಬೇಕು. ಜೊತೆಗೆ ಆಟಗಳಾಡಲು ಮಾರ್ಗದರ್ಶನ ಮಾಡಬೇಕು. ಪರಸ್ಪರ ಸಹಕರಿಸಿ ಆಟವಾಡುವ ಅಭ್ಯಾಸದ ಮೂಲಕ ನಡವಳಿಕೆ ರೂಪುಗೊಳ್ಳುತ್ತದೆ. ನಿಯಮಗಳನ್ನು ಪಾಲಿಸುವುದು, ಸೋಲು-ಗೆಲುವು ಒಪ್ಪಿಕೊಳ್ಳುವ ಅಭ್ಯಾಸ ಬೆಳೆಯಬೇಕು. ಪ್ರತಿ ಮಗುವಿನ ವಿಶೇಷ ಸಾಮರ್ಥ್ಯವನ್ನು ಗುರುತಿಸಿ ಅದು ಬೆಳೆಯಲು ಪ್ರೋತ್ಸಾಹ ಕೊಡಬೇಕು. ಕೆಲವು ಮಕ್ಕಳು ಚೆನ್ನಾಗಿ ಕತೆ ಹೇಳುತ್ತಾರೆ. ಕೆಲವರು ಚೆನ್ನಾಗಿ ಹಾಡುತ್ತಾರೆ, ಕೆಲವರು ಆಟಗಳಲ್ಲಿ ನಿಪುಣರು, ಕೆಲವರು ಚೆನ್ನಾಗಿ ಅಭಿನಯಿಸುತ್ತಾರೆ. – ಹೀಗೆ ಪ್ರತಿ ಮಗುವಿನಲ್ಲೂ ಏನಾದರೂ ವಿಶೇಷತೆ ಇರುತ್ತದೆ. ಅದನ್ನು ಗಮನಿಸಿ ಮೆಚ್ಚಿ ಪ್ರೋತ್ಸಾಹಿಸಿದರೆ ಮಕ್ಕಳಿಗೆ ಶಿಕ್ಷಕರ ಬಗ್ಗೆ ಪ್ರೀತಿ ಬೆಳೆಯುತ್ತದೆ. ಶಾಲೆಗೆ ಬರಲು ಉತ್ಸಾಹ ಹೆಚ್ಚುತ್ತದೆ. ಮೊದಲ ನಾಲ್ಕು ತಿಂಗಳು ಈ ಬಗೆಯ ಸಿದ್ಧತೆ ಪ್ರಾಥಮಿಕ ಪೂರ್ವ ಶಿಕ್ಷಣಕ್ಕೆ ದೊರಕಿದರೆ ಮಕ್ಕಳಿಗೆ ಶಾಲೆ ಅಭ್ಯಾಸವಾಗುತ್ತದೆ.

ಸಾಮೂಹಿಕ ಪ್ರಾರ್ಥನೆಯಿಂದ ಮಕ್ಕಳ ದಿನಚರಿ ಪ್ರಾರಂಭವಾಗಬೇಕು. ಪರಿಸರಕ್ಕೆ ತಕ್ಕಂತೆ ಪದ್ಯಗಳನ್ನು ಬಳಸಬೇಕು. ಮಕ್ಕಳು ಅನುಕರಣೆ ಮಾಡಲು ಸುಲಭ ವಾಗುವ ಪದ್ಯ ಆಗಬೇಕು. ಉದಾಹರಣೆಗೆ, ಸರಸ್ವತಿ ನಮಸ್ತುಭ್ಯಂ...

ಇದೇ ಮಾಡಬೇಕೆಂದೇನೂ ಇಲ್ಲ. ಉರ್ದು ಶಾಲೆ ಗಳಲ್ಲಿ ಇದನ್ನು ಹೇಳಿಕೊಡಲಿಕ್ಕೆ ಇಷ್ಟಪಡದೆ ಇರಬಹುದು. ಅವರು ಅವರದೇ ಆದ ಪ್ರಾರ್ಥನೆಗಳನ್ನು ಹೇಳಿಕೊಡ ಬೇಕು. ಮಕ್ಕಳು ದಿನವೂ ಏನಾದರೂ ಕಲಿಯುತ್ತಿದ್ದರೆ ಶಾಲೆಗೆ ಬರುವ ಉತ್ಸಾಹ ಹೆಚ್ಚುತ್ತದೆ. ಕಲಿಯುತ್ತಿರುವ ಮಕ್ಕಳನ್ನು ಕಂಡರೆ ತಂದೆ ತಾಯಿಗಳಿಗೆ ಸಂತೋಷ. ಅವರು ಶ್ರದ್ಧೆವಹಿಸಿ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಚೆನ್ನಾಗಿ ಕಲಿಯುತ್ತಿರುವ ಮಗು ಶಾಲೆಯಿಂದ ಕಳಚಿಕೊಳ್ಳುವುದಿಲ್ಲ.

**ಹೊ** : ವಿಜ್ಞಾನ ವಿಷಯದಲ್ಲಿ ಆಸಕ್ತಿ, ಪ್ರೀತಿ ಮೂಡಿಸುವುದು ಹೇಗೆ? ವಿಜ್ಞಾನವನ್ನು ಸುಲಭವಾಗಿ ತಿಳಿಯುವಂತೆ ಮಾಡಲು ಕ್ರಮಗಳೇನಾದರೂ ಇವೆಯೇ?

**ಕೆ.ವಿ.ಆರ್.** : ಒಂದು ಪಾತ್ರೆಯಲ್ಲಿ ನೀರು ತೆಗೆದು ಕೊಳ್ಳಿ. ಅದರಲ್ಲಿ ಕೆಲವು ವಸ್ತುಗಳು ಮುಳುಗುತ್ತವೆ, ಕೆಲವು ತೇಲುತ್ತವೆ, ಕೆಲವು ಕರಗುತ್ತವೆ, ಕೆಲವು ಕರಗುವುದಿಲ್ಲ ಮುಂತಾದ ಪ್ರಯೋಗ ಮಾಡಿ ಮಕ್ಕಳಲ್ಲಿ ಕುತೂಹಲ ಕೆರಳಿಸಿ ಅವರ ಕಲಿಕೆಯ ಮಟ್ಟವನ್ನು ಹೆಚ್ಚಿಸಬೇಕು.

ಸೂರ್ಯ ಹುಟ್ಟುವ ದಿಕ್ಕು ಪೂರ್ವ, ಮುಳುಗುವ ದಿಕ್ಕು ಪಶ್ಚಿಮ ಎಂದು ದಿಕ್ಕುಗಳನ್ನು ಪರಿಚಯ ಮಾಡಿಸ ಬೇಕು. ನಾವು ಬೆಳಿಗ್ಗೆ ಸೂರ್ಯನಿಗೆ ಎದುರಾಗಿ ನಿಂತರೆ ನಮ್ಮ ಬಲಕ್ಕೆ ಇರುವ ದಿಕ್ಕು ದಕ್ಷಿಣ, ಎಡಕ್ಕೆ ಇರುವುದು ಉತ್ತರ. ಹೀಗೆಯೇ ಎಡ, ಬಲ, ಮುಂದೆ, ಹಿಂದೆ, ಮೇಲೆ, ಕೆಳಗೆ, ಒಳಗೆ, ಹೊರಗೆ ಮುಂತಾದ ಕಲ್ಪನೆಗಳನ್ನು ನೇರ ಅನುಭವಗಳ ಮೂಲಕ ಮೂಡಿಸಬೇಕು.

ಗಿಡ-ಮರಗಳು, ಪ್ರಾಣಿಗಳು, ನೀರು, ಗಾಳಿ, ಮಣ್ಣು, ಬೆಳಕು, ಶಾಖ, ಸರಳ ಯಂತ್ರಗಳು, ಸರಳ ರಾಸಾಯನಿಕಗಳು, ಅಳತೆಗಳು, ವಿಜ್ಞಾನಿಗಳು – ಹೀಗೆ ವಿಷಯಗಳನ್ನು ಗುರುತಿಸುವುದು. ಒಂದೊಂದು ವಿಷಯ ಕುರಿತು ಅನೇಕ ಚಟುವಟಿಕೆಗಳನ್ನು ಮಾಡಿ ತೋರಿಸುವುದು, ಮಾಡಿಸುವುದರ ಮೂಲಕ ವೈಜ್ಞಾನಿಕ ಮನೋಭಾವವನ್ನು ಬೆಳೆಸಬಹುದು.

ಉದಾಹರಣೆಗೆ, ಉರಿಯುತ್ತಿರುವ ಕಟ್ಟಿಗೆಯ ಮೇಲೆ ನೀರು ಸುರಿದರೆ ಬೆಂಕಿ ಆರಿಹೋಗುತ್ತದೆ. ಹೇಗೆ ? ಬೆಂಕಿ ಎಲ್ಲಿ ಹೋಯಿತು ? ಉರಿಯುತ್ತಿರುವ ಮೋಂಬತ್ತಿಯ ಮೇಲೆ ಗಾಜಿನ ಲೋಟವನ್ನು ಕವುಚಿದಾಗ ಏನಾಗುತ್ತದೆ ? ಕಬ್ಬಿಣದ ತುಂಡನ್ನು ಎರಡು ದಿನ ಗಾಳಿಗೆ ತೆರೆದಿರಿಸಿದರೆ ಏನಾಗುತ್ತದೆ ? ಬೇರೆ ಬೇರೆ ದಿನದ ಹವಾಮಾನವನ್ನು ಗಮನಿಸುವುದು, ಆ ಬದಲಾವಣೆಗಳು ಹೇಗೆ ಆಗುತ್ತವೆ ಅಂತ ತಿಳಿಯುವುದು; ಎರೆಹುಳುವಿನಂತಹ ಪ್ರಾಣಿಗಳು ಮಣ್ಣಿನೊಳಗೆ ಹೇಗೆ ಜೀವಿಸುತ್ತವೆ? ಇಸ್ತ್ರಿ ಪೆಟ್ಟಿಗೆಯ ಹಿಡಿ ಪ್ಲಾಸ್ಟಿಕ್ ಇಲ್ಲವೆ ಮರದಿಂದ ತಯಾರಾಗಿರುತ್ತದೆ.

ಯಾಕೆ ? ಕೊಳಲು, ತುತ್ತೂರಿಗಳಿಂದ ನಾದ ಹೇಗೆ ಮೂಡುತ್ತೆ? ವಿವಿಧ ವಾಹನಗಳ ಚಕ್ರಗಳನ್ನು ಗಮನಿಸುವುದು, ಟೈರಿನ ಗಾಳಿ ತೆಗೆದಾಗ ಏನಾಗುತ್ತದೆ ಗಮನಿಸುವುದು; ಮೆಟ್ಟಿಲುಗಳನ್ನು ಹೇಗೆ ನಿರ್ಮಿಸಿರುತ್ತಾರೆ ? ಬಾವಿಯಲ್ಲಿ ನೀರು ಸೇದುವ ಗಾಲಿ ಹೇಗೆ ಕೆಲಸ ಮಾಡುತ್ತೆ ? ಒಂದು ಚಮಚ ಉಪ್ಪು ಇಲ್ಲವೇ ಒಂದು ಚಮಚ ಸಕ್ಕರೆಯನ್ನು ಮರಳಿನೊಂದಿಗೆ ಬೆರೆಸುವುದು. ಇದನ್ನು ಪುನಃ ಬೇರ್ಪಡಿಸುವುದು ಹೇಗೆ ? ಏಣಿಯನ್ನು ಗೋಡೆಗೆ ವಾಲಿಸಿ ಇಟ್ಟಾಗ ಹತ್ತುವುದು ಸುಲಭವೋ, ನೇರ ನಿಲ್ಲಿಸಿದಾಗ ಹತ್ತುವುದು ಸುಲಭವೋ ? ಯಾಕೆ ? ಬೀಗ ಮತ್ತು ಬೀಗದಕ್ಕೆ ಹೇಗೆ ಕೆಲಸ ಮಾಡುತ್ತವೆ ? ಬೇರೆ ಬೇರೆ ಗಿಡಗಳ ಎಲೆಗಳಲ್ಲಿನ ಹೋಲಿಕೆ, ವ್ಯತ್ಯಾಸಗಳು, ಅಂತೆಯೇ ಹೂವು, ಹಣ್ಣು, ಬೀಜಗಳಲ್ಲಿನ ಹೋಲಿಕೆಗಳು, ವ್ಯತ್ಯಾಸಗಳು; ನಿಂಬೆಹಣ್ಣಿನ ಹುಳಿ, ಹುಣಸೆ ಹಣ್ಣಿನ ಹುಳಿ, ನೆಲ್ಲಿಕಾಯಿಯ ಹುಳಿ, ಮಜ್ಜಿಗೆಯ ಹುಳಿಯಲ್ಲಿ ರುಚಿಯ ವ್ಯತ್ಯಾಸ ಇದೆ, ಹೇಗೆ ? ಹಾಲು ಮೊಸರಾಗುವುದು ಹೇಗೆ ?

ವಿಜ್ಞಾನದ ವಿಷಯದಲ್ಲಿ ಚಟುವಟಿಕೆಗಳು, ಕಿರಿಯ ಪ್ರಾಥಮಿಕ ಹಂತದಲ್ಲಿ ಗಣಿತ ಬೋಧನೆ, ಮಕ್ಕಳಿಗೆ ಕನ್ನಡ ಭಾಷೆಯನ್ನು ಕಲಿಸುವುದು ಹೇಗೆಂದು ಶಿಕ್ಷಕರಿಗೆ, ಪೋಷಕರಿಗೆ ಕೈಪಿಡಿ ತಯಾರಿಸಿದ್ದೀನಿ. ನಮ್ಮ ಶಾಲೆಯಲ್ಲಿ ಪ್ರಯೋಗ ಮಾಡಿ ಕ್ರಮಬದ್ಧವಾದ ಕಿರು ಹೊತ್ತಗೆಗಳನ್ನ ಮಾಡಿಸಿದ್ದೀನಿ. ಆಸಕ್ತಿವಹಿಸಿ ಬಂದು ತಗೊಂಡು ಹೋಗಿ ಉಪಯೋಗಿಸಿಕೊಳ್ಳುವವರು ಇಲ್ಲ.

**ಹೊ** : ಮಕ್ಕಳಲ್ಲಿ ಕರುಣೆ, ಸಹನೆ, ಸತ್ಯ ನಿಷ್ಠತೆಯಂತಹ ಮಾನವೀಯ ಗುಣಗಳನ್ನು ಬೆಳೆಸುವುದು ಹೇಗೆ ?

**ಕೆ.ವಿ.ಆರ್.** : ಮಕ್ಕಳಿಗೆ ದಿನವೂ ಕಥೆಗಳನ್ನು ಹೇಳಬೇಕು. ಎಂತಹ ಕಥೆಗಳನ್ನು ಆರಿಸಿಕೊಬೇಕು ಎಂಬುದು ಮುಖ್ಯ. ಉದಾಹರಣೆಗೆ, ಗಣಪತಿಯದೊಂದು ಕಥೆ ಇದೆ. ಗಣಪತಿ ಎಳೆಯವನಿದ್ದಾಗ ಮನೆ ಮುಂದೆ ಕೂತ್ಕೊಂಡು ಬೆಕ್ಕಿನ ಜೊತೆ ಆಟವಾಡ್ತಾ ಇದ್ದ. ಆ ಬೆಕ್ಕು ಏನೊ ಚೇಷ್ಟೆ ಮಾಡ್ತು. ಇವನು ಅದನ್ನ ಹಿಡ್ಕೊಂಡು ಅದರ ಮೈಯೆಲ್ಲ ಪರಚಿಬಿಟ್ಟ. ಬೆಕ್ಕು ಕಿರುಚಿಕೊಂಡು ಓಡ್ಹೋಯ್ತು. ಸರಿ ಗಣಪತಿ ನಿಧಾನವಾಗಿ ಎದ್ದು ಮನೆ ಒಳಕ್ಕೆ ಹೋದ. ತಾಯಿ ಹತ್ತಿರಕ್ಕೆ ಹೋದ. ಪಾರ್ವತಿ ಮುಖದ ಮೇಲೆಲ್ಲ ಪರಚಿದ ಗಾಯಗಳಿದ್ದವು. ರಕ್ತ ಬರ್ತಾ ಇತ್ತು. ''ಏನಿದು! ಮುಖ ಎಲ್ಲ ರಕ್ತ ಆಗಿದೆಯಲ್ಲ ಯಾಕೆ ?!'' ಅಂದ. ''ನೀನೇ ಮಾಡಿದಿಯಲ್ಲಪ್ಪ ಈಗ'' ಅಂದಳು ಪಾರ್ವತಿ. ''ನಾನೆಲ್ಲಿ ಮಾಡ್ದೆ ? ಈಗ ತಾನೆ ಒಳಕ್ಕೆ ಬರ್ತಾ ಇದ್ದೀನಿ !''

''ಬೆಕ್ಕಿನ ಒಳಗೂ ನಾನೇ ಇರೋದು. ಯಾರಿಗೆ ಹಿಂಸೆ ಮಾಡಿದ್ರೂ ಅದು ನನಗೇ ಹಿಂಸೆ''

ಈ ರೀತಿಯ ಕಥೆಗಳನ್ನ ಎಳೆಯರಿಗೆ ಹೇಳುತ್ತಾ ಬರಬೇಕು. ಪ್ರಹ್ಲಾದನ ಕಥೆ, ವಾಮನನ ಕಥೆ... ನಮ್ಮ ಋಷಿಗಳು ಹೀಗೆ ಕಥೆಗಳು, ಅನುಭವಗಳ ಮೂಲಕ ತತ್ತ್ವಗಳನ್ನು ಹೇಳೋರು.

**ಹೊ** : ಸರ್ಕಾರದ ಗಮನಕ್ಕೆ ನಿಮ್ಮ ಪ್ರಯೋಗಗಳು, ಸಂಶೋಧನೆಗಳು ಬಂದಿವೆಯೇ ? ಅವುಗಳ ಉಪಯೋಗ ಮಾಡಿಕೊಳ್ಳುತ್ತಿದ್ದಾರಾ ?

**ಕೆ.ವಿ.ಆರ್.** : ಅಯ್ಯೋ ಬರಿಯ ತತ್ತ್ವ ಹೇಳ್ತಾರೆ. ಸಂಶೋಧನೆ ಮಾಡಿ, ಪ್ರಯೋಗಗಳನ್ನ ಮಾಡಿ ಹೊತ್ತಗೆಗಳಾಗಿ ವಿಂಗಡಿಸಿ ಈ ಕ್ರಮ ಅನುಸರಿಸಿದರೆ ಮಕ್ಕಳು ಸುಲಭವಾಗಿ ಕಲಿಯುತ್ತವೆ, ಖುಷಿಯಿಂದ ಕಲಿಯುತ್ತವೆ ಅಂತ ನಮ್ಮ ಶಾಲೆಯಲ್ಲಿ ಪ್ರಯೋಗಿಸಿ ನೋಡಿದ್ದೀವಿ. ನೀವೂ ಉಪಯೋಗಿಸಿಕೊಳ್ಳಿ, ಹಣ ಬೇಡ, ಲಾಭ ಬೇಡ, ಇದನ್ನ ಬಳಸಿ ಒಳ್ಳೆಯ ಪ್ರಾಥಮಿಕ ಶಿಕ್ಷಣ ಜಾರಿಗೆ ತನ್ನಿ ಅಂತ ಅವರಲ್ಲಿಗೆ ಕೊಟ್ಟು ಕಳುಹಿಸಿದ್ರೂ ಇಲ್ಲ. ಈ ಎಲ್ಲ ಚಾರ್ಟ್ಸ್, ಹೊತ್ತಗೆಗಳನ್ನ ಅವರಿಗೆ ಒಂದು ಪ್ರತಿ ಕಳಿಸಿದ್ದೆ. ಉಪಯೋಗಿಸಿಕೊಳ್ಳೋಕೆ ಸಾಯ್ತಾರೆ. ಎಲ್ಲ ದೊಡ್ಡ ಪ್ರೊಫೆಸರ್ರು, ಡಾಕ್ಟರ್ರು, ಪ್ರಾಥಮಿಕ ಮಕ್ಕಳಿಗೆ ಪಾಠ ಹೇಳಿದ್ದಾರೆಯೆ ಇವರು ? ಬರೆ ಭಾಷಣ ಮಾಡ್ತಾರೆ. ವಿಷ ಕಾರ್ತಾರೆ. ನಿಜವಾದ ಕನ್ನಡಾಭಿಮಾನ ಇಲ್ಲ.

ನಮ್ಮಲ್ಲಿ ಬರೇ ಥಿಯರಿಗಳಿವೆ. ತರಗತಿಗಳಲ್ಲಿ ಅನುಷ್ಠಾನಕ್ಕೆ ಬರ್ತಾ ಇಲ್ಲ. ಶಿಕ್ಷಕರು ಇವನ್ನು ಕಾರ್ಯರೂಪಕ್ಕೆ ತರಬೇಕು. ಇಲ್ಲಿ ಆಗ್ತಾ ಇರೋದು ಬರಿ ಬಾಯಿಪಾಠ ಅಷ್ಟೆ.



ಈಗಿನ ಶಿಕ್ಷಣದಲ್ಲಿ ಅಕ್ಷರಾನೇ ಸರಿಯಾಗಿ ಕಲಿಸ್ತಾ ಇಲ್ಲ. ಮುಂದು ಮುಂದಿನ ತರಗತಿಗಳಿಗೆ ಹೋಗ್ತಾರೆ. ಒಂದನೇ ತರಗತಿ, ಎರಡನೇ ತರಗತಿ... ಹಣೆಪಟ್ಟಿ ಬದಲಾಗ್ತಾ ಹೋಗುತ್ತೆ ಅಷ್ಟೆ. ಇವರು ಸುಮ್ಮನೆ ಸ್ಟ್ಯಾಟಿಸ್ಟಿಕ್ಸ್ ಎಲ್ಲ ಕೊಟ್ಟು ಅವರಿಗೆ ಅವರೇ ಮೋಸ ಮಾಡಿಕೊತಾರೆ. ಹ್ಯಾನ್ಸ್ ಆ್ಯಂಡರ್‌ಸನ್‌ನ ಕಥೆ ಇದೆ ನೋಡಿ 'ರಾಜನ ಹೊಸ ಬಟ್ಟೆ' ಅಂತ ಅಗೋ ಹಾಗೆ. ಎಲ್ಲ ಚೆನ್ನಾಗಿ ಆಗ್ತಾ ಇದೆ ಅಂತ ಹೇಳಿಕೊಳ್ಳೋದು. ಆಂಗ್ಲ ಮಾಧ್ಯಮ ಶಾಲೆಗಳನ್ನ ಅಲ್ಲಗಳೆಯೋದು, ಅವರ ಮೇಲೆ ವಿಷಕಾರೋದು – ಇಷ್ಟು ಮಾಡಿದ್ರೆ ಕನ್ನಡ ಅಭಿವೃದ್ಧಿ ಆಗ್ಬಿಡುತ್ತೆ ಅಂತ.

**ಹೊ** : ನಿಮ್ಮದೇ ಆದ ಶಾಲೆಯನ್ನು ನಡೆಸುತ್ತಿದ್ದೀರಿ. ಎರಡೂವರೆ-ಮೂರು ವರ್ಷದ ಎಳೆಯರಿಂದ ಹತ್ತನೇ ತರಗತಿಯವರೆಗೆ ಪಾಠ ಹೇಳುತ್ತೀರಿ. ಶಿಕ್ಷಕರಿಗೆ ಮತ್ತು ಪೋಷಕರಿಗೆ ತರಬೇತಿ ನೀಡುತ್ತಾ ಬಂದಿದ್ದೀರಿ. ತಮ್ಮದೇ ಶಾಲೆ ಆರಂಭಿಸಿ ನಡೆಸುತ್ತಿರುವುದು ಸಮಾಧಾನ ನೀಡಿದೆಯೆ ?

**ಕೆ.ವಿ.ಆರ್.** : ಶಾಲೆ ಆರಂಭಿಸಲು ಮುಖ್ಯ ಉದ್ದೇಶ ಪೂರ್ವ ಪ್ರಾಥಮಿಕ ಮತ್ತು ಕಿರಿಯ ಪ್ರಾಥಮಿಕ ಹಂತದಲ್ಲಿ ಮಕ್ಕಳ ಕಲಿಕೆಯನ್ನು ಹೆಚ್ಚಿಸುವ ಬೋಧನಾ ಕ್ರಮಗಳನ್ನು ಅನುಷ್ಠಾನಗೊಳಿಸುವುದು. ಪ್ರಪಂಚಾದ್ಯಂತ ಶಿಕ್ಷಣ ತಜ್ಞರು ಅನೇಕ ಸಂಶೋಧನೆಗಳನ್ನು ನಡೆಸಿ ಮಕ್ಕಳ ಬುದ್ಧಿಶಕ್ತಿಯನ್ನು ಉತ್ತಮಪಡಿಸುವ ಮತ್ತು ಕಲಿಕೆಯನ್ನು ಸಂತೋಷದಾಯಕವಾಗಿ ಮಾಡುವ ಹಲವಾರು ಕಲಿಕಾ ನಿಯಮಗಳನ್ನು ಕಂಡುಹಿಡಿದಿದ್ದಾರೆ. ನಮ್ಮ ಸಂಸ್ಕೃತಿಯಲ್ಲೂ ನಮ್ಮ ಋಷಿಗಳು ಅನೇಕ ಬೋಧನಾ ಕ್ರಮಗಳನ್ನು ರೂಪಿಸಿದ್ದಾರೆ. ಇವೆಲ್ಲವನ್ನೂ ಸಂಯೋಜಿಸಿದ ಬೋಧನಾ ಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದ್ದೇವೆ.

ನಮ್ಮ ಶಿಕ್ಷಕರು ಎನ್.ಸಿ.ಇ.ಆರ್.ಟಿ., ಡಿ.ಎಸ್.ಇ.ಆರ್.ಟಿ. ಮುಂತಾದ ಶೈಕ್ಷಣಿಕ ಸಂಸ್ಥೆಗಳು ಏರ್ಪಡಿಸುವ ಪ್ರಬಂಧ ಸ್ಪರ್ಧೆಗಳಿಗೆ ಪ್ರಬಂಧಗಳನ್ನು ಸಲ್ಲಿಸುತ್ತಾರೆ. ಇದುವರೆಗೆ ನಮ್ಮ ಶಾಲೆಗೆ ಎನ್.ಸಿ.ಇ.ಆರ್.ಟಿ. ಕೊಡುವ ರಾಷ್ಟ್ರ ಪ್ರಶಸ್ತಿಗಳು ೨೮ ದೊರೆತಿವೆ, ಡಿ.ಎಸ್.ಇ.ಆರ್.ಟಿ.ಕೊಡುವ ರಾಜ್ಯ ಪ್ರಶಸ್ತಿಗಳು ೫ ಬಂದಿವೆ ಹಾಗೂ ಕರ್ನಾಟಕ ರಾಜ್ಯದ ಶಿಕ್ಷಕರ ಕಲ್ಯಾಣ ನಿಧಿ ವತಿಯಿಂದ ಶೈಕ್ಷಣಿಕ ಸಂಶೋಧನೆಗಳಿಗೆ ಕೊಡುವ ರಾಜ್ಯ ಪ್ರಶಸ್ತಿಗಳು ೩ ಬಂದಿವೆ.

ಶಾಲೆಯ ವಿದ್ಯಾರ್ಥಿಗಳು ಪಬ್ಲಿಕ್ ಪರೀಕ್ಷೆಗಳಲ್ಲಿ ಶೇ. ೧೦೦ ಫಲಿತಾಂಶ ತರುತ್ತಿದ್ದಾರೆ. ವಿದೇಶಗಳಿಂದ ಕೆಲವು ಶಿಕ್ಷಣ ತಜ್ಞರು, ಸಂಶೋಧಕರು ಆಗಾಗ ಶಾಲೆಗೆ ಭೇಟಿ ನೀಡಿ ನಮ್ಮ ಶೈಕ್ಷಣಿಕ ಸಂಶೋಧನೆಗಳ ಬಗ್ಗೆ ಆಶ್ಚರ್ಯ, ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

**ಹೊ** : ಶಿಕ್ಷಕ ವೃತ್ತಿಯ ಆಯ್ಕೆ ನಿಮ್ಮ ಬಾಲ್ಯದ ಬಯಕೆ ಆಗಿತ್ತೆ ?

**ಕೆ.ವಿ.ಆರ್.** : ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನನಗೆ ಪುಸ್ತಕಗಳೆಂದರೆ ತುಂಬ ಪ್ರೀತಿ. ಹಾಗಾಗಿ ಟೀಚರ್ ಆಗುವುದು ನನಗಿಷ್ಟ ಇತ್ತು. ಆಗ ಮೈಸೂರು ರೈಲ್ವೇಸ್ ಅಂತ ಇತ್ತು. ನಮ್ಮ ತಂದೆ ಸ್ಟೇಷನ್ ಮಾಸ್ತರರಾಗಿದ್ರು. ರೈಲ್ವೇಸ್‌ನಲ್ಲಿ ಪ್ರೊಬೆಷನರಿ ಇನ್ಸ್‌ಪೆಕ್ಟರ್ ಹುದ್ದೆಗಳಿದ್ದವು. ನಾನು ಆಗ ತಾನೆ ಬಿ.ಎಸ್‌ಸಿ. ಮಾಡಿದ್ದೆ. ಒಬ್ಬರು ರಂಗಾಚಾರ್ ಅಂತ ಡಿಸ್ಟ್ರಿಕ್ಟ್ ಸೂಪರಿಂಟೆಂಡೆಂಟ್, ಅವರಿಗೆ ಪ್ರೊಬೆಷನರಿ ಇನ್ಸ್‌ಪೆಕ್ಟರ್‌ಗಳನ್ನು ಆಯ್ಕೆ ಮಾಡುವ ಅಧಿಕಾರ ಇತ್ತು. ನಮ್ಮ ತಂದೆ ಇಲ್ಲೇ ಹಿರೇಹಳ್ಳಿಯಲ್ಲಿ ಇದ್ರು. ಅವರು ನಮ್ಮ ತಂದೆಗೆ ಹೇಳಿಕಳುಹಿಸಿ ನನ್ನ ವಿದ್ಯಾಭ್ಯಾಸದ ಬಗ್ಗೆ ತಿಳಿದುಕೊಂಡರು. 'ಮೂರು ಪ್ರೊಬೆಷನರಿ ಹುದ್ದೆಗಳು ಖಾಲಿ ಇವೆ. ನನಗೆ ಒಬ್ಬರನ್ನು ಆಯ್ಕೆ ಮಾಡುವ ಅಧಿಕಾರ ಇದೆ. ಈ ಕ್ಷೇತ್ರದಲ್ಲೇ ಕೆಲಸ ಮಾಡುವವರ ಮಕ್ಕಳಿಗೆ ಮೊದಲ ಆದ್ಯತೆ ಇದೆ. ಅವನಿಗೆ ಅರ್ಜಿ ಕೊಡಲು ಹೇಳಿ. ನಾನು ಅವನನ್ನು ನೇಮಕಮಾಡ್ತೀನಿ' ಎಂದರಂತೆ. ತುಂಬ ಖುಷಿಯಾಗಿ ನಮ್ಮ ತಂದೆ ಬಂದು ನನಗೆ ಅರ್ಜಿ ಹಾಕಲು ಹೇಳಿದ್ರು. ನಾನು, 'ನಿಮ್ಮ ರೈಲ್ವೇಸ್‌ಗೆಲ್ಲ ಬರೊಲ್ಲ ನಾನು ಟೀಚರ್ ಆಗ್ತೀನಿ' ಎಂದೆ. ನಮ್ಮ ತಂದೆಗೆ ತುಂಬ ಕೋಪ ಬಂತು ಯದ್ವಾತದ್ವಾ ಬೈದ್ರು (ನಗು). ಏನ್ ಮಾಡಿದ್ರೂ ಜಗ್ಗಲಿಲ್ಲ ನಾನು. ನಮ್ಮ ತಾಯಿ ಉಪವಾಸ ವ್ರತ ಮಾಡಿದ್ರು, ನಾನು ಸೋಲಲಿಲ್ಲ. ಆಮೇಲೆ ಬಸವನಗುಡಿಯ ಆಚಾರ್ಯ ಪಾಠಶಾಲೆ ಸೇರಿದೆ. ನಮ್ಮ

ತಂದೆಗೆ ಕೋಪ ಇದ್ದೇ ಇತ್ತು. ಅವರು ನಿವೃತ್ತರಾದ ಮೇಲೆ ನಾನು ತುಮಕೂರಿನ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಕೆಲಸಕ್ಕೆ ಸೇರಿದೆ. ಬೈಯ್ತಾನೆ ಇರ್ತಿದ್ರು. ಸ್ವಾತಂತ್ರ್ಯ ಬಂದ ನಂತರ ದೇಶದ ಎಲ್ಲ ರೈಲ್ವೇಸ್ ಒಂದೇ ಆಡಳಿತಕ್ಕೆ ಬಂತು. ನಾನು ಸೇರಬೇಕಿದ್ದ ರೈಲ್ವೇಸ್ ಹುದ್ದೆಗೆ ಸೇರಿದ್ದವ ಇಡೀ ಸದ್ರನ್ ರೈಲ್ವೇಸ್‌ಗೆ ಕಮರ್ಷಿಯಲ್ ಸೂಪರಿಂಟೆಂಡೆಂಟ್ ಆಗಿ ದೊಡ್ಡ ಸಂಬಳ ತಗೊಳ್ಳುವವನಾದ. ಕೋಪ ನಮ್ಮ ತಂದೆಗೆ ಎಷ್ಟು ದಿನ ಇತ್ತು ಅಂದ್ರೆ ನಾನು ಎನ್.ಸಿ.ಇ.ಆರ್.ಟಿ. ಅವರಿಂದ ಮೊದಲ ನ್ಯಾಷನಲ್ ಪ್ರಶಸ್ತಿ ತಗೊಳ್ಳೊವರೆಗೂ ಇತ್ತು. ೧೯೭೨ರಲ್ಲಿ... ಆಗ ಅವರಿಗೆ ಸ್ವಲ್ಪ ಸಮಾಧಾನ ಆಯ್ತು.

ಖಾಸಗಿ ಶಾಲೆ ಸೇರಿದ್ದೂ ಒಂದು ಕಾರಣ. ನನಗೆ ವರ್ಗಾವಣೆಗಳು ಬೇಡವಾಗಿತ್ತು. ಒಂದು ಪ್ರಶಾಂತವಾದ ಕಡೆ ನೆಲೆಯೂರಲು ಇಷ್ಟ ಇತ್ತು. ಅದಕ್ಕೆ ಖಾಸಗಿ ಶಾಲೆ ಆಯ್ಕೆ ಮಾಡಿಕೊಂಡೆ.

**ಹೊ** : ನಿಮ್ಮ ಕಾಲದ ಶಿಕ್ಷಣ ಹೇಗಿತ್ತು? ನಿಮ್ಮ ಮೇಲೆ ಪ್ರಭಾವ ಬೀರಿದ ಮಾಸ್ತರರ ಬಗ್ಗೆ ಹೇಳಿ.

**ಕೆ.ವಿ.ಆರ್.** : ಬಿಡದಿ ಅಂತ ಒಂದು ಊರು, ಬೆಂಗಳೂರು-ಮೈಸೂರು ರಸ್ತೆಯಲ್ಲಿ. ಅಲ್ಲಿ ನಮ್ಮ ತಂದೆ ಸ್ಟೇಷನ್ ಮಾಸ್ತರರಾಗಿದ್ರು. ಆ ಬಿಡದಿ ಮಾಧ್ಯಮಿಕ ಶಾಲೆಯಲ್ಲಿ ಸ್ವಲ್ಪ ಕಾಲ ಓದಿದೆ ನಾನು. ಅಲ್ಲಿಗೆ ಕೆ. ಆರ್. ಲಿಂಗಪ್ಪನವರು ಹೆಡ್‌ಮಾಸ್ತರರಾಗಿ ಬಂದ್ರು. ಆಗ ೧೯೩೩-೩೪ರಲ್ಲಿ ಬಿಡದಿ ಚಿಕ್ಕ ಪೇಟೆ. ಏಳನೇ ತರಗತಿಯಲ್ಲಿ ನಾವು ೧೫ ಜನ ವಿದ್ಯಾರ್ಥಿಗಳಿದ್ದೆವು. ಲಿಂಗಪ್ಪನವರು ನನ್ನನ್ನ ಅವರ ಮನೆಗೆ ಕರೀತಿದ್ರು. ಹಿಂದು ಪತ್ರಿಕೆಯ ಸಂಪಾದಕೀಯ ಓದಿಸ್ತಿದ್ರು. ಅವರು ಪ್ರೋತ್ಸಾಹಿಸಿದರು. ನನಗೆ ಓದುವ ಹವ್ಯಾಸ ಬೆಳೆಸಿದ್ರು.

ಹೈಸ್ಕೂಲಿನಲ್ಲಿ, ಕಾಲೇಜಿನಲ್ಲಿ ಅನೇಕ ಒಳ್ಳೆಯ ಗುರುಗಳಿದ್ರು. ಬಿ.ಎಂ.ಶ್ರೀಕಂಠಯ್ಯನವರು, ತೀ.ನಂ.ಶ್ರೀ., ಜಿ. ಪಿ. ರಾಜರತ್ನಂ, ವೆಂಕಟರಾಮಪ್ಪನವರು, ಎ. ಸೀತಾರಾಮಯ್ಯ, ಎಸ್. ವಿ. ರಂಗಣ್ಣ – ಇವರೆಲ್ಲ ನಮಗೆ ಪಾಠ ಹೇಳ್ತಿದ್ರು. ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರುವವರಾಗಿದ್ದರು. ಒಳ್ಳೆಯ ವಿಜ್ಞಾನ ಶಿಕ್ಷಕರಿದ್ದರು. ಸೆಂಟ್ರಲ್ ಕಾಲೇಜಿನ ಹಾಸ್ಟೆಲಿನಲ್ಲಿ ನಮ್ಮದೊಂದು ಸ್ಟಡಿ ಸರ್ಕಲ್ ಇತ್ತು. ಪ್ರತಿ ಶನಿವಾರ ಲಾಲ್‌ಬಾಗ್, ಕಬ್ಬನ್ ಪಾರ್ಕ್‌ನಲ್ಲಿ ಭೆಟ್ಟಿಯಾಗ್ತಾ ಇದ್ವಿ. ಯಾವುದಾದರೂ ವಿಷಯ ಎತ್ತಿಕೊಂಡು ಎರಡು ಮೂರು ತಾಸು ಚರ್ಚಿಸುತ್ತಾ ಇದ್ವಿ. ಎಲ್ಲ ಬುದ್ಧಿವಂತ ವಿದ್ಯಾರ್ಥಿಗಳು. ಆ ಚರ್ಚೆಗಳು ಬಹುಶಃ ನನಗೆ ಅನೇಕ ಹೊಳಹುಗಳನ್ನು ನೀಡಿತು. ಕಾಲೇಜಿನಲ್ಲಿ ಪಡೆದದಕ್ಕಿಂತಲೂ ಹೆಚ್ಚಿನದು ಎನ್ನಬೇಕು. ಆ ಸ್ಟಡಿ ಸರ್ಕಲ್ ನನಗೆ ಸಹಾಯವಾಯಿತು.

ಸೆಂಟ್ರಲ್ ಕಾಲೇಜಿನಲ್ಲಿ ತಿಂಗಳಿಗೊಂದರಂತೆ ಸಿ. ವಿ. ರಾಮನ್ ಅವರ ಉಪನ್ಯಾಸಗಳಿರುತ್ತಿತ್ತು. ಅವರ ೨೫ಕ್ಕೂ ಹೆಚ್ಚು ಉಪನ್ಯಾಸಗಳನ್ನು ಕೇಳಲು ಅಲ್ಲಿ ಅವಕಾಶ ಸಿಕ್ಕಿತ್ತು. ಅವರು ತುಂಬ ಗಹನವಾದ ವಿಷಯಗಳನ್ನು ಎತ್ತಿಕೊಂಡು ಬಹಳ ಸುಲಭವಾಗಿ ವಿವರಿಸ್ತಿದ್ರು. ಅವರ ವಿವರಣೆಗಳೇ ನಮ್ಮನ್ನು ಉದ್ದೀಪಿಸುತ್ತಿದ್ದವು. ಹಾಗೇ ಜಿ. ಸಿ. ಘೋಷ್, ಬೀರ್ಬಲ್ ಸಾಹನಿ, ಆಮೇಲೆ ಹೊರ ದೇಶಗಳಿಂದ ನೊಬೆಲ್ ಪುರಸ್ಕೃತರು ಇಂಡಿಯನ್ ಇನ್‌ಸ್ಟಿಟ್ಯೂಟ್‌ಗೆ ಬರ್ತಾ ಇದ್ರು. ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದರು. ಅವರು ಇವರನ್ನೆಲ್ಲ ಕರೆತಂದು ಉಪನ್ಯಾಸ ಏರ್ಪಡಿಸುತ್ತಿದ್ದರು. ಅತ್ಯಂತ ಉತ್ತಮ ವಾತಾರವಣ ಇತ್ತು.

ಈಗ ಹಲವಾರು ಕಾಲೇಜುಗಳಿವೆ. ಆಗಿದ್ದ ವಾತಾರವಣ ಇಲ್ಲ. ಅಂತಹ ಒಬ್ಬಿಬ್ಬರು ಟೀಚರ್ಸ್ ಇದ್ದರೆ ನಿಮ್ಮ ಪುಣ್ಯ.

**ಹೊ** : ಶಿಕ್ಷಣ ಸಂಸ್ಥೆಯನ್ನು ಅಭಿವೃದ್ಧಿಪಡಿಸಲು ಎಂತಹ ಶಿಕ್ಷಕರ ಅಗತ್ಯವಿದೆ ?

**ಕೆ.ವಿ.ಆರ್.** : Aptitude, Attitude ಎರಡೂ ಇರುವವರು ಬೇಕು. ಋಷಿಗಳಂತೆ ಇರಬೇಕು ಅವರು. ಮಕ್ಕಳ ಬಗ್ಗೆ ವಾತ್ಸಲ್ಯ, ವಿದ್ಯಾರ್ಜನೆಯಲ್ಲಿ ಅಷ್ಟು ಆಸಕ್ತಿ ಇರುವವರು ಆಗಬೇಕು. ಅದೆಲ್ಲಿ ಸಾಧ್ಯ ಇದೆ ಈಗ ? ಡೊನೇಷನ್, ರಿಸರ್ವೇಷನ್‌ಗಳ ಕಾಲ ಇದು. ಹೆಚ್ಚು ಸಂಬಳ ಕೊಡುವ ಐ.ಟಿ. ಕ್ಷೇತ್ರಗಳನ್ನು ಆರಿಸಿಕೊಳ್ತಾರೆ. ದುಡ್ಡಿನ ಮೋಹ ಇಲ್ಲದವರು, ಕಲಿಯುವುದು, ಕಲಿಸುವುದೇ ಧ್ಯೇಯ ಆಗಿರೋರು ಬರಬೇಕು. ಅಂಥವರು ಎಷ್ಟು ಜನ ಸಿಗ್ತಾರೆ ಈಗ ?

**ಹೊ** : ಶಿಕ್ಷಣ ಕ್ಷೇತ್ರದಲ್ಲಿ ಪತ್ರಿಕೆಗಳ ಪಾತ್ರ ಏನು ?

**ಕೆ.ವಿ.ಆರ್.** : ಪತ್ರಿಕೆಗಳು ಒಳ್ಳೊಳ್ಳೆಯ ಕೆಲಸ ಎಲ್ಲೆಲ್ಲಿ ಆಗ್ತಾ ಇದೆ ಅಂತ ಗುರುತಿಸಿ ಪ್ರಚಾರ ಮಾಡುವುದು, ಅಷ್ಟೇ ಮಾಡೋಕಾಗೋದು. ನಿಮ್ಮಂತೆಯೇ ಅನೇಕರು ಬಂದ್ರು, ಟೈಮ್ಸ್ ಪತ್ರಿಕೆಯವರೂ ಬಂದ್ರು... ಇಲ್ಲಿಯ ಪ್ರಯೋಗಗಳನ್ನ ಗಮನಿಸಿದ್ರು, ಶಾಲೆ ನೋಡಿದ್ರು, ಸಂದರ್ಶನ ಮಾಡಿದ್ರು, ಲೇಖನ ಪ್ರಕಟಿಸಿದ್ರು. ಲೇಖನ ಓದಿ ಎಷ್ಟು ಜನ ಉಪಯೋಗ ಮಾಡಿಕೊಂಡ್ರೊ... ? ನಮ್ಮಲ್ಲಿ ಈ ರೀತಿಯ ಕಲಿಕೆಯ ಕಿರುಹೊತ್ತಗೆಗಳು ಇವೆ, ಆಸಕ್ತ ಶಿಕ್ಷಕರು, ಪೋಷಕರೂ ನಮ್ಮ ತರಬೇತಿ ಶಿಬಿರಗಳ ಉಪಯೋಗ ಪಡಕೊಬಹುದು ಅಂತ ಪ್ರಕಟಿಸಿದ್ರು. ಯಾರಿಂದಲೂ ಏನೂ ಪ್ರತಿಕ್ರಿಯೆ ಬಂದಿಲ್ಲ.

**ಹೊ** : ಬಹಳಷ್ಟು ವಿಷಯಗಳನ್ನು ತಿಳಿಸಿದಿರಿ. ನಿಮಗೆ ನಮ್ಮ ಅನಂತ ಧನ್ಯವಾದಗಳು.

ಸಹನ
ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಶನ್
ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮






ತಾರೀಖು ೧೩.೧.೨೦೦೮ರ ಭಾನುವಾರ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಶ್ರೀ ಸಿ. ಆರ್. ಕೃಷ್ಣರಾವ್ ಅವರ 'ನೊಬೆಲ್ ಪುರಸ್ಕೃತರು' ಮತ್ತು ಶ್ರೀ ಟಿ. ಆರ್. ಅನಂತರಾಮು ಅವರ 'ಪಶ್ಚಿಮ ಮುಖಿ' ಈ ಎರಡು ಕೃತಿಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಡಾ|| ಸಿ.ಆರ್. ಚಂದ್ರಶೇಖರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಲೇಖಕಿ ನೇಮಿಚಂದ್ರ ಪುಸ್ತಕ ಅನಾವರಣಗೊಳಿಸಿದರು. ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಉಪಸ್ಥಿತರಿದ್ದರು ಹಾಗೂ ಹೆಚ್ಚಿನ ಸಂಖ್ಯೆಯ ಪುಸ್ತಕಾಸಕ್ತರು ಭಾಗವಹಿಸಿದ್ದರು.

ಇನ್ನೂರ ಐದನೇ ಕೋಣೆ. ಹೌದು. ಇದೇ. ಮುಂದುಗಡೆ ಕಾಲಿಂಗ್ ಬೆಲ್ ಇಲ್ಲ. ಬಾಗಿಲು ಮುಂದೆ ಮಾಡಿದ್ದು ಮಾತ್ರ. ಆದರೂ ತಿಳಿಸದೆ ಒಳಗೆ ಪ್ರವೇಶಿಸು ವುದು ಸರಿಯಲ್ಲ, ತುಸುಹೊತ್ತು ಅನುಮಾನಿಸುತ್ತ ನಿಂತು ಕೊಂಡಳು ಸುಮತಿ. ಬಳಿಕ ಮೆಲ್ಲಗೆ ಬಾಗಿಲು ಬಡಿದಳು.

ಒಳಗಡೆ ಕಾಲಸಪ್ಪಳ. ಬಾಗಿಲು ತೆರೆಯಿತು. ತೆರೆದವಳು ಇಂದುಮತಿಯೇ. ಇಬ್ಬರೂ ತುಸುಹೊತ್ತು ಮೌನವಾಗಿ ನಿಂತುಕೊಂಡರು. ಬಳಿಕ ಪರಸ್ಪರ ಹೆಸರು ಕರೆಯುತ್ತಾ ಅಪ್ಪಿಕೊಂಡರು. ನಾಲ್ಕು ಕಣ್ಣುಗಳಲ್ಲೂ ತುಸು ತೇವವೂಸರಿತ್ತು. ಅದನ್ನು ಮರೆಮಾಚಲು ಇಬ್ಬರೂ ಯತ್ನಿಸಿದರು.

''ನೀನು ನೇರವಾಗಿ ಒಳಗೇ ಬರಬಾರದಾಗಿತ್ತೇ ಸುಮತೀ ? ನಾನು ಅಂದುಕೊಂಡದ್ದು, ಬಂದದ್ದು ರೂಮ್‌ಬಾಯ್ ಇರ್ಬಹುದು ಅಂತ. ಒಂದು ಸಾಬೂನು ತರಲು ಹೇಳಿದ್ದೆ''

ತೊಟ್ಟುಕೊಂಡಿರುವ ನೈಟ್ ಗೌನ್‌ನಲ್ಲಿ, ಗಂಟು ಬಿಚ್ಚಿ, ಕೆದರಿಕೊಂಡಿರುವ ಹೆರಳಿನಲ್ಲಿ ಇಂದುಮತಿ ಇನ್ನಷ್ಟು ಸುಂದರಿಯಾಗಿರುವಂತೆ ಸುಮತಿಗನಿಸಿತು.

''ಅದು ಹೇಗೆ ? ನೀವು ಏನ್ಮಾಡ್ತಾ ಇದ್ದೀರೆಂದು ಕೊಂಡು ತಿಳಿಸದೆ ಒಳಗೆ ಬರುವುದು ?''

ಇಬ್ಬರೂ ಗೊಳ್ಳನೆ ನಕ್ಕರು. ಇಂದುಮತಿಯ ಮುಖದಲ್ಲಿ ಶೋಕಛಾಯೆ ಕವಿದದ್ದು ಗೆಳತಿ ಗಮನಿಸದೆ ಇರಲಿಲ್ಲ.

ಸುಮತಿ ಒಳಗೆ ಪ್ರವೇಶಿಸಿದವಳು ಕೋಣೆಯಿಡೀ ಒಮ್ಮೆ ಕಣ್ಣು ಹಾಯಿಸಿದಳು. ಒಂದು ಸೋಫಾ ಕಮ್ ಬೆಡ್, ಟೀಪಾಯ್ ಹಾಗೂ ಎರಡು ಕುರ್ಚಿಗಳೂ ಇರುವ ಚಿಕ್ಕ ಸ್ವಾಗತಕೋಣೆ. ಒಳಗಡೆ ಎರಡು ಹಾಸಿಗೆಗಳಿರುವ ಮಲಗುವ ಕೋಣೆ. ಪಕ್ಕದಲ್ಲಿ ಬಾತ್‌ರೂಮು...

''ಏನ್ ನಿನ್ನ ತಪಾಸಣೆ ? ಇದು ನನ್ನ ಮನೆಯಲ್ಲ; ಹೋಟೆಲು ಕೋಣೆ. ಯಾವುದಾದ್ರೂ ಕೊರತೆಯಿದ್ದರೆ ಇದರ ಮಾಲಕನಿಗೇ ಹೇಳ್ಬೇಕು.''

''ಓ, ಹೇಳಿದ್ದರಿಂದ ಒಳ್ಳೇದಾಯ್ತು. ಅಲ್ಲವಾದ್ರೆ ನಿನ್ನ ಮನೆಯೆಂದೇ ಗ್ರಹಿಸುತ್ತಿದ್ದೆ... ಅದಿರಲಿ, ಎಲ್ಲಿ ಶಶಿ ?''

ತನ್ನ ಕಣ್ಣುಗಳು ಹುಡುಕಾಡಿದ್ದು ಯಾರನ್ನು ಎಂದು ಇಂದುಮತಿ ಅರ್ಥಮಾಡಿಕೊಂಡ ಬಳಿಕವೂ ಹಾಗೆ ನೇರವಾಗಿ ಕೇಳಬೇಕಾಗಿ ಬಂದ ಬಗ್ಗೆ ಸುಮತಿಗೆ ತುಸು ನಾಚಿಕೆಯೆನಿಸದೆ ಇರಲಿಲ್ಲ.

''ಹೊರಗೆ ಹೋಗಿದ್ದಾರೆ.''

''ಬೇಗ ಬರ್ತಾರಾ ?''

''ಭಯ ಪಡಬೇಡ. ಧೈರ್ಯವಾಗಿರು. ನಾವು ಬೇಕಾದಷ್ಟು ಮಾತಾಡ್ಬಹುದು.''

''ಭಯವಾಗಬೇಕಾದದ್ದು ನಿನಗೆ ತಾನೇ; ನಾನು ಶಶಿ ಯನ್ನು ಎಲ್ಲಿಗಾದ್ರೂ ಹಾರಿಸಿಕೊಂಡು ಹೋದೇನೆಂದು !''

ಆಗಲೂ ಇಬ್ಬರೂ ಗೊಳ್ಳನೆ ನಕ್ಕರು. ಬಳಿಕ ವಿಷಾದ ಬೆರೆತ ದನಿಯಲ್ಲಿ ಇಂದುಮತಿ ಹೇಳಿದಳು : ''ನನ್ನ ಹಾಗೆ, ಅಲ್ಲವಾ ?''

''ಓ, ನಾನು ಅಷ್ಟೆಲ್ಲ ಉದ್ದೇಶಿಸಲಿಲ್ಲ.''

ಅಷ್ಟರಲ್ಲಿ ರೂಮ್‌ಬಾಯ್ ಬಂದು ಬಾಗಿಲು ಬಡಿದ. ಇಂದುಮತಿ ಬಾಗಿಲು ತೆರೆದು ಸಾಬೂನು ಇಸಿದು ಕೊಂಡಳು. ಸುಮತಿ, ಬೇಡವೆಂದು ಹೇಳಿದರೂ ಇಂದುಮತಿ ಇಬ್ಬರಿಗೂ ಚಹಾ ತರಲು ಹೇಳಿದಳು.

''ನಾನು ಇಲ್ಲಿರುವೆನೆಂದು ನಿನಗೆ ಗೊತ್ತಾದದ್ದು ಹೇಗೆ ?''

''ನನ್ನ ಗಂಡ ಹೇಳಿದ್ದು. ಅವರು ಒಬ್ಬ ಮಿತ್ರನನ್ನು ಕಾಣಲು ನಿನ್ನೆ ಇಲ್ಲಿ ಬಂದಿದ್ದರು. ಆಗ ನೀನು ಈ ಕೋಣೆಗೆ ಪ್ರವೇಶಿಸುವುದನ್ನು ಕಂಡಿದ್ದರು. ನೀನು ಶಶಿಯೊಂದಿಗೆ ಓಡಿಹೋದ ವಿಷಯ ನಿನ್ನ ಗಂಡ ನನ್ನ ಗಂಡನಿಗೆ ಬರೆದು ತಿಳಿಸಿದ್ದರು.''

''ನೀನು ಇಲ್ಲಿಗೆ ಬರುವ ವಿಚಾರ ನಿನ್ನ ಗಂಡನಿಗೆ ಗೊತ್ತಾ ?''

''ಅವರೇ ತರಾತುರಿಯಿಂದ ನನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ನೀನು ಹೀಗೆ ಮಾಡುತ್ತಿ ಎಂದು ನಂಬಲು ಅವರಿಗೆ ರವಷ್ಟೂ ಸಾಧ್ಯವಾಗುತ್ತಾ ಇಲ್ಲ. ಅವರಿಗಷ್ಟೇ ಅಲ್ಲ ಯಾರಿಗೂ. ಮದುವೆಗೆ ಮುನ್ನ ಅಥವಾ ನಂತರ ಯಾವ ಅನ್ಯಪುರುಷನೂ ನಿನ್ನ ಕಲ್ಪನೆಯಲ್ಲಿ ಪ್ರವೇಶಿಸಲಿಲ್ಲವೆಂದೇ ಎಲ್ಲರೂ ನಂಬಿದ್ದರು. ಹಾಗಿದ್ದೂ ಇದು ಹೇಗೆ ಸಂಭವಿಸಿದ್ದು ಎಂದೇ ಅವರೀಗ ಅಚ್ಚರಿಪಡುತ್ತಿದ್ದಾರೆ. ನನಗೆ ಮತ್ಸರ ವೆನಿಸುವಷ್ಟು ನಿನ್ನ ಗುಣನಡತೆಯ ಕುರಿತು ನನ್ನ ಗಂಡ ಆಗಾಗ ಹೇಳುತ್ತಿದ್ದರು. ಆದುದರಿಂದ ಇದನ್ನವರು ತನ್ನ ಒಂದು ವೈಯಕ್ತಿಕ ಪರಾಭವವೆಂಬಂತೆಯೂ ಭಾವಿಸುತ್ತಿರುವರೆಂದೇ ನನಗನ್ನಿಸಿತ್ತು. ನನ್ನ ಕಾಲೇಜ್ ಪ್ರಣಯದ ಕುರಿತೂ ಅವರಿಗೆ ಸ್ವಲ್ಪಮಟ್ಟಿಗೆ ಗೊತ್ತಿತ್ತು.''

''ಅದು ಅವರಿಗೆ ಸ್ವಲ್ಪವೂ ಕಿರಿಕಿರಿ ಮಾಡೋದಿಲ್ವಾ ?'' ನಿದ್ದೆಯಿಂದ ಎಚ್ಚೆತ್ತವಳಂತೆ ಇಂದುಮತಿ ಕೇಳಿದಳು.

''ಯಾರಿಗ್ಗೊತ್ತು, ಇಷ್ಟೆಂದೇ ನನಗನ್ನಿಸುತ್ತೆ. ನಾನು ಪ್ರದೀಪನನ್ನು ಇಷ್ಟಪಟ್ಟದ್ದೆನೆಂದೂ ಆತ ನನ್ನನ್ನು ಮದುವೆ ಯಾಗಬಯಸಿದ್ದರೆ, ಮನೆಯವರೂ ಒಪ್ಪಿದ್ದರೆ, ಅದನ್ನು ವಿರೋಧಿಸುತ್ತಿರಲಿಲ್ಲವೆಂದೂ ನಾನು ನನ್ನ ಗಂಡನಿಗೆ ಹೇಳಿದ್ದೇನೆ.''

''ಅದಕ್ಕೆ ಅವರು ಏನನ್ನೂ ಹೇಳಲಿಲ್ವಾ ?''

''ನನ್ನನ್ನೋ ಪ್ರದೀಪನನ್ನೋ – ಯಾರನ್ನು ಮದುವೆ ಯಾಗುವುದಾಗಿತ್ತು ನಿನಗೆ ಹೆಚ್ಚು ಇಷ್ಟ ಎಂದು ಕೇಳಿದ್ದರು.''

''ಆಮೇಲೆ ?''

''ಮದುವೆಯಾಗಲು ಒಬ್ಬಾತನನ್ನು ಕಲ್ಪಿಸಿ ಕನಸು ಕಾಣಲಿಕ್ಕಾದರೆ ಪ್ರದೀಪನಿಗಿಂತಲೂ ಯೋಗ್ಯರಾದ ಅನೇಕ ಮಂದಿ ಇರುತ್ತಾರೆ. ಹಾಗೆಯೇ ನನಗಿಂತ ಯೋಗ್ಯತೆ ಯಿರುವ ಹೆಂಡತಿಯೂ ಸಿಗುತ್ತಾಳೆ. ಸದ್ಯ ನಮಗೆ ಹೀಗೆ ಬಾಳಿದರೆ ಸಾಲದೇ – ಎಂದು ನಾನು ಕೇಳಿದೆ. ಆಗ ಅವರು ಚೆನ್ನಾಗಿ ನಕ್ಕರು, ಅಷ್ಟೆ. ಆ ಬಳಿಕ ನಾವು ಈ ವಿಷಯದ ಕುರಿತು ಮಾತಾಡಲೇ ಇಲ್ಲ.''

''ನೀನು ಕಾಲೇಜ್‌ನಲ್ಲೇ ಅಪ್ರೆಂಟಿಸ್ ಮುಗಿಸಿದ್ದರಿಂದ ಒಳ್ಳೇದಾಯ್ತು. ನನ್ನ ಮಟ್ಟಿಗೆ ಅದು ನಡೆಯದಿದ್ದುದೇ ತೊಂದರೆಗೆ ಕಾರಣವಾಗಿತ್ತು.'' ಬಿಸಿ ಚಹಾ ಚಪ್ಪರಿಸುತ್ತಾ ಇಂದುಮತಿ ಸ್ವಗತವೆಂಬಂತೆ ಹೇಳಿದಳು.

# ನದಿ



''ಆದದ್ದೆಲ್ಲವು ಅಚ್ಚರಿಪಡುವಂಥ ಘಟನೆಗಳೇ. ಇರಲಿ, ಇದು ಹೇಗೆ ಸಂಭವಿಸಿದ್ದು ?'' ಸುಮತಿ ಪ್ರಶ್ನಿಸಿದಳು.

ಇಂದುಮತಿ ಚಹಾ ಬಟ್ಟಲುಗಳನ್ನು ಹೊರಗೆ ಒಯ್ದಿಟ್ಟು ಬಾಗಿಲು ಮುಚ್ಚಿ ಅಗುಳಿ ಹಾಕಿ ಸುಮತಿಯನ್ನು ಮಲಗುವ ಕೋಣೆಗೆ ಕರೆತಂದಳು.

''ನಿನಗೆ ಏನೇನ್ ತಿಳೀಬೇಕಾಗಿದೆ ಈಗ ?'' ಹಾಸಿಗೆಯಲ್ಲಿ ಕುಳಿತಿರುವ ಸುಮತಿಯ ಸನಿಹಕ್ಕೆ ಕುರ್ಚಿ ಸರಿಸಿ ಅವಳಿಗೆ ಮುಖಾಮುಖಿಯಾಗಿ ಕುಳಿತುಕೊಳ್ಳುತ್ತಾ ಇಂದುಮತಿ ಕೇಳಿದಳು.

ಸುಮತಿ ಮುಗುಳ್ನಗುತ್ತಾ ಕಾಲಾಡಿಸುತ್ತಾ ಗೆಳತಿಯ ಮುಖ ನೋಡುತ್ತಾ ಸುಮ್ಮಗೆ ಕುಳಿತಳಷ್ಟೇ. ಇಂದುಮತಿಯೇ ಮುಂದುವರಿಸಿದಳು :

''ನಾನು ದೇವದಾಸರನ್ನು ಮದುವೆಯಾಗಿರುವೆನೆಂದೂ ನಮಗೆ ಮೂವರು ಮಕ್ಕಳಿರುವರೆಂದೂ ನಿನಗೆ ಗೊತ್ತು. ಗಂಡನ ಮಿತ್ರನಾಗಿರುವ ಶಶಿಯ ಜೊತೆ ನಾನು ತಪ್ಪಿಸಿಕೊಂಡುಬಂದು ಈಗ ಹೋಟೆಲು ಕೋಣೆಯಲ್ಲಿ ವಾಸಿಸುತ್ತಿರುವೆನೆಂದೂ ನೀನು ಅರಿತಿರುವೆ. ವಿಷಯ ಇಷ್ಟೇ ತಾನೆ ?''

ಅವಳು ಪುನಃ ನಕ್ಕಳು. ದುಃಖ ಸ್ಪಷ್ಟವಾಗಿ ನೆರಳಾಡಿಸುತ್ತಿತ್ತು ಆದರಲ್ಲಿ. ಮಳೆಯಲ್ಲಿ ಮೂಡಿದ ಬಿಸಿಲಿನ ಹಾಗಿತ್ತು ಆ ನಗೆ.

''ಎಲ್ಲವನ್ನೂ ನಿನ್ನೊಡನೆ ಹೇಳಬೇಕೆಂದೇ ನನಗನಿಸುತ್ತಿದೆ. ಯಾರೊಡನೆಯಾದರೂ ಹೇಳುವುದು ನನ್ನ ಮನಸ್ಸಿಗೊಂದು ಸಾಂತ್ವನವೂ ಹೌದು. ಆದರೆ, ಹೇಳತಕ್ಕ ಕ್ರಿಯೆಗಳು ಹೆಚ್ಚೇನೂ ಇಲ್ಲ, ಹೆಚ್ಚಿನವು ಮನಸ್ಸಿನಲ್ಲೇ ಸಂಭವಿಸಿದ್ದುವು.''

ಇಂದುಮತಿ ಪುನಃ ನಕ್ಕಳು. ಒಂದು ಪುಟ್ಟ ಮಗುವಿನದ್ದೋ ಎಂಬಂತೆ ತೀರ ಅಮಾಯಕವಾಗಿತ್ತು ಆ ನಗೆ.

''ನಾನು ಗಂಡನಿಗೆ ಪ್ರತೀಕಾರ ಮಾಡುತ್ತಿದ್ದೇನೆ ಎಂದೇ ಮೊದಮೊದಲು ಅಂದು ಕೊಂಡದ್ದು, ಸಂಗತಿಗಳು ಅದಕ್ಕೂ ಮೀರಿದ್ದೆಂದು ಗೊತ್ತಾದದ್ದು ಆಮೇಲಷ್ಟೇ. ಆಗ ಮಾತ್ರ ನಿಜವಾಗಿಯೂ ನಾನು ಬೆಚ್ಚಿಬಿದ್ದಿದ್ದೆ. ಆದರೆ, ಪಾರಾಗಲು ಸಾಧ್ಯವಾಗದ ಹಾಗೆ ಅಷ್ಟರಲ್ಲೇ ಅದರಲ್ಲಿ ಮುಳುಗಿಬಿಟ್ಟಿದ್ದೆ ಕೂಡ. ಅದೊಂದು ಸ್ವಯಂಕೃತ ಅನರ್ಥ ಎಂದೇ ಹೇಳಬಹುದು.''

''ಯಾಕೆ ಗಂಡನೊಡನೆ ಪ್ರತೀಕಾರ ? ನನಗೆ ನಿನ್ನ ಮಾತು ಯಾವುದೂ ಅರ್ಥವಾಗ್ತಾ ಇಲ್ವಲ್ಲ.''

''ನಿಜ, ನಿನಗೆ ಅರ್ಥವಾಗುವುದಿಲ್ಲ. ನಾನು ಎಲ್ಲವನ್ನೂ ಬಿಡಿಸಿ ಹೇಳಿದ ಬಳಿಕವೂ ಪ್ರಾಯಶಃ ನಿನಗೆ ಅರ್ಥವಾಗಲಾರದು. ಆದರೂ ನಾನು ಪ್ರಯತ್ನಿಸ್ತೇನೆ. ಆಮೇಲೂ ಅರ್ಥವಾಗದಿದ್ರೆ ನನ್ನನ್ನು ಕ್ಷಮಿಸು.''

ಇಂದುಮತಿ ಎದ್ದು ಫ್ಯಾನ್ ಆನ್ ಮಾಡಿದಳು. ಸುಮತಿಗೆ ಸೆಕೆಯೆನಿಸಿರಲಿಲ್ಲ. ಆದರೂ ಗೆಳತಿಯ ಸಜ್ಜಾಗುವಿಕೆಯಲ್ಲಿ ತಲೆಹಾಕಬೇಡ ಎಂದುಕೊಂಡು ಅವಳು ಸುಮ್ಮನೆ ಕುಳಿತಳಷ್ಟೇ.

''ಶಶಿ ಮತ್ತು ನನ್ನ ಹಸ್ ಪರಸ್ಪರ ಬಹಳ ಇಷ್ಟಪಡುತ್ತಿದ್ದರೆಂದು ನಿನಗೆ ಗೊತ್ತಲ್ಲ. ಅವರಿಬ್ಬರೂ ವಾರದಲ್ಲಿ ಒಂದೆರಡು ದಿನವಾದರೂ ನಮ್ಮ ಮನೆಯಲ್ಲೇ ಒಟ್ಟಾಗುತ್ತಿದ್ದರು. ಹೊತ್ತು ಬಹಳಷ್ಟು ಮೀರುವವರೆಗೂ ರಾತ್ರಿ ಮಾತಾಡುತ್ತಾ ಕುಳಿತಿರುತ್ತಿದ್ದರು. ಶಶಿಗೆ ವಯಸ್ಸಾದ ತಾಯಿ ಮತ್ತು ಇಬ್ಬರು ಕಿರಿಯ ಸಹೋದರರಷ್ಟೇ ಮನೆಯಲ್ಲಿರುವವರು. ಶಶಿ ಬಹುತೇಕ ಪ್ರವಾಸದಲ್ಲೇ ದಿನಗಳೆಯುತ್ತಾರೆ. ಮರಳಿದಾಗ ನಮ್ಮ ಮನೆಗೇ ಬರುತ್ತಾರೆ. ಹೆಚ್ಚು ತಡವಾದರೆ, 'ಅಮ್ಮನನ್ನು ಕರೆದೆಬ್ಬಿಸಿ ತೊಂದರೆ ಕೊಡಲಾರೆ' ಎಂದು ಹೇಳಿ ಸ್ವಂತ ಮನೆಗೆ ಹೋಗುತ್ತಿರಲಿಲ್ಲ. ಕೆಲವೊಮ್ಮೆ ರಾತ್ರಿ ತುಂಬಾ ತಡವಾಗಿ ಬಂದರೆ ನಮ್ಮನ್ನೂ ಕರೆಯುತ್ತಿರಲಿಲ್ಲ. ಆತನ ಸ್ವಂತ ಮಲಗುವ ಕೋಣೆಯೇ ಆಗಿತ್ತು ನಮ್ಮ ಚಾವಡಿ.

''ನನ್ ಹಸ್‌ಗೆ ಶಶಿಯ ಬಗ್ಗೆ ಸ್ನೇಹಕ್ಕಿಂತಲೂ ಅಭಿಮಾನವೇ ಹೆಚ್ಚಾಗಿತ್ತು – ಎನ್ನುವುದೇ ಹೆಚ್ಚು ಸರಿಯಾದೀತು. ಶಶಿಯ ಸಾಮರ್ಥ್ಯಗಳ ಕುರಿತು ಅವರು ಎಷ್ಟು ಬೇಕಾದರೂ ಕತೆಗಳನ್ನು ಹೇಳುತ್ತಿದ್ದರು – ಶಶಿಯ ಧೈರ್ಯ, ಬುದ್ಧಿಮತ್ತೆ, ವಾಕ್ಚಾತುರ್ಯ ಇವನ್ನೆಲ್ಲ ರುಜುಪಡಿಸುವಂಥ ಕತೆಗಳನ್ನು, ಅವೆಲ್ಲವೂ ನಿಜವಾಗಿದ್ದುವು ಎಂದು ನನಗೂ ಅನ್ನಿಸಿವೆ. ಶಶಿಯ ಮಾತುಗಳನ್ನು ಕೇಳುತ್ತ ಕುಳಿತಿರುವುದೆಂದರೆ ನನಗೂ ಇಷ್ಟವಾಗಿತ್ತು. ಆದರೂ, ನಾವು ಸಲುಗೆಯಿಂದಿದ್ದ ಏಳೆಂಟು ವರ್ಷಗಳ ದೀರ್ಘಾವಧಿಯಲ್ಲಿ ಯಾವತ್ತೂ ನಮ್ಮಿಬ್ಬರೊಳಗೆ

## ಸಾದರ ಸ್ವೀಕಾರ

**ಬೆತ್ತಲೆ ವೃಕ್ಷ** ಡಾ|| ಸಿ. ಜಿ. ಲಕ್ಷ್ಮೀಪತಿ
**ಪುಟ : ೧೭೯** **ಬೆಲೆ : ರೂ. ೧೨೦**

**ಕ್ಯಾಸ್ಟ್ ಕೆಮಿಸ್ಟ್ರಿ** ಡಾ|| ಸಿ. ಜಿ. ಲಕ್ಷ್ಮೀಪತಿ
**ಪುಟ : ೮೦** **ಬೆಲೆ : ರೂ. ೭೦**

**ದಮನಿತ ದನಿಗಳ ಚಿಂತನ** ಡಾ|| ಡೊಮಿನಿಕ್ ಡಿ.
**ಪುಟ : ೯೫** **ಬೆಲೆ : ರೂ. ೧೦೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸಖಿ ಪ್ರಕಾಶನ,** ಏಕಾಂತ ನಿಲಯ, ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ, ಬಳ್ಳಾರಿ - ೫೮೩ ೨೦೧

**ಕಥೆಗಳಲ್ಲದ ಕಥೆಗಳು** ರಾಮಚಂದ್ರ ಎಸ್. ಕುಲಕರ್ಣಿ
**ಪುಟ : ೧೧೬** **ಬೆಲೆ : ರೂ. ೯೦**

**ಹಾಯ್...! ಹಾಯ್ಕು...!!**
ರಾಮಚಂದ್ರ ಎಸ್. ಕುಲಕರ್ಣಿ
**ಪುಟ : ೯೧** **ಬೆಲೆ : ರೂ. ೮೦**

**ಅಳಿಲೆಂಬ ನಾನು** (ಕವನ ಸಂಕಲನ)
ರಾಮಚಂದ್ರ ಎಸ್. ಕುಲಕರ್ಣಿ
**ಪುಟ : ೬೬** **ಬೆಲೆ : ರೂ. ೫೦**

**ಹೂ-ಮಳೆ** (ಕಿರು ಕವನಗಳ ಸಂಕಲನ)
ರಾಮಚಂದ್ರ ಎಸ್. ಕುಲಕರ್ಣಿ
**ಪುಟ : ೫೬** **ಬೆಲೆ : ರೂ. ೫೦**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**'ಚೈತ್ರ ಲಹರಿ' ಪ್ರಕಾಶನ,** ಎಫ್-೩, ಲಕ್ಷ್ಮಿ ಅಪಾರ್ಟ್‌ಮೆಂಟ್ಸ್, ಸಾರಸ್ವತಪುರ, ಧಾರವಾಡ - ೨

**ರಾಗ ಒಂದು ಭಾವ ಹಲವು** (ಅನುವಾದಿತ ಕಥೆಗಳು)
ಕೋವರ್‌ಕೊಲ್ಲಿ ಕರುಣಾಕರ
**ಪುಟ : ೫೪** **ಬೆಲೆ : ರೂ. ೩೦**
**ಶ್ರೀ ಸಾಯಿ ದುರ್ಗಾ ಪ್ರಕಾಶನ,** ವೇಗಸ್ ಟೌನ್‌ಶಿಪ್, ಕಿನ್ನಿಮುಲ್ಕಿ, ಉಡುಪಿ - ೫೭೬ ೧೦೧

**ಪ್ರೊ|| ಎಸ್. ವಿ. ಪರಮೇಶ್ವರ ಭಟ್ಟರ ಕಾವ್ಯ ಸಂಗ್ರಹ**
ಸಂ.: ಡಾ|| ಜಿ. ಕೆ. ರಮೇಶ
**ಪುಟ : ೩೬೪** **ಬೆಲೆ : ರೂ. ೧೬೦**
**ಕರ್ನಾಟಕ ಸಂಘ,** ಬಿ. ಎಚ್. ರಸ್ತೆ, ಶಿವಮೊಗ್ಗ - ೫೭೭ ೨೦೧

**ಭಾಷೆ ಬದುಕು ಸಾಹಿತ್ಯ** (ಲೇಖನ ಸಂಗ್ರಹ)
ಅರ್ಜುನ ತಾ. ಕೋರಟಕರ
**ಪುಟ : ೧೧೧** **ಬೆಲೆ : ರೂ. ೪೦**

**ಹನಿಹನಿ ನೀರಿನ ಹಲವು ಮಜಲುಗಳು** (ಲೇಖನಗಳು)
ಡಾ|| ಆರ್. ವೆಂಕಟೇಶ್
**ಪುಟ : ೬೫** **ಬೆಲೆ : ರೂ. ೩೦**

**ಮುಸುಕಿನೊಳಗಿನ ಏಕಾಂತ ಮತ್ತು ಇತರ ಪ್ರಬಂಧಗಳು**
ತುರುವೇಕೆರೆ ಪ್ರಸಾದ್
**ಪುಟ : ೮೮** **ಬೆಲೆ : ರೂ. ೪೦**

**ಮಾದೇವಿ ಮತ್ತು ಇತರ ನಾಟಕಗಳು** ಡಾ|| ಸುಜಾತ ಅಕ್ಕಿ
**ಪುಟ : ೧೫೪** **ಬೆಲೆ : ರೂ. ೪೫**

**ಕೊಪ್ಪಳ ಜಿಲ್ಲೆಯ ಜನಪದ ಸಂಸ್ಕೃತಿ**
ಬಸವರಾಜ ವೀ. ಮೂಲಿಮನಿ
**ಪುಟ : ೧೧೭** **ಬೆಲೆ : ರೂ. ೪೦**

**ಷಡ್ಯಂತ್ರ** (ಕಥಾ ಸಂಕಲನ) ಪ್ರೊ|| ಕಮಲಾ ನರಸಿಂಹ
**ಪುಟ : ೯೦** **ಬೆಲೆ : ರೂ. ೪೦**

**ಬಳ್ಳಾರಿ ಜಿಲ್ಲಾ ಸುವರ್ಣ ಸಂಭ್ರಮದ ಕಥಾ ಸಂಕಲನ**
ಸಂ.: ನಿಷ್ಠಿ ರುದ್ರಪ್ಪ
**ಪುಟ : ೧೧೩** **ಬೆಲೆ : ರೂ. ೪೦**

**ಬದುಕುವ ಕಲೆ** (ಮಕ್ಕಳ ೧೨ ನಾಟಕಗಳು)
ವ್ಹಿ. ಎಸ್. ಶಿರಹಟ್ಟಿಮಠ
**ಪುಟ : ೮೯** **ಬೆಲೆ : ರೂ. ೪೦**

**ಮೋಹದ ಬಲೆ ಮತ್ತು ಇತರ ಸಣ್ಣ ಕಾವ್ಯಗಳು**
ಡಾ|| ಉಪ್ಪಂಗಳ ರಾಮಭಟ್ಟ
**ಪುಟ : ೧೬೪** **ಬೆಲೆ : ರೂ. ೪೫**

**ಉಂಡೂ ಉಪವಾಸಿ** (ಕಥಾ ಸಂಕಲನ)
ಯು. ವರಮಹಾಲಕ್ಷ್ಮೀ ಹೊಳ್ಳ
**ಪುಟ : ೧೦೦** **ಬೆಲೆ : ರೂ. ೪೦**

**ಕುಂಬಾರಿಕೆ ವೃತ್ತಿ ಪದಕೋಶ** ಬಸವರಾಜ ಕುಂಚೂರು
**ಪುಟ : ೧೮೬** **ಬೆಲೆ : ರೂ. ೫೦**

**ಕಾವ್ಯ ಪರಿಕರಗಳು** (ಕಾವ್ಯ ಮೀಮಾಂಸೆಯ ಚಿಂತನೆಗಳು)
ಎನ್. ಎಂ. ಗಿರಿಜಾಪತಿ
**ಪುಟ : ೧೪೬** **ಬೆಲೆ : ರೂ. ೪೫**

**ಪ್ರತಿಕ್ರಿಯೆ** (ಲೇಖನ ಸಂಗ್ರಹ) ಹೇಮಲತಾ ಮಹಿಷಿ
**ಪುಟ : ೧೮೯** **ಬೆಲೆ : ರೂ. ೫೫**

**ಧರೆಗೆ ದೊಡ್ಡವರು** (೨೨ ವ್ಯಕ್ತಿಗಳ ಚಿತ್ರಣಗಳು)
ಶರಣಪ್ಪ ಗುಡದಿನ್ನಿ
**ಪುಟ : ೨೧೪** **ಬೆಲೆ : ರೂ. ೫೫**

ಮೇಲಿನ ಹದಿನಾಲ್ಕು ಪುಸ್ತಕಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು,** ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಇಂತಹ ಸಂಬಂಧ ಏರ್ಪಡಬಹುದೆಂದು ಕನಸುಮನಸ್ಸಿನಲ್ಲೂ ನಿರೀಕ್ಷಿಸಿರಲಿಲ್ಲ.

''ಶಶಿಯ ವರ್ತನೆ ತುಂಬು ಮರ್ಯಾದೆಯಿಂದ ಕೂಡಿತ್ತು. ದೇವದಾಸರು ಇಲ್ಲದ ವೇಳೆ ನಮ್ಮ ಮನೆಗೆ ಬಂದರೆ ಹಿಂದಿರುಗಲು ಅವಸರಪಡುತ್ತಿದ್ದರು. ಒತ್ತಾಯಿಸಿದರೂ ಕುಳಿತುಕೊಳ್ಳುವುದಿಲ್ಲ. ಹೀಗಿದ್ದೂ ಶಶಿ, ನಾನು ಮಾತ್ರ ಮನೆಯಲ್ಲಿದ್ದಾಗ ಕೂಡ ಅನೇಕ ರಾತ್ರಿಗಳನ್ನು ಅಲ್ಲಿ ಕಳೆದಿದ್ದರು. ಆತ ನಾವು ನಿದ್ದೆಹೋದ ನಂತರ ಬಂದರೆ ನಮ್ಮನ್ನು ಕರೆಯುತ್ತಿರಲಿಲ್ಲವೆಂದು ನಾನು ಹೇಳಿದ್ದೆನಲ್ಲ. ಶಶಿ ರಾತ್ರಿ ಹೊತ್ತು ಬಂದದ್ದು ನನಗಾಗಲಿ, ಮನೆಯಲ್ಲಿ ನಾನು ಮಾತ್ರ ಇದ್ದದ್ದು ಶಶಿಗಾಗಲಿ ಗೊತ್ತಾಗುತ್ತಿದ್ದದ್ದು ಮರುದಿನ ಬೆಳಗಾದ ಬಳಿಕವಷ್ಟೇ. ಕ್ರಮೇಣ ಅದೊಂದು ಸಮಸ್ಯೆಯೇ ಅಲ್ಲದಾಯ್ತು. ಶಶಿ ರಾತ್ರಿ ಯಾವ ಹೊತ್ತಿನಲ್ಲೂ ಬಂದು ಚಾವಡಿಯಲ್ಲಿ ಮಲಗುತ್ತಿದ್ದರು. ಚಾವಡಿಗೆ ಮುಂಭಾಗದಲ್ಲಿ ಮರೆ ಇದ್ದಿತ್ತೇ ಹೊರತು ಗಟ್ಟಿ ಗೋಡೆ, ಬಾಗಿಲುಗಳು ಇಲ್ಲವೆಂದು ನಿನಗೆ ನೆನಪಿರಬಹುದಲ್ಲ. ಶಶಿಗೋಸ್ಕರವೇ, ಮುಂಭಾಗ ಹಾಗೆಯೇ ಬಿಟ್ಟದ್ದೆಂದು ದೇವದಾಸರು ಶಶಿಯೊಡನೆ ಹೇಳುತ್ತಲೂ ಇದ್ದರು.

''ಒಂದೊಂದು ದಿನ ಶಶಿ ರಾತ್ರಿ ನಾಲ್ಕು ಗಂಟೆಯ ನಂತರವೇ ಬಂದು ಮಲಗುತ್ತಿದ್ದರು ಎಂಬುದನ್ನು ನಾನು ಗಮನಿಸಿದೆ. ಆತ ಪೇಟೆಯಿಂದ ಮೊದಲ ಬಸ್‌ಗೆ ಬರುತ್ತಾರೆಂದು ಹಸ್ ಹೇಳಿದ್ದರು. ಅದು ನಿಜವಲ್ಲವೆಂದು ಆಮೇಲೆ ನನಗನಿಸಿತ್ತು. ಶಶಿ ಮೊದಲ ಬಸ್ ತಲುಪುವುದಕ್ಕೂ ಮೊದಲೇ ಬಂದು ಮಲಗುತ್ತಿರುವುದನ್ನೂ ನಾನು ಗಮನಿಸಿದೆ.

''ಅದನ್ನು ನಾನು ಹಸ್‌ಗೆ ಹೇಳಿದಾಗ ಅವರು ಅಲ್ಲಗಳೆದರು. ಮುಂದೆ ಶಶಿ ಬಂದ ಹೊತ್ತಿನಲ್ಲೇ ದೇವದಾಸರನ್ನು ಕರೆದು ಕ್ಲಾಕ್‌ನಲ್ಲಿ ಟೈಮ್ ತೋರಿಸಿದೆ. ಆಗ ಅವರು ನಗುತ್ತಾ ನನ್ನೊಡನೆ 'ಹೋಗಿ ಮಲಗಿಕೊ' ಎಂದಷ್ಟೇ ಹೇಳಿದರು. ಕ್ರಮೇಣ ಆ ರಹಸ್ಯವನ್ನೂ ಅವರು ನನಗೆ ಹೇಳಿದರು: ಶಶಿಗೆ ಪಕ್ಕದ ಗ್ರಾಮದಲ್ಲಿ ಒಬ್ಬಳು ಇನಿಯಳಿದ್ದಾಳೆ, ಮುಂಜಾನೆ ಜನಸಂಚಾರ ಶುರುವಾಗುವ ಮುನ್ನವೇ ಆತ ಅಲ್ಲಿಂದ ಮರಳಿಬರುತ್ತಾರೆ.

''ಅದರಲ್ಲಿ ಅನುರಾಗದ ಅಂಶವೇನೂ ಇಲ್ಲವೆಂದೂ ಆ ಹೆಂಗಸಿಗೆ ಶಶಿಗಿಂತ ಹೆಚ್ಚು ವಯಸ್ಸಾಗಿದೆಯೆಂದೂ ಗಂಡ ಬಿಟ್ಟ ಆ ಹೆಂಗಸಿಗೆಎಂಟೋ ಹತ್ತೋ ವಯಸ್ಸಿನ ಒಬ್ಬ ಮಗನೋ ಮಗಳೋ ಇರಬೇಕೆಂದೂ ಹಸ್ ಹೇಳಿದರು; ಇದಾವುದನ್ನೂ ಶಶಿಗೆ ಹೇಳಕೂಡದೆಂಬ ಬಲವಾದ ಶರತದೊಂದಿಗೇ. ನಾನದನ್ನು ಬಹಳಕಾಲ ಅಕ್ಷರಶಃ ಪಾಲಿಸಿಯೂ ಇದ್ದೆ.

''ನಮ್ಮೂರ ಜಾತ್ರೆಯ ದಿನ ಹಸ್ ನನಗೆ ಆ ಹೆಂಗಸನ್ನು ತೋರಿಸಿಕೊಟ್ಟರು. ಆರೋಗ್ಯವೂ ಸೌಂದರ್ಯವೂ ತುಂಬಿ ತುಳುಕುವ ಓರ್ವ ಯುವತಿ! ಬಿಲ್ವವೃಕ್ಷದ ಎಲೆಯನ್ನು ಮುಡಿದಿರುವ, ತುಂಬು ನಿತಂಬವನ್ನು ಮರೆಮಾಡುತ್ತಿರುವ ಕಪ್ಪುಕುರುಳು, ಕಳಿತ ಕಿತ್ತಳೆಯ ಮೈಬಣ್ಣ, ಕುಲೀನ ಮುಖಭಾವ, ಆಕೆಯನ್ನು ಕಂಡರೆ ಗೌರವದ ಹೊರತು ಇನ್ನೇನೂ ಅನ್ನಿಸುತ್ತಿರಲಿಲ್ಲ.

''ಅದನ್ನು ನಾನು ಹಸ್‌ಗೆ ಹೇಳಿದಾಗ ಹಸ್ ಗಟ್ಟಿಯಾಗಿ ನಕ್ಕರು.

''ಶಶಿಯೂ ಹಾಗೆಯೇ ತಾನೇ? ಅವರಿಬ್ಬರನ್ನೂ ಒಟ್ಟಾಗಿಸಿದ್ದೂ ಅದೇ ಇರಬಹುದು – ಎಂದರು.

''ಏನೇ ಆದರೂ ಅದು ಅನೈತಿಕ ಸಂಬಂಧ. ಸಹಜವಾಗಿಯೇ ಅದು, ಶಶಿಯ ಬಗೆಗಿನ ನನ್ನ ಸದ್ಭಾವವನ್ನು ಮಸುಳಿಸಿತು. ಹಾಗೆ ಏನಾದರೂ ಸಂಭವಿಸುತ್ತಿದೆಯೇ ಎಂದು ನಾನು ನನ್ನನ್ನು ಪ್ರಶ್ನಿಸುತ್ತಲೇ ಇದ್ದೆ. ಆವಾಗಲೆಲ್ಲ ಇಲ್ಲವೆಂದೇ ಮನಸ್ಸು ನನಗೆ ಹೇಳುತ್ತಿತ್ತು.

''ನನ್ನ ಮನೋಗತಿ ಅಲ್ಲೂ ನಿಲ್ಲಲಿಲ್ಲವೆಂದೇ ನನಗನಿಸುತ್ತಿದೆ. ಸ್ತ್ರೀಯರನ್ನೂ ಶಿಶುಗಳನ್ನೂ ಹೂವುಗಳನ್ನೂ ನೋಡದಂಥ ಅನಾಸಕ್ತನೂ ಅರಸಿಕನೂ ಅಲ್ಲದ ಶಶಿಯನ್ನು ಕಂಡಾಗ ನನ್ನಲ್ಲಿ ಇನ್ನೂ ಹೆಚ್ಚಿನ ಆದರ ಹುಟ್ಟಿರಬಹುದೆಂದೇ ನಾನು ನಂಬುತ್ತೇನೆ.

''ಶಶಿ ಏಳು ಗಂಟೆಯ ಬಳಿಕವಷ್ಟೇ ಏಳುತ್ತಿದ್ದ. ಚಾವಡಿಯಲ್ಲಿ ಆತ ಇರುವ ದಿನಗಳಲ್ಲಿ ಗಂಟೆ ಆರೂವರೆ ದಾಟುವಾಗ ನಾನು ಒಂದು ಲೋಟ ಬಿಸಿಬಿಸಿ ಕಾಫಿ ಒಯ್ದು ಅಲ್ಲಿ ಮೇಜಿನ ಮೇಲೆ ಮುಚ್ಚಿಡುತ್ತಿದ್ದೆ. ಶಕ್ಯವಿದ್ದಷ್ಟೂ ಕಾಲಸಪ್ಪಳ ಕಿವಿಗೆ ಬೀಳಿಸದೆ, ಶಶಿ ಎಚ್ಚರಗೊಳ್ಳಲು ಅವಕಾಶ ಕಲ್ಪಿಸದೆಯೇ ನಾನದನ್ನು ಮಾಡುತ್ತಿದ್ದೆ.

''ಮಲಕ್ಕೊಳ್ಳಿ, ಏಳುವತನಕ ತಣಿಯೋಲ್ಲ, ಒಳ್ಳೆ ಬಿಸಿಯಿರುತ್ತೆ – ಶಶಿ ಇನಿಯಳ ಬಳಿಯಿಂದ ಮರಳಿದ್ದ ಒಂದು ಮುಂಜಾನೆ ನಾನು ಕಾಫಿಯೊಂದಿಗೆ ತಲುಪಿದಾಗ ಥಕ್ಕನೆ ಎಚ್ಚೆತ್ತು ಎದ್ದು ಕುಳಿತ ಆತನೊಡನೆ ನಾನು ಹೇಳಿದೆ. ಆದರೆ ಅಂದು ಆಮೇಲೆ ಆತ ಮಲಗಲಿಲ್ಲ. ಮೈಮುರಿದು ಕಣ್ಣು ಉಜ್ಜಿ ನಿದ್ದೆಯನ್ನು ದೂರವಾಗಿಸಲು ಯತ್ನಿಸಿದ್ದರು.

''ಪೇಟೆಯಿಂದ ಮೊದಲ ಬಸ್ಸಿಗೆ ಬಂದಿರಬೇಕು, ಅಲ್ವಾ – ಎಂದು ನಾನು ಕೇಳಿದಾಗ, ಹೌದು ಎನ್ನುವಂತೆ ತಲೆದೂಗಿದ್ದರು.

''ರಾತ್ರಿ ನಿದ್ರಿಸಲೇ ಇಲ್ಲ ಅನ್ನಿಸತ್ತೆ, ಅಲ್ಲಿ ಭಾರೀ ಕೆಲಸ ಇದ್ದಿರಬಹುದು ಅಲ್ವಾ ? – ನಾನು ಮುಖದಲ್ಲಿ ಯಾವುದೇ ಭಾವವ್ಯತ್ಯಾಸವೂ ಆಗದಹಾಗೆ ಸಿಗ್ಗಾ ವಹಿಸುತ್ತಾ ಕೇಳಿದ್ದೆ.

''ಶಶಿ ಕುತೂಹಲದೊಂದಿಗೆ ನನ್ನನ್ನು ನೋಡಿದರು; ತನ್ನ ರಹಸ್ಯ ಸೋರಿಹೋದ ಹಾಗೆ ಹಾಗೂ ಅದನ್ನು ನಾನು ವಶಪಡಿಸಿದ್ದ ಹಾಗೆ. ಬಳಿಕ ಒಪ್ಪಿಕೊಳ್ಳುವಂತೆ ತಲೆದೂಗಿದರು.

''ರಾತ್ರಿಯಿಡೀ ಕೆಲಸ ಮಾಡಿದ ಬಳಿಕ ಮುಂಜಾವದ ಪ್ರಯಾಣ ಕಷ್ಟದ್ದೇ ತಾನೆ ? ಕಾಫಿ ಕುಡಿದು ಇನ್ನೊಮ್ಮೆ ಮಲಕ್ಕೊಳ್ಳಿ – ಎಂದೆ.

''ನಿಮ್ಮ ಮಿತ್ರ ರಾತ್ರಿ ಸ್ವಲ್ಪವೂ ನಿದ್ರಿಸಲಿಲ್ಲ. ಅಂತೂ ಕಾಫಿ ಕುಡಿದು ಮತ್ತೊಮ್ಮೆ ಮಂಪರು ಕಳೆಯಲು ಹೇಳಿದ್ದೇನೆ – ಎಂದು ನಾನು ಮರಳಿ ವರಾಂಡ ತಲುಪಿದಾಗ ಹಸ್‌ಗೆ ಹೇಳಿದೆ. ಅವರೊಮ್ಮೆ ಮುಸಿ ಮುಸಿ ನಕ್ಕರು, ಅಷ್ಟೇ.

''ನನಗೆ, ತನ್ನ ರಹಸ್ಯವೇನಾದರೂ ಗೊತ್ತೇ – ಎಂದು ಆ ದಿನ ಶಶಿ ಹಸ್ ಹತ್ತಿರ ಕೇಳಿದ್ದರು. ಗೊತ್ತಿಲ್ಲವೆಂದೂ ನಾನು ಹಾಗಲ್ಲ ಕೇಳಿದ್ದು ನನ್ನ ಭೋಳೇತನದಿಂದ ಇರಬಹುದೆಂದೂ ಹಸ್ ಉತ್ತರವನ್ನೂ ನೀಡಿದ್ದರು.

''ಶಶಿ ಅದನ್ನೇ ನಂಬಿದ್ದರು.

''ನಾನು ಆ ಬಳಿಕ ಹಸ್‌ನ ಎದುರಿನಲ್ಲೇ ಹಲವಾರು ಬಾರಿ ಇಂತಹ ಸೂಚನೆಯೊಂದಿಗೆ ಶಶಿಯನ್ನು ನವುರಾಗಿ ಗೇಲಿ ಮಾಡುತ್ತಾ ಇದ್ದೆ.

''ಹಸ್ ಅವನ್ನೆಲ್ಲ ಬೇರೆ ರೀತಿಯಲ್ಲಿ - ಯಾರಿಗೂ ಕೆಡುಕಾಗದ ರೀತಿಯಲ್ಲಿ – ವಿವರಿಸುತ್ತಿದ್ದರು. ಶಶಿ ಮಾತ್ರ ಅಂತಹ ಸಂದರ್ಭಗಳಲ್ಲೆಲ್ಲ ಮೌನವಾಗಿಯೇ ಇರುತ್ತಿದ್ದರು.

''ಅದು ಸಂಭವಿಸಿದ್ದು ಒಂದಷ್ಟು ದಿನಗಳ ಬಳಿಕ –

''ಮಕ್ಕಳ ದೀರ್ಘ ಸ್ಕೂಲ್ ರಜಾವಧಿಗಳಲ್ಲಿ ನಾನು ಮತ್ತು ಮಕ್ಕಳು ಒಂದಷ್ಟು ದಿನ ನನ್ನ ಅಪ್ಪನ ಉದ್ಯೋಗ ಸ್ಥಳಕ್ಕೆ ಹೋಗಿ ವಾಸಿಸುತ್ತಿದ್ದೆವು. ಆಗ ಮನೆಯಲ್ಲಿ ಹಸ್ ಒಬ್ಬರೇ ಇರುತ್ತಿದ್ದರು. ಆದರೂ ಅವರು ಅಡುಗೆ ಮಾಡುತ್ತಿರಲಿಲ್ಲ. ಆಹಾರಕ್ಕೆ ಹತ್ತಿರದಲ್ಲೇ ಇರುವ ತಾಯಿಮನೆಗೆ ಹೋಗಿಬರುತ್ತಾ ರಾತ್ರಿ ಮಾತ್ರ ನಮ್ಮ ಮನೆಯಲ್ಲೆ ಮಲಗುತ್ತಿದ್ದರು. ನಾನು ಮರಳಿಬರುವಾಗ ಮಕ್ಕಳಿಗೆ ಉಡುಗೆ, ನನಗೆ ಸೀರೆ, ಹಸ್‌ಗೆ ಪ್ಯಾಂಟ್‌ನ ಅರಿವೆ – ಇತ್ಯಾದಿ ಬೆಲೆಬಾಳುವ ಬಹಳಷ್ಟು ವಸ್ತುಗಳನ್ನು ತರುತ್ತಿದ್ದುದರಿಂದ ಹಸ್‌ಗೆ ಆಗಿನ ಒಂಟಿವಾಸತ್ವದ ಅನಾನುಕೂಲಗಳು ಸಮಸ್ಯೆಯೆನಿಸುತ್ತಿರಲಿಲ್ಲ.

''ಆದರೂ ಮರಗಟ್ಟಿಸುವಂಥಾ ಆ ದಿನಗಳನ್ನು ಬೆಚ್ಚಗೂ ಸುಖಪ್ರದವೂ ಆಗಿಸತಕ್ಕ ಮಾರ್ಗವನ್ನು ಕ್ರಮೇಣ ಹಸ್ ಕಂಡುಕೊಂಡರು'' ಎಂದು ಹೇಳಿ ಇಂದುಮತಿ ಮೌನವಹಿಸಿದಳು.

ಅವಳ ಮುಖದಲ್ಲಿ ಆಗ ಉದ್ವೇಗ ತುಂಬಿಕೊಂಡಿತ್ತು. 'ಅದೇನೆಂದು ಗೊತ್ತೇನು' – ಎಂದು ಪ್ರಶ್ನಿಸುವ ಹಾಗೆ ಅವಳು ಸುಮತಿಯ ಮುಖವನ್ನು ಸೂಕ್ಷ್ಮವಾಗಿ ದಿಟ್ಟಿಸಿದಳು. ಸುಮತಿ ತನ್ನ ಅಜ್ಞತೆಯನ್ನೇ ಬಹಿರಂಗಪಡಿಸುವ ಹಾಗೆ ಗೆಳತಿಯ ಮುಖದಲ್ಲಿ ದೃಷ್ಟಿ ನೆಟ್ಟು ಕುಳಿತಳಷ್ಟೇ.

''ಗೊತ್ತಾಗಲಿಲ್ಲವೇ ನಿನಗೆ? ಹಸ್ ನಮ್ಮ ಹಾಸಿಗೆಯನ್ನು ಇನ್ನೊಬ್ಬಳೊಂದಿಗೆ ಹಂಚಿಕೊಂಡರು. ನಮ್ಮ ಮದುವೆಗೆ ಮೊದಲೇ ಅವರೊಳಗೆ ಸಲಿಗೆ ಇತ್ತೆಂದೂ ಆ ಬಳಿಕ ನನಗೆ ಗೊತ್ತಾಯಿತು. ಆಕೆ ತವರ್ಮನೆಗೆ ಹೋಗ್ತೇನೆ ಎಂದು ಹೇಳಿ ಗಂಡನ ಮನೆಯಿಂದ ಬರುತ್ತಾಳೆ. ರಾತ್ರಿ ನಮ್ಮ ಮನೆಯಲ್ಲಿ ತಂಗುತ್ತಾಳೆ. ಬೆಳಗ್ಗೆ ಗಂಡನ ಮನೆಯಿಂದ ಬಂದವಳ ಹಾಗೆ ತವರ್ಮನೆಯನ್ನು ಸೇರುತ್ತಾಳೆ. ಈ ಆಟ ಹಲವು ಬಾರಿ ನಡೆದ ಬಳಿಕವಷ್ಟೇ ನನಗೆ ಗೊತ್ತಾದದ್ದು.

''ಆದರೆ ಶಶಿಗೆ ಆಗಲೇ ಇವೆಲ್ಲವೂ ಗೊತ್ತಿತ್ತು. ನಾನೂ ಮಕ್ಕಳೂ ಮರಳಿಬಂದ ಬಳಿಕ ಒಂದು ದಿನ ನಾನು ಈ ಬಗ್ಗೆ ಶಶಿಯೊಡನೆ ವಿಚಾರಿಸಿದೆ. ಹಸ್ ಮತ್ತು ನಾನು ಆ ಪ್ರಕರಣದ ಕುರಿತು ಭಾರೀ ಜಗಳ ನಡೆದ ಬಳಿಕವಾಗಿತ್ತು ಅದು.

''ತನಗೆ ಯಾವುದೂ ಗೊತ್ತಿಲ್ಲ – ಎಂದು ಹೇಳಿ ಶಶಿ ತಪ್ಪಿಸಿಕೊಂಡರು. ಹಲವು ದಿನಗಳ ತನಕ ಆದರ ಸಿಡಿಲು, ಗುಡುಗುಗಳು ಮುಂದುವರಿದುವು. ನನ್ನನ್ನು ಎದುರಿಸಲು ಕಷ್ಟವಾದುದರಿಂದಲೋ ಏನೋ – ಮುಂದೆ ಶಶಿಯ ಭೇಟಿಗಳ ಮಧ್ಯಾವಧಿಗಳು ದೀರ್ಘವಾಗತೊಡಗಿದುವು.

''ಎರಡು ವರ್ಷಗಳ ಹಿಂದಿನ ಜೂನ್ ತಿಂಗಳ ಕೊನೆಯ ಒಂದಿರುಳು : ಹಿಂದಿನ ದಿನ ಸಂಜೆಗೆ ಶುರುವಾಗಿದ್ದ ಹೊಸ ಮಳೆ ತಡೆಯಿಲ್ಲದೆ ಸುರಿಯುತ್ತಲೇ ಇತ್ತು. ಮಳೆಧಾರೆಯ ನಿರಂತರ ಹೊಡೆತಕ್ಕೆ ಭೂಮಿ ಸಂಪೂರ್ಣ ಕರಗಿಬಿಟ್ಟೀತೇನೋ ಎಂದೆನ್ನಿಸುತ್ತಿತ್ತು. ಮಧ್ಯಾಹ್ನ ಸಮೀಪಿಸುವಷ್ಟರಲ್ಲೇ ನದಿಯ ನೀರು ಮುಖ್ಯಮಾರ್ಗದ ಇಬ್ಬದಿಗಳನ್ನೂ ತುಂಗಲಿಕ್ಕಾಗಿ ನಾಲಿಗೆ ಚಾಚಿ ನೆಕ್ಕಲು ಶುರುಮಾಡಿತ್ತು. ಸಂಜೆಯಾದಾಗ ಮಾರ್ಗದ ತಗ್ಗಿದ ಭಾಗಗಳೆಲ್ಲ ನೀರಿನಲ್ಲಿ ಮುಳುಗಿದವು.

''ಆಗ ಕೂಡ ಮಳೆ ಬಿರುಸಾಗಿ ಹೊಡೆಯುತ್ತಿತ್ತು. ನದೀತೀರದ ಮರಗಿಡಗಳಿಂದಲೂ ಬಿದಿರ ಹಿಂಡುಗಳಿಂದಲೂ ಪ್ರವಾಹದ ಭಯಾನಕ ಸಪ್ಪಳ ಕೇಳಿಬರುತ್ತಿತ್ತು. ಪ್ರವಾಹಕ್ಕೆ ಸಿಲುಕಿ ಸತ್ತ ಜೀವಿಗಳ ಹೆಣಗಳೂ ತೇಲಿಬಂದ ಮರದ ದಿಮ್ಮಿಗಳೂ ಸುಳಿಯಲ್ಲಿ ಮುಳುಗುತ್ತಿರುವುದೂ ಚಿಲುಮೆಯಲ್ಲಿ ಚಿಮ್ಮುತ್ತಿರುವುದೂ ಕಾಣಸುತ್ತಿದ್ದುವು. ಮೀನಿಚ್ಚಿಲ್ ನದಿಯನ್ನು ಇಷ್ಟೊಂದು ಉಗ್ರರೂಪಿಣಿಯಾಗಿ ನಾನು ಹಿಂದೆಂದೂ ಕಂಡಿರಲಿಲ್ಲ.



''ರಾತ್ರಿಯಾದಾಗ ವಾತಾವರಣ ಮತ್ತಷ್ಟು ಭಯಾನಕವಾಯಿತು. ಸಿಡಿಲ ಸದ್ದುಗಳು ನೀರಿನಲ್ಲಿ ಪ್ರತಿಧ್ವನಿಸಿ ಇಮ್ಮಡಿಯಾಗುತ್ತಿದ್ದವು. ಕತ್ತಲೆಯ ಭಯಾನಕತೆಯನ್ನು ನೆನಪಿಸಲೆಂಬಂತೆ ಮರಗಳ ಸಂದಿಗಳಲ್ಲೂ ಕೂಡ ಮಿಂಚು ಇಣುಕಿ ನೋಡುತ್ತಿತ್ತು.

''ಮನೆಯಲ್ಲಿ ಆಗ ನಾನೂ ಮಕ್ಕಳೂ ಮಾತ್ರವೇ ಇದ್ದದ್ದು. ಹಸ್‌ಗೆ ಹೊಸ ನೀರಿನಲ್ಲಿ ಮೀನು ಹಿಡಿಯುವುದೆಂದರೆ ತಡೆಯಲಾಗದ ಆವೇಶ. ಮೀನು ತಿನ್ನದವರಿಗೆ ಕೂಡ ಅದೊಂದು ಲಹರಿಯೇ. ಹೊಸ ನೀರಿನಲ್ಲಿ ಎಣೆಯಾಡಲೆಂದು ಜಲಾಶಯಗಳಿಂದ ನುಗ್ಗಿ ಬರುವ ಮೀನುಗಳು ದಡಮೀರಿ ಹರಿಯುವ ನದೀ ನೀರಿನ ಮೂಲಕ ಕಾಲುವೆಗಳಿಗೂ ಹೊಲಗಳಿಗೂ ನುಗ್ಗುತ್ತವೆ. 'ಪುಲ್ಲಸ್', 'ಬಾಳೆ' ಮೊದಲಾದ ಮೀನುಗಳು ಗದ್ದೆಹುಣಿಗಳ ಮೇಲೆ ಬಾಲವೂರಿ ನೆಗೆಯುವ ದೃಶ್ಯ ನೋಡಲು ಊರ ಜನರು ಬಿರುಮಳೆಯನ್ನೂ ಲೆಕ್ಕಿಸದೆ ಗದ್ದೆಯಂಚುಗಳಲ್ಲಿ ಕೊಡೆಹಿಡಿದು ನಿಂತಿರುವ ದೃಶ್ಯಗಳು ಎಲ್ಲೆಡೆಯೂ ಗೋಚರಿಸುತ್ತಿದ್ದುವು.

''ಚೆಂಡಾಟ ಆಡುವವರ ಹಾಗೂ ನೋಡುವವರ ನಡುವಿನ ಅಂತರವಿರುತ್ತದೆ ಮೀನು ಹಿಡಿಯುವವರ ಹಾಗೂ ಹಿಡಿಯುವುದನ್ನು ನೋಡುವವರ ನಡುವೆ. ಹೊಸ ನೀರಿನಲ್ಲಿ ಮೀನು ಬೋನನ್ನಿರಿಸಿ ಮೀನು ಹಿಡಿಯುವುದರಲ್ಲಿ ಬಲು ನುರಿತವರು ಹಸ್. ಮೀನುಗಳು ನುಗ್ಗಿಬರುವಂಥ ದಾರಿಗಳೆಲ್ಲ ಅವರಿಗೆ ಚೆನ್ನಾಗಿ ಗೊತ್ತು. ತನ್ನ ಈ ಚಾತುರ್ಯವನ್ನು ತೋರ್ಪಡಿಸಲು ದೊರೆಯುವ ಸಂದರ್ಭಗಳೊಂದನ್ನೂ ಅವರು ಕಳಕೊಳ್ಳುತ್ತಿರಲಿಲ್ಲ. ಮೀನುಬೋನು ಸಹಿತ ಅವರು ಸಕಾಲದಲ್ಲೆ ಹೊಲಕ್ಕೆ ತಲುಪುತ್ತಿದ್ದರು.

''ಸಂಜೆ ಸಮೀಪಿಸುವಷ್ಟರಲ್ಲಿ ನದಿಗೆ ತಾಗಿಕೊಂಡಿರುವ ಸ್ಥಳಗಳೆಲ್ಲ ನೀರಿನಲ್ಲಿ ಮುಳುಗಿಬಿಟ್ಟದ್ದರಿಂದ ಕಾಲುವೆಯ ಅಂಚಿನ ಮೂಲಕ ಎರಡು ಕಿಲೋಮೀಟರಿನಷ್ಟು ಮೇಲ್ಭಾಗದಲ್ಲಾಯಿತು ಅಂದಿನ ಮೀನುಬೇಟೆಯ ತಾಣ. ಹಸ್‌ನ ತರವಾಡ್ ಮನೆ ಇರುವುದೂ ಆ ಕಡೆಯಲ್ಲೇ. ಆದುದರಿಂದ ಅಲ್ಲಿ ಒಟ್ಟಾದ ಸಹೋದರರು ಮತ್ತು ಸಹಚರರ ಜೊತೆಯಲ್ಲಾಗಿತ್ತು ಅಂದಿನ ಮೀನುಬೇಟೆ. ಆ ಮನೆಯಲ್ಲಿ ಬಹಳಷ್ಟು ಆಳು ಕಾಳುಗಳೂ ಇತರ ಅನುಕೂಲತೆಗಳೂ ಇರುವುದರಿಂದ, ಸಿಕ್ಕಿದ ಮೀನುಗಳ ಸಂಸ್ಕರಣ ನಡೆದದ್ದೂ ಅಲ್ಲೇ. ಎಲ್ಲವನ್ನೂ ಮುಗಿಸಿ ಬೆಳಗಾದ ಬಳಿಕವಷ್ಟೇ ಬರುವೆನೆಂದು ಹೋಗುವಾಗಲೇ ಹಸ್ ನನ್ನೊಡನೆ ಹೇಳಿದ್ದರು. ಸಮೀಪದಲ್ಲೆ ನಮ್ಮ ಸಂಬಂಧಿಕರ ಮನೆಯಿರುವುದರಿಂದ ನನಗೆ ರವಷ್ಟೂ ಭಯವೆನಿಸಲಿಲ್ಲ. ಹಿಂದಿನಿಂದಲೂ ಇದೇ ರೂಢಿಯಾಗಿತ್ತು.

''ಆಗಾಗ ಮಳೆಯ ಬಿರುಸು ಏರುಪೇರಾಗುತ್ತಲೇ ಇತ್ತು. ಮೀನು ಹಿಡಿಯುವವರಿಗೆ ಇದಾವುದೂ ಸಮಸ್ಯೆಯಾಗಿರಲಿಲ್ಲ. ಕಂಗಿನಹಾಳೆಯ ಟೋಪಿ ಹಾಗೂ ಚೌಕಳಿ ಲುಂಗಿಧಾರಿಗಳಾಗಿ ಅವರು ಬಿರಬಿರನೆ ಓಡಾಡುವುದನ್ನೂ ಮೀನು ನುಗ್ಗಿ ಬರುವಂಥ ಕಿರುತೋಡುಗಳಿಂದ ಹೊಲದ ಕಡೆಗಿರುವ ನೀರಹರಿವಿಗೆ ಅಡ್ಡವಾಗಿ ಬಲೆ ಹಿಡಿದುಕೊಂಡು ಗಂಟೆಗಟ್ಟಲೆ ಬಗ್ಗಿ ನಿಲ್ಲುವುದನ್ನೂ ಕಂಡರೆ ಮಳೆನೀರು ಮೈಮೇಲೆ ಬೀಳುತ್ತಿರುವುದರ ಪರಿವೆ ಕೂಡ ಅವರಿಗೆ ಇರುವಂತೆ ಅನ್ನಿಸುವುದಿಲ್ಲ.

''ಆಗ ರಾತ್ರಿ ಒಂಬತ್ತು ಗಂಟೆ ಆಗಿರಬಹುದು. ಮೀನಿಚ್ಚಿಲು ನದಿಯಿಂದ, ಮರಗಳ ಕೊಂಬೆಗಳೊಂದಿಗೆ ಸೆಣಸುತ್ತಿರುವ ಪ್ರವಾಹದ ಗರ್ಜನೆ ಕೇಳಿಸುತ್ತಿತ್ತು. ಎಲ್ಲೆಲ್ಲೂ ತುಂಬಿಕೊಂಡಿರುವ ನೀರಿನಲ್ಲಿ ಬಸ್ಸು ಮತ್ತು ಲಾರಿಗಳ ಸದ್ದುಗದ್ದಲ ಪ್ರತಿಧ್ವನಿಸಿದಾಗ ಅದು ಎಲ್ಲಿಂದ ಬರುತ್ತದೆ ಎಂದು ಊಹಿಸಲು ಕೂಡ ಸಾಧ್ಯವಾಗುತ್ತಿರಲಿಲ್ಲ. ಆ ವಾಹನಗಳು, ಮಾರ್ಗ ಸಂಪೂರ್ಣ ನೀರಿನಲ್ಲಿ ಮುಳುಗುವ ಮುನ್ನ ತಲುಪಬೇಕಾದಲ್ಲಿ ತಲುಪಲು ಶಕ್ತಿಮೀರಿ ದೌಡಾಯಿಸುತ್ತಿವೆ ಎಂಬುದು ಮಾತ್ರ ಸ್ಪಷ್ಟವಾಗುತ್ತಿತ್ತು. ಮಳೆ ತುಸು ತಗ್ಗಿತ್ತಾದರೂ ಗುಡುಗೂ ಮಿಂಚೂ ಅವಿರತವಾಗಿ ಮುಂದುವರಿಯುತ್ತಲೇ ಇದ್ದುವು.

''ಕೈಯಲ್ಲಿ ಕೊಡೆ ಇದ್ದೂ ಶಶಿ ಬಂದು ಚಾವಡಿ ಹೊಕ್ಕದ್ದು ಬಹುಪಾಲು ನೆನೆದುಕೊಂಡೇ. ಹಸ್ ಮನೆಯಲ್ಲಿ ಇಲ್ಲವೆಂದು ಗೊತ್ತಾದಾಗ ಶಶಿ ತೀರಾ ಮುಜುಗರಕ್ಕೊಳಗಾದರು. ಅಂದಿನ ಪರಿಸ್ಥಿತಿಯಲ್ಲಿ ನನ್ನನ್ನೆದುರಿಸಲು ಶಶಿಗೆ ಬಹಳ ಕಷ್ಟವಾಗುತ್ತಿತ್ತು. ನಾನು ಹಸ್‌ನ ರಹಸ್ಯಸಂಬಂಧದ ಕುರಿತು ಮುಕ್ತವಾಗಿ ವಿಚಾರಿಸಿದರೆ ಅಳುಕದೆ ಸುಳ್ಳು ಹೇಳಲು ಶಶಿಗೆ ಸಾಧ್ಯವಾಗುತ್ತಿರಲಿಲ್ಲ. ಸತ್ಯಹೇಳಲು ಆತ ತಯಾರೂ ಇರಲಿಲ್ಲ. ಶಶಿಯ ಕಷ್ಟ ಅರ್ಥಮಾಡಿಕೊಂಡ ನಾನು ಅಂತಹ ಒಂದು ಘಟನೆ ಸಂಭವಿಸಿದ್ದಾಗಿ ಕೂಡ ಅಂದು ಭಾವಿಸಲಿಲ್ಲ.

''ಹೇಗಾದರೂ ಸ್ವಂತ ಮನೆಗೆ ತಲುಪಲು ಸಾಧ್ಯವಾಗುತ್ತಿದ್ದರೆ ಶಶಿ ತಕ್ಷಣವೇ ಹೊರಟುಹೋಗುತ್ತಿದ್ದರು. ಆದರೆ, ಅದಕ್ಕೆ ಯಾವ ಸಾಧ್ಯತೆಯೂ ಇರಲಿಲ್ಲ. ಮಾರ್ಗಮಧ್ಯದ ಕಾಲುವೆಯ ಮೇಲಿನ ಮರದ ಸೇತುವೆ ಮಾತ್ರವಲ್ಲ ಇಬ್ಬದಿಗಳಲ್ಲೂ ಹಬ್ಬಿಕೊಂಡಿರುವ ಹೊಲಗಳ ಮಧ್ಯದ ಮಾರ್ಗವೂ ನೀರಿನಲ್ಲಿ ಮುಳುಗಿದ್ದುವು.

''ಶಶೀ, ಇನ್ನು ನಿಮಗೆ ಇವತ್ತು ಮನೆಗೆ ಹೋಗಲು ಸಾಧ್ಯವಾಗದು. ಮಾರ್ಗ ಒಂದು ಕಿಲೋಮೀಟರಿಗಿಂತಲೂ ಹೆಚ್ಚು ದೂರದ ತನಕ, ನೆಲೆ ಸಿಕ್ಕದಷ್ಟು ನೀರಿನಲ್ಲಿ ಮುಳುಗಿಬಿಟ್ಟಿದೆ. ನೀರಿನಮಟ್ಟ ಈಗಲೂ ಏರುತ್ತಲೇ ಇದೆ – ಎಂದು ನಾನು ಹೇಳಿದೆ.

''ನಾವು ಪ್ರಯಾಣಿಕರು ಗಂಟೆಗಳಿಗೂ ಹಿಂದೆಯೇ ಅಲ್ಲಿಯ ಬಸ್‌ಸ್ಟ್ಯಾಂಡ್‌ಗೆ ತಲುಪಿದ್ದೆವು. ಬಸ್ ಸಿಬ್ಬಂದಿ, ಮಾರ್ಗದಲ್ಲಿ ನೀರು ಇದೆ – ಎಂದು ಹೇಳಿ ಬಸ್ ಬಿಡಲಿಲ್ಲ. ಆಮೇಲೆ ಇಲ್ಲಿಂದ ಬಂದ ಬಸ್ಸಿನವರು ಹೇಳಿದ ಬಳಿಕವಷ್ಟೇ ಅಲ್ಲಿನವರು ಧೈರ್ಯವಹಿಸಿದ್ದು. ತಲುಪುವಷ್ಟಾದರೂ ತಲುಪಲಿ ಎಂದು ಹೇಳಿ ನಾವು ಪ್ರಯಾಣಿಕರೂ ಒತ್ತಾಯ ಮಾಡಿದೆವು – ಎಂದರು ಶಶಿ.

''ನಾನು ಶಶಿಗೆ ಬದಲಾಯಿಸಲು ವಸ್ತ್ರ ಮತ್ತು ಮೈ ಒರೆಸಲು ಟವಲ್ ಕೊಟ್ಟೆ. ಹ್ಯಾಂಗರ್ ತಂದು ಒದ್ದೆ ಶರಟನ್ನು ಕಳಚಿಕೊಡಲು ಹೇಳಿದಾಗ, ಶಶಿ ತುಸು ಹಿಂಜರಿದರು.

''ಜೇಬಿನಲ್ಲಿ ತುಂಬಾ ದುಡ್ಡಿದ್ದು, ಅದನ್ನು ನಾನು ಲಪಟಾಯಿಸಿಕೊಂಡೇನು ಎಂಬ ಭಯ ಇರಬಹುದು ಅಲ್ವಾ – ಕಳಚಿದ ಶರಟು ಇಸಿದುಕೊಳ್ಳುವಾಗ ನಾನು ಹೇಳಿದೆ. ಶಶಿ ಪ್ರತಿಭಟಿಸುವಂತೆ ನನ್ನತ್ತ ನೋಡಿದರು, ಅಷ್ಟೇ.

''ಶರಟು ಚಾವಡಿಯಲ್ಲಿ ಇಡಬೇಡವೆಂದು ಅನ್ನಿಸಿದ್ದರಿಂದ ಹೇಳಿದ್ದು. ಮೊನ್ನೆ ನಿಮ್ಮ ಸ್ನೇಹಿತರ ಹೊಸ ಶರಟೊಂದು ನಸುಕು ಹರಿಯುವಷ್ಟರಲ್ಲೇ ಮಾಯವಾಗಿತ್ತು – ಎಂದೆ.

ಶಶಿ ವಸ್ತ್ರಗಳನ್ನು ಬದಲಾಯಿಸಿ ನಾನು ಕೊಟ್ಟ ಟರ್ಕಿ ಟವಲ್ ಹೊದ್ದುಕೊಂಡು ವರಾಂಡದಲ್ಲಿ ಪತ್ರಿಕೆಗಳನ್ನು ಮಗುಚುತ್ತಾ ಕುಳಿತುಕೊಂಡರು. ನಾನು ಬಿಸಿ ಬಿಸಿ ಚಹಾ ಮತ್ತು ಚಪಾತಿ ಸಿದ್ಧಪಡಿಸಿ ಶಶಿಯನ್ನು ಭೋಜನಕೋಣೆಗೆ ಆಹ್ವಾನಿಸಿದೆ.

''ನನಗೆ ಚಹಾ ಮಾತ್ರ ಸಾಕು. ಅದನ್ನು ಇಲ್ಲೇ ಕೊಟ್ಟು ಬಿಡು – ಎಂದರು ಶಶಿ.

''ಗಂಟೆಗಟ್ಟಲೆ ಬಸ್‌ಸ್ಟ್ಯಾಂಡ್‌ನಲ್ಲಿ ನಿಂತದ್ದಲ್ವಾ ? ಬಿಸಿ ಚಪಾತಿ ತಯಾರಿಸಿದ್ದೇನೆ, ತಿನ್ನಿರಲ್ಲ. ನಿಮ್ಮ ಸ್ನೇಹಿತರ ಕುರಿತು ಹೇಳಲು ಕಷ್ಟವಾಗುವುದೇನನ್ನೂ ನಾನು ಕೇಳುವುದಿಲ್ಲ. ಧೈರ್ಯವಾಗಿ ಬನ್ನಿ – ಎಂದು ನಾನು ನಗುತ್ತ ಹೇಳಿದೆ. ಶಶಿಯೂ ನಕ್ಕರು. ಆ ನಗೆಯಲ್ಲಿ ಸಾಂತ್ವನದ ಸುಖ ಬೆರೆತಿರುವಂತೆ ನನಗನ್ನಿಸಿತು.

''ಶಶೀ, ನಿಮಗೆ ಮದುವೆಯಾಗಬೇಡವೇ ? ನನ್ನ ಗೆಳತಿಯ ತಂಗಿಯೊಬ್ಬಳಿದ್ದಾಳೆ. ನಿಮಗೆ ಚೆನ್ನಾಗಿ ಹೊಂದುತ್ತಾಳೆ. ನೀವು ಒಪ್ಪುವುದಾದರೆ ನಾನು ವಿಚಾರಿಸ್ತೇನೆ – ಊಟದ ಮೇಜಿನ ಮುಂದೆ ಶಶಿಯ ಎದುರಿನ ಕುರ್ಚಿಯಲ್ಲಿ ಕುಳಿತು ನಾನು ಹೇಳಿದೆ.

''ಸದ್ಯ ಮದುವೆಯ ಯೋಚನೆ ಇಲ್ಲ. ಕೆಲಕಾಲ ಕಳೆಯಲಿ – ಎಂದರು ಶಶಿ.

''ಯಾಕೆ, ಮದುವೆಪ್ರಾಯ ಆಗಿಲ್ಲವೆಂದೋ – ನಾನು ಮಾತು ಪೂರ್ತಿಗೊಳಿಸುವ ಮೊದಲೇ ಶಶಿ ಗೊಳ್ಳನೆ ನಕ್ಕರು.

''ಓ! ನಿಮ್ಮ ಕಷ್ಟ ನನಗೆ ಗೊತ್ತಾಯ್ತು. ವಧು ಶೋಧನೆಗೆ ಮುನ್ನ, ಆ ಗಂಡ ಬಿಟ್ಟಿರುವ ಅಕ್ಕನಿಗೆ ಒಬ್ಬ ಗಂಡನ್ನು ಶೋಧಿಸಬೇಕಾದೀತು. ಹಾಗಾದರೆ ಅದನ್ನೂ ಹೊಂದಿಸಬಹುದು – ಎಂದೆ.

''ಆಗ ಕೂಡ ಶಶಿ ನಕ್ಕರಾದರೂ ಕೈಯಲ್ಲಿದ್ದ ಚಪಾತಿ ತುಣುಕನ್ನು ಬಾಯಿಗೆ ತಲುಪಿಸಲು ಸಾಧ್ಯವಾಗದೆ ಮೈಮರೆತು ಕುಳಿತುಬಿಟ್ಟ ದೃಶ್ಯವನ್ನು ನಾನು ಕುತೂಹಲದಿಂದ ದಿಟ್ಟಿಸಿದೆ.

''ನಾನು ಈ ಗುಟ್ಟನ್ನು ಅರಿತದ್ದು ಹೇಗೆಂದು ಗಾಬರಿಯಾಗಬೇಕಾಗಿಲ್ಲ. ನೀವು ಇಲ್ಲಿ ಮೊದಲ ಬಸ್ ತಲುಪುವುದಕ್ಕೂ ಮೊದಲೇ ಬಂದು ಮಲಗುತ್ತಿದ್ದದ್ದು ನನಗೆ ಗೊತ್ತಾಗ ಲಾರದೇ ? ಒಳಗುಟ್ಟನ್ನು ಹೊರತೆಗೆಯುವುದರಲ್ಲೂ ನಾನು ಕಳಪೆಯೇನೂ ಅಲ್ಲ – ಎಂದೆ.

''ನೀವು ಇಬ್ಬರೂ ಬೇಡಿಕೆದಾರರೇ. ಆದುದರಿಂದ ಅದೊಂದು ಪರಸ್ಪರ ಸಹಕಾರ ಚಟುವಟಿಕೆಯಷ್ಟೇ. ಅದರಲ್ಲಿ ಅಸಾಮಾನ್ಯವಾದುದು ಏನೂ ಇಲ್ಲ. ಆದರೆ, ಹೇಳತಕ್ಕ ಕುಂದುಕೊರತೆ ಯಾವುದೂ ಇಲ್ಲದ ಹೆಂಡತಿ ಇರುವವರು ಕೂಡ ಯಾಕೆ ಅಂಥದ್ದಕ್ಕೆ ಹೋಗುತ್ತಾರೆ ? ಬದಲಾವಣೆಯ ಚಪಲಕ್ಕೇ, ಅಲ್ವೇ ?

''ಆಗ ಕೂಡ ಶಶಿ ಯಾವ ಮಾತೂ ಆಡಲಿಲ್ಲ. ಮಾತ್ರ, ಸಭೆಯೊಂದರಲ್ಲಿ ಬತ್ತಲೆಯಾಗಿ ನಿಲ್ಲಿಸಲ್ಪಟ್ಟಂತೆ ಆತ ನಾಚಿಕೆಯಿಂದ ಒದ್ದಾಡುತ್ತಿರುವುದನ್ನು ನಾನು ಕಂಡೆ; ಕಂಡು ಮನದೊಳಗೆ ಖುಷಿಪಟ್ಟೆ.

''ಓ! ನಾನಿತ್ತ ಆಶ್ವಾಸನೆಯನ್ನು ಮುರಿದುಬಿಟ್ಟೆ. ಇಲ್ಲ, ನಾನು ಆ ವಿಷಯವನ್ನು ಎತ್ತುವುದೇ ಇಲ್ಲ, ಆಯ್ತಾ – ಎಂದೆ.

''ಶಶಿ ಆಹಾರ ಸೇವಿಸಿ, ವರಾಂಡಕ್ಕೆ ಬಂದು ಕುಳಿತ ಬಳಿಕ ನಾವು ಬಹಳಷ್ಟು ಮಾತನಾಡಿದೆವು. ಮಳೆ ಪುನಃ ಬಿರುಸಾಗಿ ಸುರಿಯತೊಡಗಿತು. ನದಿಯಿಂದ ಪ್ರವಾಹದ ಗರ್ಜನೆ ಕೇಳಿಸುತ್ತಿತ್ತು. ಆಚೆಬದಿಯ ಹೊಲಗಳಿಂದ ದೋಣಿಯಾಟ ಆಡುವವರ ಹಾಡು ಕೂಡ ಕೇಳಿ ಬರುತ್ತಿತ್ತು. ವಿಶಾಲವಾದ ಜಲಾಶಯದಂತೆ ವಿಸ್ತಾರಗೊಂಡಿರುವ ಜಲ ಪ್ರಳಯದಲ್ಲಿ ದೋಣಿ ನಡೆಸುವುದಕ್ಕಿಂತ ನದೀತೀರದ ಹಿತ್ತಿಲುಗಳ ನೀರಿನಲ್ಲಿ ಮುಳುಗಿ ರುತ್ತಿದ್ದ ನೇಂದ್ರಬಾಳೆಯ ಗೊನೆಗಳನ್ನೂ ದೋಣಿಯಲ್ಲಿ ನಿಂತರೆ ಕೈಗೆಟಕುತ್ತಿರುವ ತೆಂಗಿನ ನೇಂದ್ರ ಗೊನೆಗಳನ್ನೂ ಕದಿಯುವುದರಲ್ಲಾಗಿತ್ತು ಕೆಲವರಿಗೆ ಹೆಚ್ಚಿನ ಆಸಕ್ತಿ.

''ದೋಣಿಕಾರರು ಹತ್ತಿರ ಬಂದಾಗ ಅವರ ಹಾಡನ್ನು ಗಮನಿಸುತ್ತಾ ನಾವು ನಿಶ್ಶಬ್ದ ಕುಳಿತೆವು –

''ಜಡೀ... ಜಡೀ... ಮಳೆಯೂ। ಬಾಗಿಲಿಕ್ಕಿದಾ ಮನೆಯೂ।

ಅಂದಚಂದದಾ ಹೆಣ್ಣೂ! ಹಾ !... ಹಾ !... ಹಾ !...'

''ಅವರ ಹಾಡು ಒಮ್ಮೊಮ್ಮೆ ಸಭ್ಯತೆಯ ಎಲ್ಲೆಯನ್ನು ಉಲ್ಲಂಘಿಸುತ್ತಿತ್ತು. ಆಗ ನಾನು ಶಶಿಯ ಮುಖಭಾವವನ್ನು ಗಮನಿಸುತ್ತಿದ್ದೆ – ಆತ ಅದರಿಂದ ಮೋಜಾಗಲಿ ಮುಜುಗರ ವಾಗಲಿ ಅನುಭವಿಸುತ್ತಿರುವುದಾಗಿ ನನಗನ್ನಿಸಲಿಲ್ಲ.

''ಇನ್ನು ನಾವು ಮಲಗೋಣ – ಶಶಿಗೆ ನಿದ್ದೆ ಬರುತ್ತಿದೆಯೆಂದು ಅನ್ನಿಸಿದಾಗ ನಾನು ಹೇಳಿದೆ. ಬಳಿಕ ಚಾವಡಿಯ ಹಾಸಿಗೆ ಬಿಡಿಸಿ ಹೊಸ ಚಾದರ ಹಾಸಿದೆ; ಹೊದಿಕೆಯನ್ನು ಅರ್ಧ ಬಿಡಿಸಿ ಕಾಲಬದಿಯಲ್ಲಿ ಇರಿಸಿದೆ.

''ನಾನು ಶಶಿಯನ್ನು ಮಲಗಲು ಆಹ್ವಾನಿಸಿದ ಬಳಿಕ ನನ್ನ ಮಲಗುವ ಕೋಣೆಗೆ ಹೋದೆ. ಮಕ್ಕಳ ಹೊದಿಕೆ ಸರಿಪಡಿಸಿದ ನಂತರ ನಾನು ಮಲಗಿದೆ.

''ನನಗೆ ರವಷ್ಟೂ ನಿದ್ರಿಸಲು ಸಾಧ್ಯವಾಗಲಿಲ್ಲ. ಹೊರಗೆ ಮಳೆಯ ಬಿರುಸು ತಗ್ಗಿತ್ತಲ್ಲದೆ ಅಲ್ಪಸ್ವಲ್ಪ ಮಬ್ಬು ಬೆಳಕು ಹಬ್ಬಿತ್ತು. ಕತ್ತಲ ಪ್ರಳಯದ ಬದಲು ಸುತ್ತಲೂ ಮರಗಳಿಂದ ದಟ್ಟವಾದ ಘೋರಾರಣ್ಯ ಕಾಣಿಸತೊಡಗಿತು. ಎತ್ತರದ ಮರಗಳನ್ನು ಮಾತ್ರ ಗುರುತಿಸ ಬಹುದಾಗಿತ್ತು. ನದಿಯಿಂದ ಹೊಮ್ಮುವ ಪ್ರವಾಹದ ಸದ್ದು ಹಿಂದಿನಂತೆಯೇ ಇತ್ತು. ಗುಡುಗು ಕಡಿಮೆಯಾಗಿದ್ದರೂ ಆಗಾಗ ಮಿಂಚು ಮಿಂಚುತ್ತಿತ್ತು. ಸುಖಕರವಾದ ಚಳಿ.

''ಹಾಗೇ ಒಂದು ತಾಸು ಕಳೆದಿರಬಹುದು. ಗಡಿಯಾರ ಹನ್ನೊಂದು ಬಾರಿಸಿತು.

''ಪ್ರಜ್ಞಾಪೂರ್ವಕ ಅಲ್ಲವಾದರೂ ನಾನು ಸಾವಕಾಶ ಎದ್ದೆ. ಮಕ್ಕಳಿಗೆ ಗಾಢನಿದ್ದೆ. ಬಾಗಿಲು ತೆರೆದು ಹೊರಬಿದ್ದ ಬಳಿಕ ಸದ್ದಾಗದಹಾಗೆ ಕದಗಳನ್ನು ಮುಂದೆಮಾಡಿದೆ. ಬಳಿಕ ನನ್ನ ಕಾಲುಗಳು ಮೆಲ್ಲಗೆ ಚಾವಡಿಯತ್ತ ಸಾಗಿದವು.

''ಚಾವಡಿಯ ಮುಂಭಾಗದ ದಬ್ಬೆದಾರಂದವನ್ನು ಹಿಡಿದು ನಿಂತುಕೊಂಡೆ. ಶಶಿಯೂ ಎಚ್ಚರವಾಗಿಯೇ ಮಲಗಿರುವರೇನೋ ? ಗೊರಕೆ ಹೊಡೆಯುತ್ತಾ ಇಲ್ಲ. ಶ್ವಾಸೋಚ್ಛ್ವಾಸ ಗಳನ್ನು ಗಮನಿಸಿದೆ. ನಿದ್ರಿಸುವ ಹಾಗೆ ಕಾಣಿಸಲಿಲ್ಲ. ನಿದ್ರಿಸುವುದೋ ಎಚ್ಚರವಾಗಿರು ವುದೋ – ಯಾವುದು ಒಳ್ಳೆಯದು ಎಂದು ಯೋಚಿಸಿದೆ. ಹೇಗೇ ಆದರೂ ಎಚ್ಚರವಾಗದೆ ಇರುವುದಿಲ್ಲವಲ್ಲ. ಆಗ ಏನೆಂದುಕೊಳ್ಳುವರೋ ? ನನ್ನನ್ನು ಅಭಿಸಾರಿಕೆ ಎಂದುಕೊಳ್ಳುವ ಬಗ್ಗೆ ಆಗ ನನ್ನ ವಿರೋಧವಿರಲಿಲ್ಲ. ಪ್ರತಿಭಟಿಸುತ್ತಾ ಹಾಗೂ ಕೆರಳುತ್ತಾ ಅಪಮಾನಿ ಸುತ್ತಾರೋ ಎಂಬುದಾಗಿತ್ತು ನನ್ನ ಆತಂಕ. ಅಂದಿನವರೆಗಿನ ವರ್ತನೆಯಿಂದಾಗಿ, ಅದು ಅಸಂಭಾವ್ಯವಲ್ಲವೆಂದೇ ನನಗನ್ನಿಸಿತ್ತು.

''ನಾನು ಎಷ್ಟು ಹೊತ್ತು ಅಲ್ಲೇ ನಿಂತುಕೊಂಡಿದ್ದೆನೆಂದು ಖಚಿತವಿಲ್ಲ. ಆಮೇಲೆ ಮೆಲ್ಲನೆ ಮುಂದಕ್ಕೆ ಸಾಗಿ ಶಶಿಯ ಹಾಸಿಗೆಯ ಹತ್ತಿರವೇ ನಿಂತುಕೊಂಡೆ. ಬಳಿಕ ಕೈ ಚಾಚಿ ಆತನ ಹೆಗಲಮೇಲೆ ಇರಿಸಿದೆ.

''ಶಶಿ ನನ್ನ ಕೈಯನ್ನು ಮೆಲ್ಲಗೆ ಹಿಡಿದರು. ಆ ಹಿಡಿತದಲ್ಲಿ ಸಮ್ಮತಿಯಾಗಲಿ ಅಸಮ್ಮತಿ ಯಾಗಲಿ ಇರಲಿಲ್ಲ. ತೀರಾ ತಣ್ಣಗಿನ ಪ್ರತಿಕ್ರಿಯೆ. ಆತ ನಿದ್ರಿಸಿರಲಿಲ್ಲವೆಂದೂ ನಾನು ಹೊರಗೆ ಅನುಮಾನಿಸುತ್ತಾ ನಿಂತಿದ್ದ ಅಷ್ಟು ಹೊತ್ತೂ ತಾನು ಏನು ಮಾಡಬೇಕು ಎಂಬುದರ ಕುರಿತೇ ಯೋಚಿಸುತ್ತಿದ್ದರೆಂದೂ ನನಗೆ ಗೊತ್ತಾಯಿತು.

''ನಾನು ಸಾವಕಾಶ ಶಶಿಯ ಶರೀರದತ್ತ ವಾಲಿದೆ – ಸೋತವಳೂ ಶರಣಾರ್ಥಿಯೂ ಆಗಿ. ಆ ನೆಲೆಯಲ್ಲೇ ಆತ ನನ್ನನ್ನು ಸ್ವೀಕಾರಮಾಡಿದ್ದೆಂದೂ ನನಗೆ ಅನ್ನಿಸುತ್ತಿದೆ. ಮಲಗಿದ್ದಂತೆಯೇ ತುಸು ಪಕ್ಕಕ್ಕೆ ಸರಿದು ನನಗೋಸುಗ ಹಾಸಿಗೆಯಲ್ಲಿ ಸ್ಥಳಾವಕಾಶ ಕಲ್ಪಿಸಿದರು. ನಂತರ ನನ್ನನ್ನು ಹಿಡಿದು ಪಕ್ಕದಲ್ಲಿ ಮಲಗಿಸಿದರು. ನಾನು ಶಶಿಗೆ ಒತ್ತಿಕೊಂಡೇ ಮಲಗಿ ಕೈಯೆತ್ತಿ ಆತನ ಬೆನ್ನು ಸವರಿದೆ. ಅಷ್ಟು ಬಿಗಿಯಾಗಿ ಅಲ್ಲವಾದರೂ ಶಶಿಯ ತೋಳೂ ನನ್ನ ಮೈಯನ್ನು ಬಳಸಿತು.

''ನನ್ನ ಹೃದಯದ ತುಂಬ ಕೃತಜ್ಞತೆ ತುಂಬಿತ್ತು. ನಾನು ಬಿಕ್ಕಿ ಬಿಕ್ಕಿ ಅತ್ತೆ. ಕ್ರಮೇಣ ಗಟ್ಟಿಯಾಗಿ ಅತ್ತುಬಿಡುವೆನೇನೋ ಎಂದು ಹೆದರಿದ್ದೆ. ಬಹಳ ಹೆಣಗುತ್ತಾ ಅಳುವನ್ನೂ ಶಬ್ದವನ್ನೂ ತಡೆಹಿಡಿದೆ. ನಾನು ತೇಕುತ್ತಾ ಗದ್ಗದಿಸುತ್ತಾ ಇರುವಾಗ ಶಶಿ ನನ್ನನ್ನು ಎದೆಗವಚಿ ಒತ್ತಿ ಹಿಡಿದರು. ಅದು ಎಷ್ಟೊಂದು ನೆಮ್ಮದಿದಾಯಕವಾಗಿತ್ತು ಎಂಬುದನ್ನು ನಾನು ಹೇಗೆ ವಿವರಿಸಲಿ !

''ಶಶೀ, ನೀವು ನನ್ನನ್ನು ಕ್ಷಮಿಸೋದಿಲ್ವೇ, ಕ್ಷಮಿಸೋದಿಲ್ವೇ – ಎಂದು ನಾನು ಪದೇ ಪದೇ ಹಲುಬಿದೆ. ಆಗ ನಾನು ಓರ್ವ ಭ್ರಮಿಷ್ಠಳಂತೆಯೇ ಇದ್ದೆ. ಆ ವರ್ತನೆಗಳಾವುದೂ ಪ್ರಜ್ಞಾಪೂರ್ವಕ ಆಗಿರಲಿಲ್ಲವೆಂಬುದಂತೂ ಖಚಿತ.

''ಬಿಡು ! ಅಳಬೇಡ, ಇದರಲ್ಲಿ ಕ್ಷಮಿಸಬೇಕಾದ ಅಪರಾಧವೇನೂ ಇಲ್ಲ – ಎನ್ನುತ್ತ ಶಶಿ ನನ್ನನ್ನು ಮತ್ತೂ ಮತ್ತೂ ಸಂತೈಸಿದರು.

''ಕ್ರಮೇಣ ನನ್ನ ಮನಸ್ಸು ಶಾಂತವಾಯಿತು. ಶಶಿ ನನ್ನನ್ನು ತೊರೆಯುವುದಿಲ್ಲವೆಂದು ಗೊತ್ತಾದಾಗ ನಾನು ಸಮಾಧಾನದೊಂದಿಗೆ ಆತನ ಮೈಗೆ ಅಂಟಿಕೊಂಡು ಮಲಗಿದೆ.

''ಆಗಲೂ ಶಶಿಯ ನಿರ್ವಿಕಾರಭಾವ ನನ್ನನ್ನು ಆತಂಕಕ್ಕೆ ಗುರಿಪಡಿಸಿತ್ತು. ಅದನ್ನೊಮ್ಮೆ ಮಾರ್ಪಡಿಸಲು ಹವಣಿಸಿದಾಗಲೆಲ್ಲ ನನ್ನ ಕೈಗಳನ್ನು ಕದಲಿಸಲಾಗದ ಹಾಗೆ ಶಶಿ ನನ್ನನ್ನು ಎದೆಗೆ ಅಪ್ಪಿಹಿಡಿದರು. ಅದು ಪ್ರಣಯ ಪ್ರಕಟನೆ ಅಲ್ಲವೆಂದೂ ಪ್ರತಿಬಂಧಕ ಪ್ರಯತ್ನವೆಂದೂ ಗೊತ್ತಾದಾಗಲಂತೂ ನಾನು ಗಟ್ಟಿಯಾಗಿಯೇ ಅತ್ತುಬಿಟ್ಟೆ. ಸ್ತ್ರೀತ್ವವನ್ನು ಕಳಕೊಂಡ ಒಂದು ನಪುಂಸಕವಾಗಿ ನಾನು ಮಾರ್ಪಡುತ್ತಿರುವಂತೆ ನನಗನ್ನಿಸಿತು. ಆಗ ನಿಜಕ್ಕೂ ನಾನು ಗೋಳೋ ಎಂದು ಅತ್ತುಬಿಟ್ಟೆ.

''ಇಂದುಮತೀ, ನಾವು ಈ ಹಂತದಲ್ಲೇ ಇದನ್ನು ಕೊನೆಗೊಳಿಸೋಣ. ನಾನು ನಿನ್ನನ್ನು ಅಪಾರ್ಥಮಾಡೋಲ್ಲ. ನಿನ್ನ ಮೇಲೆ ತಪ್ಪು ಹೊರಿಸೋಲ್ಲ. ನಮ್ಮಿಬ್ಬರ ಹೊರತು ಇದು

ಯಾರಿಗೂ ಗೊತ್ತಾಗೋಲ್ಲ. ನಾನು ಆಣೆ ಮಾಡಿ ಹೇಳ್ತೇನೆ. ಈಗಲೂ ನಿನ್ನನ್ನು ನನ್ನ ಪ್ರೇಯಸಿಯಾಗಿ ಕಾಣಲು ನಾನು ಸಮರ್ಥನಾಗಿಲ್ಲ. ನಾನೊಬ್ಬ ಬ್ರಹ್ಮಚಾರಿಯಲ್ಲವೆಂದು ನಿನಗೆ ಗೊತ್ತು. ಅದಕ್ಕೆ ನಾನು ಅಷ್ಟೇನೂ ಮಹತ್ವ ಕಲ್ಪಿಸುತ್ತಲೂ ಇಲ್ಲ. ಆದರೆ, ತಾಯಿಯನ್ನೂ, ಸಹೋದರಿಯನ್ನೂ, ಮಿತ್ರನ ಪತ್ನಿಯನ್ನೂ ಅವರವರನ್ನಾಗಿಯೇ ಕಾಣಬಲ್ಲ ವಿವೇಕವನ್ನು ದೇವರು ನನಗೆ ಕೊಟ್ಟಿದ್ದಾನೆ. ಒಂದು ಗಿಡುಗ ಕೂಡ ತಾನು ನೆಲೆಸಿರುವ ನಿವೇಶನದವರ ಕೋಳಿಮರಿಯನ್ನು ಎಗರಿಸುವುದಿಲ್ಲವೆಂದು ಕೇಳಿದ್ದೇನೆ. ಅಷ್ಟಾದರೂ ಸಜ್ಜನಿಕೆ ಮನುಷ್ಯರಾದ ನಾವು ತೋರಿಸಬೇಡವೇ – ಎಂದರು ಶಶಿ.

''ಈ ಹಂತಕ್ಕೆ ತಲುಪಿದಾಗ, ನಾನು ಭಾವಜೀವಿಯೋ ಭ್ರಮಿಷ್ಠಳೋ ಅಲ್ಲದಾದೆ. ಶಶಿಯಲ್ಲಿ ಈಗ ಪ್ರವರ್ತಿಸುತ್ತಿರುವುದು ಆದರ್ಶಭ್ರಾಂತು. ಅದು ಹೆಚ್ಚು ಹೊತ್ತು ಸ್ಥಿರವಾಗಿ ಉಳಿಯದು. ಬುದ್ಧಿಯ ಬೋಧನೆಗೆ ವಿಧೇಯವಾಗಿ ಕಾಮವನ್ನು ಅಮುಕಲೆತ್ನಿಸುವ ಓರ್ವ ಯುವಕನ ಮುಂದೆ ನನ್ನ ಹೆಣ್ತನ ಸೋಲಕೂಡದು. ಹೆಣ್ಣಿನ ಸ್ತ್ರೈಣಭಾವಗಳು ಅವಳಿಗೆ ಒಂದು ಅಲಂಕಾರವಷ್ಟೇ ಅಲ್ಲ; ಆಯುಧವೂ ಹೌದು. ಅದು ಬಡ್ಡಾದಬಳಿಕ ಬದುಕಿ ಏನು ಪ್ರಯೋಜನ ?

''ನಾನು ಶಶಿಯ ಬೋಧನೆಯನ್ನು ಒಪ್ಪಿದ್ದರಿಂದಲೇ ಎಂಬಂತೆ ಒಂದಷ್ಟು ಹೊತ್ತು ನಿಶ್ಚಲ ಮಲಗಿದೆ. ನಂತರ ಆತನಿಗೆ ಕಚಗುಳಿ ಹಾಕಲು ಹವಣಿಸಿದೆ. ಪ್ರತಿಬಾರಿಯೂ ಆತನ ಪ್ರತಿರೋಧ ಸಾಮರ್ಥ್ಯ ತಗ್ಗುತ್ತಿರುವುದನ್ನು ಕುತೂಹಲದೊಂದಿಗೇ ಗಮನಿಸಿದೆ. ಕೊನೆಗೂ ಆತ ಸೋಲೊಪ್ಪಿದರು. ದಿಢೀರನೆ ಕಟ್ಟೆಯೊಡೆದು ನುಗ್ಗತೊಡಗಿತು ಆತ ತಡೆದು ನಿಲ್ಲಿಸಿದ್ದ ಕಾಮಾವೇಶ.

''ನದಿಯಿಂದ ಆಗಲೂ ಪ್ರವಾಹದ ಗರ್ಜನೆ ಹೊಮ್ಮುತ್ತಿತ್ತು. ಮರಗಳ ನೆತ್ತಿಯ ಮೇಲೆ ಮಿಂಚು ಹೊಳೆಹೊಳೆಯುತ್ತಿತ್ತು. ಕ್ರಮೇಣ ನಾನು ನದಿಯಾಗಿ ಮಾರ್ಪಟ್ಟೆ. ಎಲ್ಲವನ್ನೂ ನನ್ನ ಸುಳಿಯಲ್ಲಿ ಮುಳುಗಿಸಿದೆ; ಚಿಲುಮೆಯಲ್ಲಿ ಚಿಮ್ಮಿಸಿದೆ. ನಾನು ಬರಸಿಡಿಲಾದೆ; ಬಿರುಗಾಳಿಯಾದೆ; ಮುಂಗಾರುಮಳೆಯಾದೆ; ಯುಗಾಂತ ಪ್ರಳಯವಾಗಿ ಭೂಮಂಡಲವನ್ನೇ ಮುಚ್ಚಿಬಿಟ್ಟೆ. ಕೊನೆಗೆ ನಾನು ನಾನೇ ಆದೆ; ಶಶಿಯ ಎದೆಯ ಮೇಲೆ ಬಳಲಿ ಬಿದ್ದುಕೊಂಡೆ.

''ಮಳೆ ಸಂಪೂರ್ಣ ದೂರವಾಯ್ತು. ತೋಯ್ದ ಹಸಿರೆಲೆಗಳಲ್ಲಿ ಬೆಳ್ಳಿಯನ್ನು ಕರಗಿಸಿ ಸುರಿಯುತ್ತಾ ಚಂದ್ರನು ಮೂಡಣದಲ್ಲೇರಿದನು. ನದಿಯ ಸದ್ದು ಮಾತ್ರ ಆಗಲೂ ಜೋರಾಗಿತ್ತು.

''ಇಲ್ಲಿ ತುಂಬಾ ಬೆಳಕಿದೆ. ಒಳಗೆ ಹೋಗುವಾ – ನಾನು ಶಶಿಯನ್ನು ಮನೆಯ ಒಳಗಡೆಗೆ ಕರೆದೆ. ಶಶಿಗೆ ಮೊದಮೊದಲು ಅದು ಒಪ್ಪಿಗೆಯಾಗಲಿಲ್ಲ. ಆತನ ಎಲ್ಲಾ ಎದುರುವಾದಗಳಿಗೂ ನಾನು ತೃಪ್ತಿದಾಯಕವಾದ ಉತ್ತರ ನೀಡಿದೆ. ಆಮೇಲೆ ಎದ್ದು ಆತನ ಕೈಹಿಡಿದುಕೊಂಡು ಮನೆಯೊಳಗೆ ಹೋದೆ.

''ನನ್ನ ಗಂಡನ ಹಾಸಿಗೆಯಲ್ಲಿ ಶಶಿಯನ್ನು ಮಲಗಿಸಿ ನಾನೂ ಜೊತೆಯಲ್ಲಿ ಮಲಗಿದಾಗಲಷ್ಟೇ ಅದರಲ್ಲಡಗಿದ್ದ ಪ್ರತೀಕಾರ ನನ್ನ ಅರಿವಿಗೆ ಬಂದದ್ದು.

''ಶಶಿ ಬಹಳಷ್ಟು ಯೋಚಿಸಿದ ಬಳಿಕವೇ ನನ್ನನ್ನು ಹಿಡಿದು ಪಕ್ಕದಲ್ಲಿ ಮಲಗಿಸಿದ್ದರೆಂದೂ ಹಾಗೆ ಮಾಡದಿದ್ದರೆ ನಾನು ಹೋಗಿ ಆತ್ಮಹತ್ಯೆ ಮಾಡಿಯೇನೆಂದು ಆತ ಹೆದರಿದ್ದರೆಂದೂ ಆಮೇಲೆ ನನ್ನೊಡನೆ ಹೇಳಿದರು.

''ಹಾಗೆ ಎರಡು ವರ್ಷಗಳ ಹಿಂದೆ ಆರಂಭಿಸಿದ್ದ ಆ ಸಂಬಂಧ ಒಂದು ವಾರದ ಹಿಂದಿನವರೆಗೂ ಇತರರಿಗೆ ಗೊತ್ತಾಗದ ಹಾಗೆ ನಾವು ಮುಂದುವರಿಸಿದ್ದೆವು. ಶಶಿಯ ಬೋಧನೆಯನ್ನು ಅನುಸರಿಸಲು ಸಾಧ್ಯವಾಗಿದ್ದರೆ ಇವೊತ್ತೂ ಅದು ಯಾರಿಗೂ ಗೊತ್ತಾಗುತ್ತಿರಲಿಲ್ಲ.''

''ಯಾವುದು ಆ ದಿವ್ಯಬೋಧನೆ ?'' ಸುಮತಿ ಕುತೂಹಲ ಹಾಗೂ ತುಸು ಪರಿಹಾಸದೊಂದಿಗೇ ಪ್ರಶ್ನಿಸಿದಳು.

''ನೀನು ಪರಿಹಾಸ ಮಾಡ್ಬೇಡ. ಎಲ್ಲರಿಗೂ ಗೊತ್ತಿರುವ ವಿಚಾರವೇ ಆಗಿರ್ಬಹುದು ಅದು. ಆದರೂ, ಪ್ರಜ್ಞಾಪೂರ್ವಕ ಆ ಅರಿವನ್ನು ಕಾರ್ಯಗತಗೊಳಿಸಲು ಸಾಧ್ಯವಾಗ್ಬೇಕು. ನನಗಂತೂ ಸಾಧ್ಯವಾಗಲಿಲ್ಲ.

''ನಾನು ಶಶಿಗೆ ಹತ್ತಿರವಾದ ಬಳಿಕ ಕ್ರಮೇಣ ಹಸ್‌ನಿಂದ ದೂರವಾದೆ. ಅವರನ್ನು ಪ್ರೀತಿಸುವುದರಲ್ಲಾಗಲಿ ಉಪಚರಿಸುವುದರಲ್ಲಾಗಲಿ ಯಾವ ಲೋಪವನ್ನೂ ಉಂಟು ಮಾಡಲಿಲ್ಲ. ಪ್ರಾಯಶಃ ನಾನು ಅಪರಾಧಪ್ರಜ್ಞೆಯೊಂದಿಗೇ ಅವನ್ನೆಲ್ಲ ಹೆಚ್ಚು ಜಾಗರೂಕತೆಯಿಂದಲೇ ಮಾಡಿರಲೂಬಹುದು. ಆದರೂ ಅವರೊಡನೆ ಹಾಸಿಗೆ ಹಂಚಿಕೊಳ್ಳುವುದು ಮಾತ್ರ ನನಗೆ ವಿಪರೀತ ಕಷ್ಟದ ಕಾಯಕವಾಯ್ತು.

''ಅದನ್ನು ಶಶಿ ನಮ್ಮ ಸಂಬಂಧಾನಂತರ ಎರಡೋ ಮೂರೋ ತಿಂಗಳುಗಳು



ಕಳೆದಾಗ ನನ್ನಿಂದ ಅರಿತುಕೊಂಡು ಅಧಿಕಾರವಾಣಿಯಲ್ಲಿ ನನ್ನನ್ನ ಗದರಿದ್ದರು. ಗಂಡನಿಗೆ ಕೊಡತಕ್ಕದ್ದನ್ನು ಕೊಡಬೇಕೆಂದೂ ಮಿಕ್ಕಿದ್ದನ್ನಷ್ಟೇ ತಾನು ಸ್ವೀಕರಿಸುವೆನೆಂದೂ ಹೇಳಿದ್ದರು. ಅದಕ್ಕೆ ನಾನು ಒಪ್ಪಿದ್ದೆ ಕೂಡ. ಆದರೂ ಅನೇಕಬಾರಿ ಶಶಿಯೊಡನೆ ಸುಳ್ಳು ಹೇಳಿದ್ದೆ.

''ನಾನು ಮಕ್ಕಳ ಜೊತೆಯಲ್ಲೇ ಮಲಗುತ್ತಿರುವುದರಿಂದ ಅಲ್ಲಿಂದ ಅಗತ್ಯವಿರುವಾಗ ಮಾತ್ರ ಹಸ್‌ನ ಮಲಗುವ ಕೋಣೆಗೆ ಎದ್ದುಹೋಗುವುದೇ ಪದ್ಧತಿಯಾಗಿತ್ತು. ಅದರ ಮಧ್ಯಂತರ ಅವಧಿ ಹಸ್‌ಗೆ ಅಗತ್ಯವಿರುವುದಕ್ಕಿಂತಲೂ ದೀರ್ಘವಾಗಿರುತ್ತಿತ್ತು.

''ಬೆಟ್ಟ ಮಹಮ್ಮದನ ಬಳಿಗೆ ಹೋಗದಿದ್ದಾಗ [illegible]

ಬರತೊಡಗಿದ. ಅಂತಹ ಸಂದರ್ಭಗಳಲ್ಲಿ ನಾನು ನಿದ್ದೆ ಬರುತ್ತಿದೆ, ತಲೆ ನೋಯುತ್ತಿದೆ ಎಂದೆಲ್ಲ ಹೇಳಿ ನಿಶ್ಚಲ ಮಲಗಿರುತ್ತಿದ್ದೆ.

''ಯಾವಾಗಲಾದರೊಮ್ಮೊಮ್ಮೆ ನಾನು ಹಸ್‌ನ ಹಾಸಿಗೆಗೆ ಹೋಗುತ್ತಿರಲಿಲ್ಲವೆಂದು ಹೇಳುತ್ತಿಲ್ಲ. ಆದರೂ ನನ್ನ ನಿರಾಸಕ್ತಿಯನ್ನು ಹಸ್‌ನಿಂದ ಮರೆಮಾಚಲು ಎಷ್ಟೇ ಯತ್ನಿಸಿದರೂ ನನಗೆ ಸಾಧ್ಯವಾಗಲಿಲ್ಲ.

''ನನ್ನ ಭಾವವ್ಯತ್ಯಾಸ ಹಸ್‌ನಲ್ಲಿ ಶಂಕೆ ಮೂಡಿಸಿತ್ತು. ಕ್ರಮೇಣ ಹಸ್ ನನ್ನ ಬಳಿಗೆ ಬರುವುದನ್ನು ನಿಲ್ಲಿಸಿದರು ಹಾಗೂ ನನ್ನ ಸಂಗವನ್ನು ಗಮನಿಸಲಾರಂಭಿಸಿದರು. ಬಳಿಕ ಬಲು ಬೇಗನೆ ಶಶಿಯಲ್ಲಿ ತನ್ನ ಎದುರಾಳಿಯನ್ನು ಕಂಡುಕೊಂಡರು – ಎಂದೇ ನನಗೆ ಅನ್ನಿಸುತ್ತಿದೆ.

''ಹಸ್‌ನ ಅವಗಣನೆ ನನ್ನಲ್ಲಿ ಹೆಚ್ಚು ಸಂತೋಷವನ್ನೇ ಉಂಟುಮಾಡಿತ್ತು. ಒಂದು ಪ್ರಾರಬ್ಧ ದೂರವಾಯ್ತೆಂದೇ ನನಗೆ ಅನ್ನಿಸಿತ್ತು. ನಾನು ಹೆಚ್ಚುಹೆಚ್ಚಾಗಿ ಶಶಿಗೆ ಹತ್ತಿರವಾದೆ. ನನ್ನನ್ನು ಸಂಪೂರ್ಣ ನಾನು ಆ ಮನುಷ್ಯನಿಗೇ ಸಮರ್ಪಿಸಿದೆ. ರಾತ್ರಿ ಶಶಿ ದಣಿದು ನಿದ್ರಿಸುವಾಗ ನಾನು ಎದ್ದು ಕುಳಿತು ಆತನ ಕಾಲಡಿಗಳನ್ನು ನನ್ನ ಮಡಿಲಲ್ಲಿರಿಸಿದೆ. ಬಳಿಕ ಆ ಪಾದಗಳನ್ನು ಚುಂಬಿಸಿದೆ. ಆವಾಗಲೆಲ್ಲ ಆ ಕಾಲಡಿಗಳು ನನ್ನ ಕಣ್ಣೀರಿನಲ್ಲಿ ಒದ್ದೆಯಾದವು.

''ನಾವು ಎಲ್ಲಿಗಾದರೂ ಹೊರಟುಹೋಗುವ – ಶಶಿಯ ಮಡಿಲಲ್ಲಿ ಮಲಗಿರುತ್ತಾ ಒಮ್ಮೆ ನಾನು ಹೇಳಿದೆ. ಆ ಮನುಷ್ಯನ ಕೋಪವನ್ನು ನಾನು ಸರಿಯಾಗಿ ಕಂಡದ್ದು ಆವತ್ತೇ.

''ನಿನಗೆ ಹುಚ್ಚು! ನೀನೊಬ್ಬಳು ಚಿಕ್ಕ ಹುಡುಗಿಯಲ್ಲ; ಮೂರು ಮಂದಿ ಮುದ್ದು ಮಕ್ಕಳ ತಾಯಿ. ನಿನಗೆ ಆರೋಗ್ಯವಂತನೂ ಸ್ನೇಹಸಂಪನ್ನನೂ ಆದ ಒಬ್ಬ ಗಂಡನಿದ್ದಾನೆ. ನಾನು ನಿನಗೆ ಯಾರೂ ಅಲ್ಲ. ಮುಂದೆ ಒಮ್ಮೆಯಾದರೂ ಹೀಗೆ ಹೇಳಿದರೆ ನಾನು ಇಲ್ಲಿಗೆ ಬರುವುದೇ ಇಲ್ಲ. ಅಷ್ಟೇ ಅಲ್ಲ, ನಿನ್ನ ಹುಚ್ಚಿಗೆ ಚಿಕಿತ್ಸೆ ಮಾಡಿಸಲು ನಿನ್ನ ಗಂಡನಿಗೆ ಹೇಳುವೆ – ಎಂದರು.

''ನಾನು ಆಗ ಏನನ್ನೂ ಹೇಳದೆ ಶಶಿಯನ್ನು ರಮಿಸಲೂ ಉತ್ತೇಜಿಸಲೂ ಮಾತ್ರ ಯತ್ನಿಸಿದೆ.

''ತನ್ನ ಮಾತುಗಳಿಗೆ ಹೆಚ್ಚಿನ ಫಲ ದೊರೆಯಲಿಲ್ಲವೆಂದು ಶಶಿಗೆ ಅನ್ನಿಸಿರಬಹುದು.

''ಒಂದು ದಿನ ಶಶಿ ಎಚ್ಚರಗೊಳ್ಳುವಾಗ ನಾನು ಆತನ ಕಾಲಡಿಗಳನ್ನು ಕಣ್ಣೀರಿನಿಂದ ಅಭಿಷೇಕ ಮಾಡುತ್ತಾ ಇದ್ದೆ. ರೋಷಾವಿಷ್ಟನಾಗಿ ಆತ ಅಂದು ನನ್ನ ಮುಖಕ್ಕೆ ಒದ್ದರು.

''ನೀನು ನಿನ್ನನ್ನೇ ಮರೆಯುತ್ತಿರುವೆ. ಈಗ ಮಾಡುತ್ತಿರುವುದಕ್ಕೆಲ್ಲ ನೀನು ಶಿಕ್ಷೆ ಅನುಭವಿಸಬೇಕಾಗುತ್ತದೆ. ಒಂದು ಕುಟುಂಬ ಧ್ವಂಸವಾಗುವುದಕ್ಕೆ ನಾನು ಕಾರಣವಾಗು ತ್ತಿರುವೆನಲ್ಲ ಎಂದು ದುಃಖವಾಗುತ್ತಿದೆ ನನಗೆ – ಎಂದರು ಶಶಿ.

''ನಾನು ಮಾತ್ರ ಇನ್ನೇನೂ ಮಾಡಲು ಅಸಮರ್ಥಳಾಗಿದ್ದೆ. ಆದರೂ, ಇದನ್ನು ಪುನರಾವರ್ತಿಸುವುದಿಲ್ಲವೆಂದೂ ಹಸ್‌ನೊಡನೆ ಹಿಂದಿನಂತೆಯೇ ವರ್ತಿಸುವೆನೆಂದೂ ಶಶಿಗೆ ವಚನವಿತ್ತೆ.

''ಶಶಿ ಬರಲಿರುವ ದಿನ ಹಸ್ ನಿದ್ರೆಬಿಟ್ಟು ಕಾದು ಮಲಗತೊಡಗಿದರು. ಆದರೂ ಒಂದೆರಡು ದಿನ ನಾನು ಎದ್ದುಹೋಗುವ ಮೊದಲೇ ಅವರು ನಿದ್ದೆಹೋಗಿಬಿಟ್ಟಿದ್ದರು.

''ಕೊನೆಗೂ ಕಳೆದವಾರ ಅದು ಸಂಭವಿಸಿತು. ಶಶಿ ಬಂದದ್ದು ಎರಡುವಾರಗಳ ಅಗಲಿಕೆಯ ನಂತರವಾಗಿತ್ತು. ಆತನಿಗಾಗಿ ನಾನು ಆತುರದೊಂದಿಗೇ ಕಾಯುತ್ತಾ ಇದ್ದೆ. ಆದರೂ ಹಸ್ ನಿದ್ರಿಸಲೋಸುಗ ನಡುರಾತ್ರಿಯತನಕ ಕಾದೆ. ಬಳಿಕ ಎದ್ದು ಅಡಿಗೆಮನೆ ಬಾಗಿಲನ್ನು ಮೆಲ್ಲಗೆ ತೆರೆದು ಹೊರಬಿದ್ದೆ. ಚಾವಡಿಗೆ ಹೋಗಿ ಶಶಿಯ ಹಾಸಿಗೆಯಲ್ಲುರುಳಿ ಆತನ ತೋಳತೆಕ್ಕೆಯಲ್ಲಿ ಹುದುಗಿಕೊಳ್ಳುವಷ್ಟರಲ್ಲಿ ನನ್ನ ಕಿರಿಮಗ – ಅವನಿಗೆ ಈಗ ನಾಲ್ಕು ವಯಸ್ಸು – ಎಚ್ಚೆತ್ತು ಜೋರಾಗಿ ಅಳತೊಡಗಿದ. ಹಸ್ ಎಚ್ಚರಗೊಳ್ಳುವ ಮುನ್ನ ತಲುಪುವ ಸಲುವಾಗಿ ನಾನು ಬೆಡ್‌ರೂಮಿನತ್ತ ಧಾವಿಸಿದೆ.

''ಅಡುಗೆಮನೆಯ ಬಾಗಿಲಿನಲ್ಲಿ ಕಾದುನಿಂತಿದ್ದ ಹಸ್‌ನ ಹೊಡೆತಕ್ಕೆ ಗುರಿಯಾಗಿ ನಾನು ಗೋಡೆಯತ್ತ ವಾಲಿದೆ. ಬಳಿಕ ಪೆಟ್ಟು, ಗುದ್ದು, ಒದೆಗಳ ಮಹಾಪೂರವಾಗಿತ್ತು. ನಾನು ಅಳಲಿಲ್ಲ. ಚೀತ್ಕಾರವನ್ನೂ ಉಸುರಲಿಲ್ಲ ಕೂಡ. ನಿಜ ಹೇಳುತ್ತೇನೆ, ನನಗೆ ನೋವು ಗೊತ್ತಾಗಲೇ ಇಲ್ಲ. ಹಸ್ ಮಾತ್ರ ಜೋರುಜೋರಾಗಿ ಜರೆಯುತ್ತಲೇ ಇದ್ದರು. ಕೆಲಕಾಲದಿಂದ ನನ್ನಲ್ಲಿ ಕಾಣಿಸಿಕೊಳ್ಳುತ್ತಿದ್ದ ಜಡತೆ, ಮುಂದೆ ಅದರ ಒಳಗುಟ್ಟನ್ನು ತಾನು ಪತ್ತೆಹಚ್ಚಿರುವ ಬಗೆ, ಹುಡುಗನ ತೊಡೆಯನ್ನು ಚಿವುಟಹಾಕುವಂತೆ ಮಾಡಿ ನನ್ನನ್ನು ಕೋಣೆಗೆ ಮರಳುವಂತೆ ಮಾಡಿದ ಉಪಾಯ – ಎಲ್ಲವನ್ನೂ ಒದರಿಹೇಳಿದರು.''

''ನಿಜವಾಗಿ ತಾನು ಏನು ಮಾಡುತ್ತಿದ್ದೇನೆ ಎಂಬ ಪರಿವೆಯೇ ಆಗ ಆತನಿಗಿರಲಿಲ್ಲ.

''ಹಸ್ ನನಗೆ ನೀಡುತ್ತಿರುವ ಶಿಕ್ಷೆಯನ್ನು ನಿಲ್ಲಿಸುತ್ತಿಲ್ಲವೆಂದು ಕಂಡಾಗ ಶಶಿ ಕೋಣೆಗೆ ನುಗ್ಗಿ ಆತನ ಕೈಗಳನ್ನು ರಪ್ಪನೆ ಹಿಡಿದರು.

''ದೇವದಾಸ್, ನಿಲ್ಲಿ! ನೀವು ದಂಡಿಸಬೇಕಾದದ್ದು ನನ್ನನ್ನು, ಮೊದಲು ಅದು ನಡೆಯಲಿ.

''ಹಸ್ ಕೈಗಳೆರಡನ್ನೂ ಬೆನ್ನ ಹಿಂದೆ ಕಟ್ಟಿ ತೇಕುತ್ತ ನಿಂತುಕೊಂಡರು.

''ದೇವದಾಸ್, ನೀವು ನಿಮ್ಮ ಹೆಂಡತಿಗೆ ಶಿಕ್ಷೆ ಕೊಡುವುದನ್ನು ತಡೆಯುವ ಅಧಿಕಾರ ನನಗಿಲ್ಲವೆಂದು ನನಗೆ ಗೊತ್ತು. ಅದರಲ್ಲೂ ಆಕೆಯ ಅಪರಾಧಕ್ಕೆ ಕಾರಣಕರ್ತನಾದ ಒಬ್ಬಾತ ಎಂಬ ನೆಲೆಯಲ್ಲಿ. ಆದರೂ, ನೀವು ಇನ್ನು ಮುಂದೆ ಇಂದುಮತಿಯನ್ನು ಪತ್ನಿಯಾಗಿ ಸ್ವೀಕರಿಸಲು ಸಿದ್ಧರಿಲ್ಲವಾದರೆ ಆಕೆಯನ್ನು ಶಿಕ್ಷಿಸಕೂಡದು. ಸ್ವೀಕರಿಸುವುದೇ ಆದರೆ, ಗದ್ದಲವೆಬ್ಬಿಸಿ ನೆರೆಹೊರೆಯವರನ್ನೆಲ್ಲ ಕಲೆಹಾಕಿ ನನ್ನ ಹೆಂಡತಿ ಪತಿತೆಯೆಂದು ಡಂಗುರ ಸಾರಿದ ಬಳಿಕವೇ ಅದನ್ನು ಮಾಡಬೇಕೆ? ಹೊತ್ತು ಬೆಳಗಾಗಲಿ, ಬಳಿಕ ನಾವು ಎಲ್ಲಕ್ಕೂ ಪರಿಹಾರ ಕಂಡುಕೊಳ್ಳೋಣ, ಎಂದರು ಶಶಿ.

''ಆ ಮಾತನ್ನು ಒಪ್ಪಿಕೊಂಡಂತೆ ಹಸ್ ಸ್ವಂತ ಕೋಣೆಗೆ ಹೊರಟುಹೋದರು. ನಾನು ನನ್ನ ಹಾಸಿಗೆಯಲ್ಲಿ ಕುಳಿತು ರೋದಿಸಿದೆ. ಶಶಿಯ ಧೀರತನ ಮತ್ತು ತ್ಯಾಗಮನೋಭಾವ ನನಗೆ ಬೇಕಾದಷ್ಟು ಸಾಂತ್ವನವನ್ನು ನೀಡಿತ್ತು.

''ಹೊತ್ತು ಬೆಳಗಾಗುವ ಮುನ್ನ ನಾನು ಶಶಿಯನ್ನು ಕರೆದೆಬ್ಬಿಸಿದೆ.

''ಶಶೀ, ನಾವು ಇಲ್ಲಿಂದ ಹೊರಟುಹೋಗುವಾ; ಮಿಕ್ಕೆಲ್ಲವನ್ನೂ ಇಲ್ಲೇ ಬಿಟ್ಟು.

''ಒಬ್ಬ ಪುಟ್ಟ ಹುಡುಗನ ಹಾಗೆ ಶಶಿ ನನ್ನನ್ನು ಅನುಸರಿಸಿದರು. ಹಾಗೇ ನಾವು ಇಲ್ಲಿ ತಲುಪಿದೆವು'' ಎಂದು ಹೇಳಿ ಮುಗಿಸಿದಳು ಇಂದುಮತಿ.

''ಶಶಿ ಎಲ್ಲಿ? ಈ ತನಕ ಕಾಣಿಸಲೇ ಇಲ್ಲವಲ್ಲ?'' ಸುಮತಿ ಆತಂಕದೊಂದಿಗೇ ವಿಚಾರಿಸಿದಳು.

ಅದಕ್ಕೆ ಇಂದುಮತಿ ಉತ್ತರವೇನೂ ಹೇಳಲಿಲ್ಲ. ಮೇಜಿನ ಮೇಲಿಂದ ಒಂದು ಚೀಟಿ ತೆಗೆದು ಅವಳ ಕೈಗಿತ್ತಳು.

'ನಾನು ಜೊತೆಯಲ್ಲಿರುವಷ್ಟೂ ಕಾಲ ನೀನು ಪಾರಾಗುವಂತಿಲ್ಲ. ಮರಳಿ ಹೋಗು. ಗಂಡನೊಡನೆ ಕ್ಷಮೆ ಬೇಡು. ಅವರು ನಿನ್ನನ್ನು ಪಾರುಮಾಡುತ್ತಾರೆ. ಬೇರೆ ಯಾರಿಗೂ ಅದು ಸಾಧ್ಯವಾಗದು. ಇನ್ನೆಂದೂ ನಾವು ಜೀವನದಲ್ಲಿ ಸಂಧಿಸುವ ಸಂದರ್ಭ ಬಾರದಿರಲಿ – ಶಶಿ.'

ಚೀಟಿ ಓದಿ ಸುಮತಿ ದಿಗ್ಭ್ರಾಂತಳಾಗಿ ನಿಂತುಕೊಂಡಳು. ಬಳಿಕ ಚೀಟಿಯ ದಿನಾಂಕ ನೋಡಿದಳು. ಶಶಿ ಹೊರಟುಹೋಗಿ ಮೂರು ದಿನಗಳೇ ಕಳೆದಿವೆ!

''ನೀನು ಏನ್ ಮಾಡುವವಳಿದ್ದೀ?''

''ಪೆಟ್ರೋಲ್ ಮುಗಿಯುವ ತನಕ ಓಡ್ತೇನೆ. ಮುಂದಿನ ವಿಚಾರ ಮುಂದೆ.''

ಶಶಿ ಸ್ವಂತ ಕೈಯಲ್ಲಿದ್ದ ಹಣವನ್ನೂ ಬೆರಳಿನಲ್ಲಿದ್ದ ಉಂಗುರವನ್ನೂ ಚೀಟಿಯೊಂದಿಗೆ ಇರಿಸಿದ್ದನೆಂದು ಇಂದುಮತಿ ಹೇಳಿದಳು. ತನ್ನ ಕೈಯಲ್ಲಿ ತಾತ್ಕಾಲಿಕ ಅಗತ್ಯಕ್ಕೆ ತಕ್ಕಷ್ಟು ಹಣ ಇದೆ; ಅಲ್ಲದೆ, ಒಂದಷ್ಟು ಚಿನ್ನಾಭರಣಗಳೂ ಇವೆ.

ಸದ್ಯ ಆಹಾರಕ್ಕಾಗಲಿ, ಹೋಟೆಲು ಕೋಣೆಯ ಬಾಡಿಗೆಗಾಗಲಿ ಅಡಚಣೆಯಾಗ ದೆಂದು ಹೇಳಿ ಅವಳು ಗೆಳತಿಯನ್ನು ಸಂತೈಸಿದಳು.

ಈಗ ಇಂದುಮತಿಗಿಂತಲೂ ಹೆಚ್ಚು ಆತಂಕಕ್ಕೆ ಗುರಿಯಾದಳು ಸುಮತಿ. ತಾನು ಏನು ಮಾಡುವುದೆಂದು ಗೊತ್ತಾಗದೆ ಅವಳು ಗೊಂದಲಕ್ಕೊಳಗಾಗಿ ನಿಂತಿರುವಾಗ ಯಾರೋ ಬಾಗಿಲು ಬಡಿದರು.

ಸುಮತಿಯೇ ಎದ್ದು ಬಾಗಿಲು ತೆರೆದಳು. ಅವಳಿಗೆ ತನ್ನ ಕಣ್ಣುಗಳನ್ನೇ ನಂಬಲು ಸಾಧ್ಯವಾಗಲಿಲ್ಲ. ತೀರಾ ಕಂಗಾಲಾದ ಸ್ಥಿತಿಯಲ್ಲಿ ದೇವದಾಸ್ ನಿಂತಿರುವನು!

''ಇಂದೂ, ಬಾ ಮನೆಗೆ ಹೋಗೋಣ, ನಿನ್ನನ್ನು ಸಾಯಗೊಡಲು ನಾನು ಇಚ್ಛಿಸುತ್ತಿಲ್ಲ.''

''ಇಂದುಮತಿ ಇಲ್ಲಿರುವಳೆಂದು ನಿಮಗೆ ಹೇಗೆ ಗೊತ್ತಾದದ್ದು?'' ಸುಮತಿ ಅಚ್ಚರಿಯೊಂದಿಗೆ ಕೇಳಿದಳು.

''ಶಶಿ ನನಗೆ ಬರೆದಿದ್ದ; ಅವನು ಹೊರಟುಹೋದ ಅದೇ ದಿನ. ಊರಿನಲ್ಲಿ ಯಾರಿಗೂ ಇದಾವುದೂ ಗೊತ್ತಿಲ್ಲ. ಇಂದುಮತಿ ಅವಳ ಅಪ್ಪನಿಗೆ ಹುಷಾರಿಲ್ಲದ್ದರಿಂದ ಅವರ ಉದ್ಯೋಗ ಸ್ಥಳಕ್ಕೆ ತುರ್ತಾಗಿ ಹೊರಟುಹೋಗಿದ್ದಾಳೆ ಎಂದಷ್ಟೇ ನಾನು ಹೇಳಿದ್ದೆ.''

ಕೋಣೆಯಲ್ಲಿದ್ದ ಸಾಮಾನುಗಳನ್ನೆಲ್ಲ ಪೆಟ್ಟಿಗೆಯಲ್ಲಿ ತುಂಬಿ ಅದನ್ನು ಹಿಡಿದುಕೊಂಡು ಹೋಟೆಲಿನಿಂದ ಹೊರನಡೆದ ದೇವದಾಸನನ್ನು ಇಂದುಮತಿ ಓರ್ವ ವಿಧೇಯ ಹೆಂಡತಿಯ ಹಾಗೆ ಹಿಂಬಾಲಿಸಿದಳು.

---

ಮಲಯಾಳಂ ಮೂಲ : **ವೆಟ್ಟೂರ್ ರಾಮನ್ ನಾಯರ್**
ಕನ್ನಡಾನುವಾದ : **ಕೆ. ಕೆ. ನಾಯರ್**
ಎಂ.ಐ.ಜಿ. ೧೨೬, ಹುಡ್ಕೊ ಕಾಲೋನಿ, ಮಣಿಪಾಲ - ೫೭೬ ೧೧೯

# ಬೆಂಕಿಯುಗುಳುವವನು

ಅದೀಬ್ ಅಖ್ತರ್



**ಮ**ನೆಯ ಹೊಸ್ತಿಲು ದಾಟುತ್ತಿದ್ದಂತೆ ದೇಹದಲ್ಲಿ ಬಿಸಿ ರಕ್ತ ಸಂಚರಿಸತೊಡಗಿತು. ಬೆಂಕಿಯುಗುಳುವ ಶಕ್ತಿ ನಾನು ಸಹ ಹೊಂದಿದ್ದೇನೆ ಎಂಬ ವಿಶ್ವಾಸ ಬಂದ ಕೂಡಲೇ ಬೆಂಕಿಯುಗುಳವ ಬಯಕೆಯಾಯಿತು.

* * *

ಶಾಲೆಯಿಂದ ಹಿಂತಿರುಗುವಾಗ ದಾರಿಯಲ್ಲಿ ನೋಡಿದೆ, ದೊಂಬರಾಟದವನು ಉರಿಯುತ್ತಿರುವ ಪಂಜನ್ನು ಬಾಯಿ ಮುಂದೆ ಹಿಡಿದು ಜೋರಾಗಿ ಊದಿದರೆ ಅವನ ಬಾಯಿಂದ ಬೆಂಕಿಯನ್ನೇ ಉಗುಳಿದಂತಾಗುತ್ತಿತ್ತು. ಇದೆಲ್ಲವನ್ನೂ ನೋಡ ಬಾರದು ಎಂದುಕೊಂಡರೂ ಆಮೇಲೆ ಅಮ್ಮನ ಮಾತು ನೆನಪಾಗಿ ಮನೆ ಕಡೆ ಬಿರಿಸಿನ ಹೆಜ್ಜೆಯಿಟ್ಟೆ. ಅಮ್ಮ ಆಗಾಗ ಬೆಂಕಿಯುಗುಳುವವನೊಬ್ಬನ ಬಗ್ಗೆ ಹೇಳುತ್ತಿದ್ದಳು. ಇವನು ಅವನಲ್ಲ ಎಂದೆನಿಸಿದರೂ ಅದೇಕೋ ತುಂಬಾನೇ ಭಯವಾಯಿತು – ಮನೆಗೆ ಬಂದು ಅಮ್ಮನಿಗೆ ನಡೆದುದೆಲ್ಲವನ್ನು ವಿವರಿಸಿದಾಗ ಅವಳು ''ನಾನು ಹೇಳುವ ಬೆಂಕಿಯುಗುಳುವವನು ಬೇರೆ, ಇವನು ಬೇರೆ. ಆದರೂ ನೀನೆಚ್ಚರದಿಂದಿರು'' ಎಂದಳು.

ಅಮ್ಮ ಹೇಳುವ ಪ್ರಕಾರ ಬೆಂಕಿಯುಗುಳುವವನೊಬ್ಬನಿದ್ದ – ಅವನು ಯಾವಾಗಲೂ ಬೆಂಕಿಯುಗುಳುತ್ತಿರಲಿಲ್ಲ, ಆದರೆ ಕೆಲವು ಸಂದರ್ಭದಲ್ಲಿ ಬೆಂಕಿಯುಗುಳಿದರೆ ಎದುರಿಗಿರುವವರೆಲ್ಲರೂ ಭಸ್ಮವಾಗುತ್ತಿದ್ದರು. ಆಸಕ್ತಿ ಹೊಂದಿದ್ದವರಿಗೆ ಅವನು ಬೆಂಕಿಯುಗುಳುವುದು ಹೇಗೆಂದು ಹೇಳಿಕೊಡುತ್ತಿದ್ದ. ಅಂಥ ಸಂದರ್ಭದಲ್ಲಿ ಆಸಕ್ತಿಯಿಲ್ಲದಿದ್ದರೂ ಅಲ್ಲಿದ್ದರೆ ಅವರು ಸಹ ಬೆಂಕಿಯುಗುಳುವುದನ್ನು ಕಲಿತುಕೊಳ್ಳುತ್ತಿದ್ದರು. ಅದಕ್ಕೆ ಅವನಿದ್ದ ಕಡೆ ಮರೆತೂ ಸಹ ಹೋಗಬಾರದೆಂದು ಅಮ್ಮ ಮನವರಿಕೆ ಮಾಡಿಕೊಡುತ್ತಿದ್ದಳು.

* * *

ಇತ್ತೀಚೆಗೊಂದು ದಿನ, ನಾನೊಂದು ಹೊಸ ಸುದ್ದಿಯನ್ನೇ ಹೊತ್ತು ತಂದೆ. ಅದೇನೆಂದರೆ ಇನ್ನೇನು ಕೆಲವು ದಿನದಲ್ಲಿ ಬೆಂಕಿಯುಗುಳುವವನು ನಮ್ಮೂರಿಗೂ ಭೇಟಿ ನೀಡುತ್ತಿರುವುದೆಂದು. ಅವನನ್ನು ಸ್ವಾಗತಿಸಲು ಊರಿನ ಮುಖ್ಯ ದ್ವಾರದಲ್ಲಿ ಭರದ ಸಿದ್ಧತೆ ನಡೆಯುತ್ತಿತ್ತು. ಆಮೇಲೆ ಅಲ್ಲಿಂದ ತುಸುವೇ ದೂರದಲ್ಲಿರುವ ದೊಡ್ಡ ಮೈದಾನದಲ್ಲಿ ಸಭೆ ನಡೆಸಲು ಸಭಾಂಗಣ ಸಹ ನಿರ್ಮಾಣ ಮಾಡುತ್ತಿದ್ದುದನ್ನು ನಾನು ಕಣ್ಣಾರೆ ಕಂಡುಬಂದಿದ್ದೆ.

''ಅಮ್ಮ ನಮ್ಮೂರಿಗೆ ಬೆಂಕಿಯುಗುಳುವವನು ಬರುತ್ತಿದ್ದಾನೆ'' ಎಂದು ಹೇಳಿ ಅಲ್ಲಿ ನಾನು ಕಂಡ ಎಲ್ಲ ಸಿದ್ಧತೆಗಳನ್ನು ವಿವರಿಸಿದಾಗ ''ಮುಸ್ಸಂಜೆಯಲ್ಲಿ ಅವನ ಹೆಸರೆತ್ತಬೇಡ, ಅವನು ಇಲ್ಲಿ ಬರುವುದಕ್ಕೆ ಮುನ್ನ ಸರ್ವನಾಶವಾಗಲಿ'' ಎಂದು ಅಮ್ಮ ಶಪಿಸಿದಳು.

''ಅಮ್ಮ ಅವನು ಹೇಗಿರುತ್ತಾನೆ ?''

''ಅವನ ಬಗ್ಗೆ ಕೇಳಬೇಡ ಮಗು, ಅವನ ಮುಖ ವಿಕಾರವಾಗಿರುತ್ತದೆಂದು ನಮ್ಮ ಹಿರಿಯರು ಅವನ ಬಗ್ಗೆ ವಿವರಿಸುತ್ತಿದ್ದರೆ ನಾವೆಲ್ಲ ಭಯದಿಂದ ಕಿವಿ ಮುಚ್ಚಿಕೊಳ್ಳುತ್ತಿದ್ದೆವು.''

''ಅಂದರೆ ಅವನನ್ನು ನೀನೂ ನೋಡಿಲ್ಲವೆನ್ನಿಸುತ್ತೆ ?''

''ನಮ್ಮಪ್ಪ ಹೇಳುತ್ತಿದ್ದರು, ಆಗಿನ ಕಾಲದಲ್ಲಿ ಬೆಂಕಿಯುಗುಳುವವನಿಗೆ ಎಲ್ಲರೂ ಹೆದರಿಕೊಳ್ಳುತ್ತಿದ್ದರು !''

''ಆಗಿನ ಕಾಲದಲ್ಲಿ ಜನರು ಅನಕ್ಷರಸ್ಥರಾಗಿದ್ದರು. ಅದಕ್ಕೇ ಅವನಿಗೆ ಹೆದರಿಕೊಳ್ಳುತ್ತಿದ್ದರು. ಆದರೆ ಈಗ ಜನ ಅಕ್ಷರಸ್ಥರಾಗಿದ್ದಾರೆ'' ಎಂದೆ.

''ಪ್ರಪಂಚ ಇಷ್ಟೊಂದು ಮುಂದುವರಿದಿದೆ. ಆದರೂ ಅವನನ್ನು ಭಸ್ಮಮಾಡುವ ಮನಸ್ಸು ಯಾರೂ ಮಾಡಿಲ್ಲ'' ಎಂದಳು ಅಮ್ಮ. ಅವನ ಬಗ್ಗೆ ಹೆಚ್ಚು ಮಾತಾಡುವುದು ಅವಳಿಗೆ ಇಷ್ಟವಿರಲಿಲ್ಲ.

* * *

ಬೆಂಕಿಯುಗುಳುವವನು ನಮ್ಮೂರಿಗೆ ಭೇಟಿ ನೀಡಲು ಇನ್ನೂ ಕೆಲವು ದಿನಗಳಿವೆ ಎಂದಾಗ ನಾನು ಶಾಲೆಯಿಂದ ಹಿಂತಿರುಗುತ್ತ ಮುಖ್ಯದ್ವಾರದ ಬಳಿ ಯಾರಾದರೂ ಅವನು ಹೇಗಿರುತ್ತಾನೆಂದು ಮಾತಾಡಿಕೊಳ್ಳುತ್ತಿದ್ದರೆ ಕೇಳಿ ಬರಬೇಕೆಂದು ಕುತೂಹಲದಿಂದ ಹೋಗುತ್ತಿದ್ದೆ – ಆದರೆ ಅಲ್ಲಿ ಯಾರೊಬ್ಬರೂ ಅವನ ಬಗ್ಗೆ ಮಾತಾಡದೆ ಶಿಸ್ತಿನ ಸಿಪಾಯಿಗಳಂತೆ ತಮ್ಮ ತಮ್ಮ ಕೆಲಸದಲ್ಲಿ ಮಗ್ನರಾಗಿರುತ್ತಿದ್ದರು.

* * *

ಬೆಂಕಿಯುಗುಳುವವನು ನಮ್ಮೂರಿಗೆ ಬರುವ ದಿನ ಶಾಲೆಗೆ ರಜೆ ನೀಡಿದ್ದರು. ಅಮ್ಮ ನನಗೆ ಮನೆಯಿಂದ ಹೊರಗೆ ಹೋಗಲು ಅನುಮತಿ ನೀಡಲಿಲ್ಲ.

* * *

ಆಮೇಲೆ ಅವನು ಬಂದುಹೋದ. ಮಾರನೇ ದಿನ ಶಾಲೆಗೆ ಹೋದಾಗ, ಬೆಂಕಿಯುಗುಳುವವನನ್ನು ನೋಡಲು ಯಾರ್ಯಾರು ಹೋಗಿದ್ದರು, ಯಾರ್ಯಾರು ಬೆಂಕಿಯುಗುಳುವುದನ್ನು ಕಲಿತುಕೊಂಡಿದ್ದಾರೆಂದು ತಿಳಿದುಕೊಳ್ಳಲು ಕುತೂಹಲವಾಯಿತು. ದಾರಿಯಲ್ಲಿ ಎದುರಾದವರೆಲ್ಲರನ್ನೂ ನೋಡಿದೆ. ಯಾರಲ್ಲೂ ಯಾವ ಬದಲಾವಣೆಯೂ ಕಾಣಲಿಲ್ಲ. ಅದೇ ಹೊತ್ತಿನಲ್ಲಿ ಅಮ್ಮನ ಮಾತು ನೆನಪಾಯಿತು. ಬೆಂಕಿಯುಗುಳುವುದನ್ನು ಸದಾ ಕಾಲ ಯಾರೂ ಮಾಡುವುದಿಲ್ಲ, ಸಮಯ ಸಂದರ್ಭ ನೋಡಿ ಬೆಂಕಿಯುಗುಳುತ್ತಾರೆ. ಅಂತಹ ಸಂದರ್ಭದಲ್ಲಿ ಮಾತ್ರ ಅವರ ಮುಖ ವಿಕಾರವಾಗಿರುತ್ತೆ ಎಂದು ಅಮ್ಮ ಹೇಳುತ್ತಿದ್ದಳು.

ರಸ್ತೆಯಲ್ಲಿ ಸಿಗುವ ಪುಸ್ತಕದಂಗಡಿಗೆ ಹೋದೆ. ಅಲ್ಲಿ ಅಂಗಡಿಯವನು ತನ್ನ ಗೆಳೆಯರಿಗೆ ಏನೇನೋ ಹೇಳುತ್ತಿದ್ದ. ಅವರು ಬೆಂಕಿಯುಗುಳುವವನ ಬಗ್ಗೆ ಮಾತಾಡುತ್ತಿರಬಹುದೆಂದು ಅನುಮಾನ ಉಂಟಾಗಿ ಅಲ್ಲಿ ಸ್ವಲ್ಪ ಹೊತ್ತು ನಿಂತುಕೊಂಡೆ. ಆದರೆ ಅವರು ಬೇರೆ ಯಾವುದೋ ವಿಷಯದ ಬಗ್ಗೆ ಮಾತಾಡಿಕೊಳ್ಳುತ್ತಿದ್ದರು.

ನಿತ್ಯ ದಾರಿಯಲ್ಲಿ ನೋಡುವ ಮುಖಗಳನ್ನೇ ಗಮನಿಸುತ್ತ ಹೋದೆ. ಯಾವ ಬದಲಾವಣೆಯೂ ಕಂಡುಬರಲಿಲ್ಲ. ಎಲ್ಲರೂ ತಮ್ಮ ತಮ್ಮ ಹಳೇ ಮುಖಗಳನ್ನೇ ಹೊತ್ತು ತಿರುಗುತ್ತಿದ್ದರು. ನಿನ್ನೆ ಬೆಂಕಿಯುಗುಳುವವನನ್ನು ನೋಡಲು ಹೆಚ್ಚಿನ

ಜನ ಹೋಗಿಲ್ಲವೆನ್ನಿಸುತ್ತೆ. ಎಲ್ಲೋ ಬೆರಳೆಣಿಕೆಯಷ್ಟು ಜನ ಹೋಗಿದ್ದರೆಂದು ಕಾಣುತ್ತೆ ಎಂದು ನನಗೆ ನಾನೇ ಹೇಳಿಕೊಂಡು ಶಾಲೆಗೆ ಹೋಗಿ ಎಲ್ಲಾ ಮೇಷ್ಟ್ರರ ಮುಖಗಳನ್ನು ಹೊಸದಾಗಿ ನೋಡುವಂತೆ ನೋಡಿದೆ. ನಮ್ಮ ತರಗತಿಯಿಂದ ಯಾರ್ಯಾರು ಹೋಗಿದ್ದರೆಂದು ಕುತೂಹಲವಾಯಿತು. ನಾನು ಬೆಂಕಿಯುಗುಳುವವನ ಬಗ್ಗೆ ಇಷ್ಟೊಂದು ಯೋಚಿಸುತ್ತಿದ್ದೇನಲ್ಲ, ನಾಳೆ ದಿನ ನಾನೇ ಬೆಂಕಿಯುಗುಳುವುದನ್ನು ಪ್ರಾರಂಭಿಸಿಬಿಟ್ಟರೆ ಎಂದು ಯೋಚಿಸಿ ಭಯಗೊಂಡೆ. ಮತ್ತೆ ಆ ಬಗ್ಗೆ ಯೋಚಿಸಬಾರದೆಂದು ನಿರ್ಧರಿಸಿದೆ. ಯಾರು ನಿರಂತರವಾಗಿ ಯಾವುದರ ಬಗ್ಗೆ ಯೋಚಿಸುತ್ತಾರೆಯೋ ಅವರು ಅದೇ ಆಗುವುದೆಂದು ನಮ್ಮ ಮೇಷ್ಟ್ರು ಹೇಳಿದ್ದು ನೆನಪಾಯಿತು.

* * *

ಬೆಂಕಿಯುಗುಳುವವನು ಬಂದುಹೋದದ್ದು ಎಲ್ಲರೂ ಮರೆತಿದ್ದರೂ ಮರೆತಿರಬಹುದೇನೋ ಅಥವಾ ಮರೆತು ಹೋಗಿದ್ದರೂ ಮರೆತುಹೋದವರಂತೆ ನಟಿಸುತ್ತಿದ್ದರೇನೋ. ಆದರೆ ನಾನು ಮಾತ್ರ ನೋಡದಿದ್ದರೂ ಅವನನ್ನು ಮನಸ್ಸಿನಲ್ಲೆ ತುಂಬಿಕೊಂಡಿದ್ದೆ. ಹಾಳಾದವನು ನನ್ನಲ್ಲಿ ತನ್ನ ನೆನಪನ್ನು ಯಾಕಾದರೂ ಬಿಟ್ಟು ಹೋಗಿದ್ದಾನೋ ಎಂದು ಶಪಿಸಿಕೊಳ್ಳುತ್ತಿದ್ದೆ.

* * *

ಅವನು ಬಂದುಹೋದ ಕೆಲವು ದಿನ ಎಲ್ಲವೂ ಶಾಂತವಾಗಿತ್ತು. ಆಮೇಲೊಂದು ದಿನ ಇದ್ದಕ್ಕಿದ್ದಂತೆ ಎಲ್ಲರೂ ಬೆಂಕಿಯುಗಳಲು ಪ್ರಾರಂಭಿಸಿಬಿಟ್ಟರು. ಅಂದು ನಾನು ಮನೆಯಲ್ಲೇ ಇದ್ದೆ. ಅಮ್ಮ ಕಿಟಕಿ ಬಾಗಿಲನ್ನು ಮುಚ್ಚಿ 'ಎಲ್ಲರೂ ಬೆಂಕಿಯುಗಳಲು ಆರಂಭಿಸಿದ್ದಾರೆ, ಹೊರಗಡೆ ಹೊಗೆ ತುಂಬಿಕೊಂಡಿದೆ' ಎಂದಳು ಭಯದಿಂದ.

''ಇದ್ದಕ್ಕಿದ್ದಂತೆ ಅವರಿಗೇನು ಬಂತು ?''

''ಇದೆಲ್ಲ ಇದ್ದಕ್ಕಿದ್ದಂತೆ ಆಗಿಲ್ಲ, ಇದೊಂದು ಒಳಸಂಚು, ಎಲ್ಲರೂ ಬೆಂಕಿಯುಗುಳಲು ಸಮಯ ಸಂದರ್ಭ ನೋಡುತ್ತಿದ್ದರು, ಯಾರು ಬಂದರೂ ಬಾಗಿಲು ತೆರೆಯಬೇಡ, ಯಾರು ಕೂಗಿದರೂ ಉತ್ತರಿಸಬೇಡ'' ಎಂದಳು ಅಮ್ಮ.

''ಆಯಿತು'' ಎಂದೆ.

''ನೋಡಿದೆಯೇನು, ಅವನು ಬಂದು ಎಲ್ಲರಿಗೂ ಏನು ಕಲಿಸಿ ಹೋದ ?''

* * *

ಮೆಲ್ಲನೆ ಕಿಟಕಿ ತೆರೆದು ನೋಡಿದೆ.

ರಸ್ತೆಗಳು ಬಿಕೋ ಎನ್ನುತ್ತಿದ್ದವು. ಅಂಗಡಿ ಮುಂಗಟ್ಟು ಮುಚ್ಚಿದ್ದವು. ಜನ ಚೀರುತ್ತ ಓಡಾಡುತ್ತಿದ್ದರು.

ಎಲ್ಲರೂ ಯಾಕಾಗಿ ಎಲ್ಲವನ್ನೂ ಭಸ್ಮಮಾಡಲು ಹೊರಟಿದ್ದಾರೆಂದು ತಿಳಿಯದೆಹೋಯಿತು.

''ಅವನ ಸಭೆಗೆ ಹೋಗದಿದ್ದರೆ ಒಳ್ಳೆಯದಾಯಿತು. ಇನ್ನು ಯಾರ ಸಭೆಗೂ ಹೋಗಬೇಡ, ಯಾರ ಭಾಷಣವೂ ಕೇಳಬೇಡ'' ಎಂದಳು ಅಮ್ಮ.

''ಅಮ್ಮ ನಾನು ನಮ್ಮ ಪ್ರಾರ್ಥನಾ ಮಂದಿರಕ್ಕೆ ಹೋಗುತ್ತೇನಲ್ಲ, ಅಲ್ಲಿ ಸಹ ಗುರುಗಳು ಭಾಷಣ ಮಾಡುತ್ತಾರೆ, ಅವರು ಭಾಷಣ ಮಾಡುತ್ತಿದ್ದರೆ ಅವರು ಬೆಂಕಿಯುಗುಳುವವರೇನೋ ಎಂಬ ಅನುಮಾನ ಉಂಟಾಗುತ್ತೆ.''

''ಎಲ್ಲಾ ಕಡೆಯೂ ಒಂದಲ್ಲ ಒಂದು ರೂಪದಲ್ಲಿ ಬೆಂಕಿಯುಗುಳುವವನು ಇದ್ದೇ ಇರುತ್ತಾನೆ. ಎಚ್ಚರದಿಂದಿರು.''



...ಏನ್ರೀ ಇದು....

'ಉಡುಪಿ ಪರ್ಯಾಯ ವಿವಾದ'

ರಾಷ್ಟ್ರೀಯ ಸಮಸ್ಯೆ ಆಗಿಬಿಟ್ಟಿದೆಯಲ್ರೀ...!!

ಕಿಟಕಿ ಹೊರಗಡೆ ಹರಡಿರುವ ಹೊಗೆಯನ್ನು ನೋಡುತ್ತ ನಿಂತುಕೊಂಡಾಗ,

''ಬಹಳ ಹೊತ್ತಿನವರೆಗೆ ಬೆಂಕಿ ನೋಡಬೇಡ. ಆಮೇಲೆ ನೀನೂ ಸಹ ಬೆಂಕಿಯುಗುಳುವುದಕ್ಕೆ ಪ್ರಾರಂಭಿಸಿಬಿಡುತ್ತೀಯಾ.'' ಕೂಡಲೇ ಕಿಟಕಿ ಮುಚ್ಚಿದೆ.

''ಎಷ್ಟೋ ವಾಹನಗಳು ರಸ್ತೆಯಲ್ಲಿ ಭಸ್ಮವಾಗುತ್ತಿವೆ.''

''ಅವರಿಗೆ ಎಲ್ಲವನ್ನೂ ಭಸ್ಮ ಮಾಡುವುದೇ ಒಂದು ಅಭ್ಯಾಸ.''

''ಇದರಿಂದ ಅವರಿಗೆ ಏನು ಸಿಗುತ್ತೆ ?''

''ಅದೆಲ್ಲ ಕೇಳಬೇಡ, ಅವರಿಗೆ ಅದೊಂದು ಆಟ.'' ಅವರ ಬಗ್ಗೆ ಯೋಚಿಸುವುದು ಬೇಡವೆಂದೂ ಯಾವುದಾದರೂ ಪುಸ್ತಕ ಓದಬೇಕೆಂದೂ ಮನಸ್ಸಾಯಿತು. 'ಕೆಲವು ಪುಸ್ತಕಗಳು ಬೆಂಕಿಯುಗುಳುವುದನ್ನು ಕಲಿಸುತ್ತವೆ' ಎಂದು ಯಾರೋ ಹೇಳಿದ್ದ ನೆನಪಾಯಿತು. ಪುಸ್ತಕವನ್ನು ಮುಚ್ಚಿಟ್ಟೆ. ಮೊನ್ನೆ ಇತಿಹಾಸ ಓದಿಸುವ ಮೇಷ್ಟ್ರು ಹೇಳಿದ್ದು ನೆನಪಾಯಿತು, ''ಇತ್ತೀಚೆಗೆ ಇತಿಹಾಸ ತಿರುಚುವುದೇ ಕೆಲಸವಾಗಿದೆ.''

* * *

ಊರು ಭಸ್ಮವಾಗುತ್ತಿರುವಾಗ ಮನೆಯಿಂದ ಹೊರಬಂದೆ. ಬೆಂಕಿಯುಗುಳವ ಶಕ್ತಿ ನಾನು ಸಹ ಹೊಂದಿದ್ದೇನೆಂಬ ವಿಶ್ವಾಸ ಬಂದು ಕೂಡಲೇ ಬೆಂಕಿಯುಗುಳುವ ಬಯಕೆಯಾಯಿತು. ಅದೇ ಸಮಯದಲ್ಲಿ ಇನ್ನೊಂದು ವಿಚಾರ ಹೊಳೆಯಿತು. ಅದೇನೆಂದರೆ, ಇನ್ನು ನನ್ನನ್ನು ಹಿಂಬಾಲಿಸುವವರು ಅನೇಕರಿದ್ದಾರೆ ಎಂದು. ಬೀದಿಯಲ್ಲಿ ಈ ಹೊಸ ವಿಚಾರ ಹೊಳೆದ ಕೂಡಲೇ ಹೊಸ ಚೈತನ್ಯ ಬಂದಂತಾಯಿತು.

ಹಿಂಬಾಲಕರು ಸಹ ನನ್ನೊಂದಿಗೆ ಹೆಜ್ಜೆಯಿಟ್ಟರು. ಮಗುವನ್ನು ಎದೆಗವಚಿಕೊಂಡು ಓಡೋಡಿ ಬರುತ್ತಿರುವ ಮಹಿಳೆಯಿಂದ ಮಗುವನ್ನು ಕಿತ್ತುಕೊಂಡು ಮಗುವಿನ ಎರಡು ಕಾಲನ್ನು ಹಿಡಿದು ಸೀಳಿ ದೂರ ಬಿಸಾಕಿದೆ. ಇದನ್ನು ಕಂಡು ಹಿಂಬಾಲಕರು ಸಂತೋಷದಿಂದ ಕುಣಿದಾಡಿದರೆ, ಅತ್ತ ಮಹಿಳೆ ಮೂರ್ಛೆಹೋದಳು. ಮೂರ್ಛೆಹೋದ ಮಹಿಳೆಯನ್ನು ಬೆತ್ತಲೆಗೊಳಿಸಿ ಬೆಂಕಿಯುಗುಳಿ ಅಲ್ಲಿಂದ ಹೆಮ್ಮೆಯಿಂದ ನಾಲ್ಕು ಮಾರು ನಡೆಯುವಷ್ಟರಲ್ಲಿ ಎದುರಿಂದ ವೇಗವಾಗಿ ಬರುತ್ತಿರುವ ಕಾರೊಂದನ್ನು ನೋಡಿ ಹಿಂಬಾಲಕರಿಗೆ ರಸ್ತೆಯ ಮಧ್ಯೆ ಕಲ್ಲುಗಳನ್ನು ಹಾಕಲು ಸೂಚಿಸಿದೆ. ನಾನು ಹೇಳಿದ್ದನ್ನು ಅವರು ಚಾಚೂತಪ್ಪದೆ ಮಾಡಿದರು. ಕಲ್ಲುಗಳನ್ನು ದಾಟಲು ಕಾರಿಂದ ಸಾಧ್ಯವಾಗಲಿಲ್ಲ. ಕಾರಿನಲ್ಲಿ ಇಡೀ ಒಂದು ಕುಟುಂಬವೇ ಇತ್ತು. ಪುಟ್ಟ ಮಕ್ಕಳೂ ಇದ್ದರು.

''ದಯವಿಟ್ಟು ನಮ್ಮನ್ನು ಸುಡಬೇಡಿ, ನಾವು ಅಮಾಯಕರು.'' ಎಲ್ಲರೂ ಅಸಹಾಯಕರಾಗಿ ಕೈ ಜೋಡಿಸಿದರು.

''ನಾವು ಹೊರಬಂದಿರುವುದೇ ಬೆಂಕಿಯುಗಳಲು'' ಎಂದು ಬೆಂಕಿಯುಗುಳಿದೆ. ಭೂಮಿಯಿಂದ ಮೊಳಗಿದ ಚೀರಾಟ ಆಕಾಶವನ್ನೇ ನಡುಗಿಸಿತು. 'ಭೂಮಿಯೇ ಗಟ್ಟಿ, ಭೂಮಿ ಮೇಲಿರುವ ಬೆಂಕಿಯುಗುಳುವವರು ಭೂಮಿಗಿಂತ ಗಟ್ಟಿ' ಎಂದೆನಿಸಿತು.

ಕಂಡಕಂಡವರ ಮೇಲೆ ಬೆಂಕಿಯುಗುಳುತ್ತ ಮುನ್ನಡೆದೆ. ಹಿಂಬಾಲಕರು ನಾನು ಆಜ್ಞಾಪಿಸುತ್ತಿದ್ದಂತೆ ಚಾಚೂತಪ್ಪದೆ ಮಾಡುತ್ತಿದ್ದುದನ್ನು ಗಮನಿಸಿ ಆಶ್ಚರ್ಯವಾಯಿತು. ಎಲ್ಲೆಲ್ಲೂ ಕತ್ತಲು. ಆದ್ದರಿಂದ ಅವರೆಷ್ಟು ಮಂದಿಯಿದ್ದಾರೆಂದು ಅಂದಾಜುಮಾಡುವುದು ಕಷ್ಟವೆನಿಸಿತು. ನನ್ನನ್ನು ಹಿಂಬಾಲಿಸುತ್ತಿರುವವರು ಯಾರಿರಬಹುದು ? ಇದ್ದಕ್ಕಿದ್ದಂತೆ ಎದ್ದ ಈ ಸಂದೇಹದಿಂದ ಹೆದರಿಕೆಯಾಯಿತು. 'ಒಂದು ವೇಳೆ ನನ್ನನ್ನು ಹಿಂಬಾಲಿಸುತ್ತಿದ್ದವರೇ ಸಮಯ ಸಂದರ್ಭ ನೋಡಿ ನನ್ನ ಮೇಲೆ ಒಟ್ಟಿಗೆ ಬೆಂಕಿಯುಗುಳಿದರೆ ಏನು ಮಾಡುವುದು ? ಇದರಿಂದ ಯಾವ ರೀತಿ ತಪ್ಪಿಸಿಕೊಳ್ಳುವುದು ? ಇವರೆಲ್ಲರೂ ನಮ್ಮ ನೆರೆಹೊರೆಯವರೆ ಅಥವಾ ಅಪರಿಚಿತರೆ ?' ಎಂದೆಲ್ಲ ಯೋಚಿಸುತ್ತ ಮುನ್ನಡೆಯುತ್ತಿರುವಾಗ ಸ್ವಲ್ಪ ದೂರದಲ್ಲಿ ಯಾರೋ ಒಬ್ಬ ಪಂಜನ್ನು ಹಿಡಿದುಕೊಂಡು ಹೋಗುತ್ತಿರುವುದು ಗಮನಕ್ಕೆ ಬಂತು. ಅವನತ್ತ ಓಡಿದೆ. ಹಿಂಬಾಲಕರು ಸಹ ನನ್ನೊಂದಿಗೆ ಓಡಿ ಬಂದರು. ಪಂಜು ಹಿಡಿದವನಿಂದ ಪಂಜು ಕಿತ್ತುಕೊಂಡೆ. ''ಬೇಡ, ಬೇಡ, ನೀವು ತಿಳಿದುಕೊಂಡಿರುವಂತೆ ನಾನು ಯಾರನ್ನೂ ಸುಡುವುದಕ್ಕೆ ಹೋಗುತ್ತಿಲ್ಲ, ತುಂಬ ಕತ್ತಲೆ ಹರಡಿಕೊಂಡಿದೆ, ಈ ಕತ್ತಲೆಯಲ್ಲಿ ಯಾರಾದರೂ ದಾರಿ ತಪ್ಪಿಸಿಕೊಂಡಿದ್ದರೆ ಅವರಿಗೆ ದಾರಿ ತೋರಿಸಲು ಈ ಪಂಜು ಹಿಡಿದುಕೊಂಡು ಹೋಗುತ್ತಿದ್ದೇನೆ, ಪಂಜು ಕೊಡಿ'' ಎಂದು ಪಂಜಿನವನು ವಿನಂತಿಸಿಕೊಂಡ.

'ನಾನೇನಾದರೂ ದಾರಿ ತಪ್ಪಿಸಿಕೊಂಡಿರಬಹುದೆ, ನನ್ನನ್ನು ಹಿಂಬಾಲಿಸುತ್ತಿದ್ದವರು ಸಹ ನನ್ನಂತೆಯೇ ದಾರಿ ತಪ್ಪಿಸಿಕೊಂಡಿರಬಹುದೇ ?'

ಈ ಹೊಸ ವಿಚಾರ ಹೊಳೆದ ಕೂಡಲೇ ಪಂಜನ್ನು ಹಿಡಿದು ಹಿಂದೆ ನಿಂತಿರುವವರ ಮುಖಗಳ ಮೇಲೆ ಬೆಳಕು ಚೆಲ್ಲಿದೆ. ಆಶ್ಚರ್ಯವಾಯಿತು, ಇದೇನು ನನ್ನನ್ನು ಹಿಂಬಾಲಿಸುತ್ತಿದ್ದವರೆಲ್ಲರ ಮುಖಗಳು ನನ್ನಂತೆಯೇ ಇದ್ದವು. ಅವರೆಲ್ಲರೂ ಸೇರಿ ನನ್ನ ಕಡೆ ಒಟ್ಟಿಗೆ ಬೆಂಕಿಯುಗುಳಲು ಪ್ರಾರಂಭಿಸಿದರು.

**ಆದೀಬ್ ಅಖ್ತರ್**

C/o ಖಾನ್ ಮೊಹಮ್ಮದ್, ಬನ್ನೂರು - ೫೭೧ ೧೦೧

ಮೈಸೂರು ಜಿಲ್ಲೆ.

ಮರುಕ್ಷಣದಲ್ಲೇ ನಾವೆಲ್ಲ ರೂಮಿನತ್ತ ಧಾವಿಸಿಹೋಗಿ ನೋಡಿದರೆ... ಪ್ರಭುದೇವ ಗಡಗಡ ನಡುಗುತ್ತ ಬೆಪ್ಪನಾಗಿ ನಿಂತಿದ್ದ. ಅವನೆದುರಿಗೆ ಅನತಿ ದೂರದಲ್ಲಿ ನೆಲದ ಮೇಲೆ ಹಲ್ಲಿಯೊಂದು ಬಿದ್ದಿತ್ತು. ಒಂಚೂರು ಮಿಸುಕಾಟವಿಲ್ಲ. ಅದೇನು ಜೀವಂತವಿದೆಯೋ ಎಂಬುದನ್ನು ಖಚಿತಪಡಿಸಲು ನೆಲದ ಮೇಲೆ ಸದ್ದುಮಾಡಿದೆ. ತಕ್ಷಣ ಎಚ್ಚೆತ್ತುಕೊಂಡ ಹಲ್ಲಿ ಸರಸರನೆ ಹರಿದುಹೋಗಿ ಮೂಲೆ ಸೇರಿಕೊಂಡಿತು. ಆಗ ಹೊಳೆಯಿತು ಪ್ರಭುದೇವ ಚೀರಿದ್ದಕ್ಕೆ ಕಾರಣ. ರೂಮಿನಲ್ಲಿ ಬಾಗಿ ಕುಳಿತು ಲೆಕ್ಕ ಬಿಡಿಸುತ್ತಿದ್ದಾಗ ಚಾವಣಿಯ ಮೇಲೆ ಹರಿದಾಡುವ ಹಲ್ಲಿ ಜಾರಿ, ಬೆನ್ನಮೇಲೆ ಧಪ್ಪಂತ ಬಿದ್ದಾಗ ಭಯಗೊಂಡು ಕಿರುಚಿದ್ದು.

# ಬಂಗಾರದ ಹಲ್ಲಿ



ಡಾ॥ ರುದ್ರಯ್ಯ ವಿ. ಗದಗ

**ಬು**ಧವಾರ ದಿನ ಮುಂಜಾನೆ ನನಗೆ ಪ್ರಜ್ಞೆ ಮರುಕಳಿಸಿದಾಗ ಸುಮಾರು ಹತ್ತುಗಂಟೆ, ನಾನು ಎಲ್ಲಿದ್ದೇನೆ...? ಅಂತ ಯೋಚಿಸಿದೆ. ತಟ್ಟನೆ ಉತ್ತರ ಹೊಳೆಯಲಿಲ್ಲ. ಸುತ್ತಲೂ ಕಣ್ಣು ಹಾಯಿಸಿದೆ. ಅತ್ತಿಂದಿತ್ತ ಸರಿದಾಡುತ್ತಿದ್ದ ಡಾಕ್ಟರ್, ನರ್ಸ್‌ಗಳನ್ನು ಗಮನಿಸಿದಾಗ ಗೊತ್ತಾಯ್ತು – ಕಾಲಿಗೆ ಪ್ಲಾಸ್ಟರ್, ಮೈತುಂಬಾ ಬ್ಯಾಂಡೇಜ್ ಪಟ್ಟಿಧಾರಿಯಾದ ನಾನು 'ನರ್ಸಿಂಗ್ ಹೋಂ'ನಲ್ಲಿ ಸೂರು ಎಣಿಸುತ್ತಿದ್ದೆ. ನನ್ನ ಪಕ್ಕದಲ್ಲಿದ್ದ ಪ್ರಭುದೇವನದೂ ನನ್ನದೇ ಸ್ಥಿತಿ. ವಿಶೇಷವೆಂದರೆ ಮೊನ್ನೆ ಮಹಾದೇವನನ್ನು ಸೇರಿಸಿದ್ದ 'ಸಿಟಿ ನರ್ಸಿಂಗ್ ಹೋಂ'ನಲ್ಲೇ ನಾವೀಗ ವಿಶ್ರಮಿಸಿದ್ದು.

ಅಪಘಾತದಲ್ಲಿ ನಾನು ಬದುಕುಳಿದದ್ದೇ ಒಂದು ಪವಾಡ! ಎಂದು ನರ್ಸ್ ಯಾರಿಗೋ ಹೇಳುತ್ತಿದ್ದ ಪಿಸುಮಾತು ನನ್ನ ಕಿವಿಗೆ ಬಿತ್ತು. ಅರಸಿಬಂದ ಅಪಮೃತ್ಯು ಬಾಗಿಲು ತಟ್ಟಿ ವಾಪಸ್ಸು ಹೋಗಿದ್ದು ನನ್ನ ಆಯುರ್ಮಾನ ಇನ್ನೂ ಮುಗಿದಿರಲಿಲ್ಲ ಹೊರತು ಪವಾಡದಿಂದಲ್ಲ.

ಮೂರು ಹಗಲು ರಾತ್ರಿಗಳು ಹೇಗೆ ಉರುಳಿಹೋದವೋ ಗೊತ್ತಿಲ್ಲ. ಮೈಕೈ ಮೊಂಡು ಹಿಡಿದಿದ್ದರೂ ಮನಸ್ಸು ನಿರಾಳವಾಗಿತ್ತು. ಬಹುಶಃ ಸುದೀರ್ಘ ಸಮಯದ ನಿದ್ದೆಯ ಪರಿಣಾಮವಿರಬೇಕು. ಅಪಘಾತಕ್ಕೆ ಈಡಾಗೋ ಮುಂಚಿನ ಘಟನಾವಳಿಗಳ ಸುರುಳಿ ನನ್ನ ಮನಃಪಟಲದ ಮೇಲೆ ಬಿಚ್ಚಿಕೊಳ್ಳತೊಡಗಿತು.

* * *

ಶ್ರಾವಣದ ಕಡೇ ಸೋಮವಾರ ನಮ್ಮೂರು ಕಾಗೆಹಳ್ಳಿಯ ಬಸವಣ್ಣನ ವಾರ್ಷಿಕ ರಥೋತ್ಸವಕ್ಕೆ ಬರಲು ನನ್ನ ತಮ್ಮ ಮಹಾದೇವನಿಂದ ಆಹ್ವಾನ ಬಂದಿತ್ತು. ಬರದಿದ್ದರೂ ಜಾತ್ರೆ ನೆಪದಲ್ಲಿ ನಾನು ಮಡದಿ ಮಕ್ಕಳೊಂದಿಗೆ ಒಂದು ವಾರ ಪಟ್ಟಣದ ಜಂಜಡದಿಂದ ದೂರಸರಿದು, ಹಳ್ಳಿಯ ಗದ್ದೆ- ತೋಟಗಳಲ್ಲಿ ಅಲೆದಾಡಿ, ಸಿಕ್ಕಿದ್ದು ತಿಂದು, ಕುಡಿದು, ಮಜಾ ಮಾಡಿ, ವರ್ಷಕ್ಕಾಗುವಷ್ಟು ಚೈತನ್ಯ ಮೈಗೂಡಿಸಿಕೊಂಡು ವಾಪಸ್ಸು ಬರೋದನ್ನು ರೂಢಿಸಿಕೊಂಡಿದ್ದೆ.

ಕಾಗೆಹಳ್ಳಿಯ ಮನೆಯಲ್ಲಿರುವವರು – ಮಹಾದೇವ, ಆತನ ಮಡದಿ ಸುಕನ್ಯಾ ಹಾಗೂ ಹಾಯಿಸ್ಕೂಲ ಓದುವ ಪ್ರಭುದೇವ. ಹಮ್ಮು-ಬಿಮ್ಮು ಒಂದೂ ಇಲ್ಲದ ಸಾಧುವ್ಯಕ್ತಿ. ಭಾವುಕ ಜೀವಿ. ಸಣ್ಣ ಘಟನೆ ಕೂಡ ಆತನ ಮನಸ್ಸಿಗೆ ತುಂಬಾ ಘಾಸಿಪಡಿಸುತ್ತಿತ್ತು. 'ಮೇಟಿ ವಿದ್ಯೆಯೇ ಮೇಲು' ಎಂಬುದನ್ನು ನಂಬಿ ಹಾಯಿಸ್ಕೂಲ ಮುಗಿಸಿ, ಹಳ್ಳಿಯಲ್ಲೇ ನೆಲಸಿ ತನ್ನ ಭವಿಷ್ಯ ರೂಪಿಸಿಕೊಂಡ ಛಲವಾದಿ. ಪಿತ್ರಾರ್ಜಿತ ಗದ್ದೆ-ತೋಟಗಳಲ್ಲಿ ಹಗಲಿರುಳೆನ್ನದೆ ಬೆವರು ಹರಿಸಿದ ಫಲವಾಗಿ ಈಗ ತುಂಬಾ ಗಟ್ಟಿಕುಳ.

ಇತ್ತೀಚೆಗಂತೂ ಮಹಾದೇವನಿಗೆ ಸದಾ ಮಗನದೇ ಯೋಚನೆ. ಅವನನ್ನು ಚೆನ್ನಾಗಿ ಓದಿಸಬೇಕು, ಒಂದು ದಡಕ್ಕೆ ಹಚ್ಚಬೇಕು, ಮದುವೆ ಮಾಡಬೇಕು, ನೋಡಿದವರು ಹೆಮ್ಮೆಪಡುವಂತೆ ಛಂದಾಗಿ ಬಾಳಬೇಕು – ಏನೇನೋ ಆಸೆಗಳು. ಇದು ಮಹಾದೇವನ ಕೌಟುಂಬಿಕ ಸ್ಥೂಲ ಚಿತ್ರಣ.

ನಾನು ಶುಕ್ರವಾರ ಬೆಳಗ್ಗೆ ಹೆಂಡತಿ ಮಕ್ಕಳೊಂದಿಗೆ ಹಳ್ಳಿ ಬಸ್ಸು ಏರಿಹೋಗಿ ಒಂಭತ್ತು ಹೊಡೆಯುವ ಹೊತ್ತಿಗೆ ಮನೆಯಲ್ಲಿದ್ದೆವು. ಆಗಲೇ ನಾಷ್ಟಾಕ್ಕೆ ಅಣಿಗೊಳಿಸಿದ್ದರು. ಎಲ್ಲರೂ ವಿಶಾಲವಾದ ಪಡಸಾಲೆಯಲ್ಲಿ ಸೌಹಾರ್ದ ವಾಗಿ ಕೂತು, ಉಪಚಾರ ಹೇಳಿಸಿಕೊಳ್ಳದೆ, ಸ್ವಾದಿಷ್ಟ ಉಪಾಹಾರ ಮೆಲ್ಲುತ್ತ ಲೋಕಾಭಿರಾಮ ಮಾತಿನಲ್ಲಿ ಮುಳುಗಿದ್ದೆವು. ಅದೇ ಸಮಯಕ್ಕೆ ಯಾರೋ ಕಿಟಾರಂತ ಕಿರುಚಿಕೊಂಡಿದ್ದು ರೂಮಿನಿಂದ ಕೇಳಿಬಂತು.

ಮರುಕ್ಷಣದಲ್ಲೇ ನಾವೆಲ್ಲ ರೂಮಿನತ್ತ ಧಾವಿಸಿಹೋಗಿ ನೋಡಿದರೆ... ಪ್ರಭುದೇವ ಗಡಗಡ ನಡುಗುತ್ತ ಬೆಪ್ಪನಾಗಿ ನಿಂತಿದ್ದ. ಅವನೆದುರಿಗೆ ಅನತಿ ದೂರದಲ್ಲಿ ನೆಲದ ಮೇಲೆ ಹಲ್ಲಿಯೊಂದು ಬಿದ್ದಿತ್ತು. ಒಂಚೂರು ಮಿಸುಕಾಟವಿಲ್ಲ. ಅದೇನು ಜೀವಂತವಿದೆಯೋ ಎಂಬುದನ್ನು ಖಚಿತಪಡಿಸಲು ನೆಲದ ಮೇಲೆ ಸದ್ದುಮಾಡಿದೆ. ತಕ್ಷಣ ಎಚ್ಚೆತ್ತುಕೊಂಡ ಹಲ್ಲಿ ಸರಸರನೆ ಹರಿದುಹೋಗಿ ಮೂಲೆ ಸೇರಿಕೊಂಡಿತು. ಆಗ ಹೊಳೆಯಿತು ಪ್ರಭುದೇವ ಚೀರಿದ್ದಕ್ಕೆ ಕಾರಣ. ರೂಮಿನಲ್ಲಿ ಬಾಗಿ ಕುಳಿತು ಲೆಕ್ಕ ಬಿಡಿಸುತ್ತಿದ್ದಾಗ ಚಾವಣಿಯ ಮೇಲೆ ಹರಿದಾಡುವ ಹಲ್ಲಿ ಜಾರಿ ಬೆನ್ನಮೇಲೆ ಧಪ್ಪಂತ ಬಿದ್ದಾಗ ಭಯಗೊಂಡು ಕಿರುಚಿದ್ದು.

ಆಗ ಹಿರಿಯರೊಬ್ಬರ ತಲೆಯಲ್ಲಿ ಅದ್ಭುತ ಯೋಚನೆಯೊಂದು ಮಿಂಚಿರಬೇಕು. [illegible] ಹಿಡಿದು, ದರದರ ಎಳಕೊಂಡುಹೋಗಿ, ಹೊರಾಂಗಣದಲ್ಲಿ ನಿಲ್ಲಿಸಿ, ಎದುರಿಗಿನ [illegible] ಹೇಳಿದರು. ಹಲ್ಲಿ ಬಿದ್ದ ದೋಷ ಪರಿಹಾರಕ್ಕೆ ಹಸಿರುಮರ ನೋಡೋದು ಹಳ್ಳಿಜನರು [illegible] ಸುಲಭೋಪಾಯ.

''ಹೀಂಗ್ ಹಸಿರುಮರ ನೋಡಿದ್ರ ಹಲ್ಲಿಶಕುನ ಹರ್‍ಕೊಂಡು ಹೋಗುಲ್ಲ. ಬಡಾನೆ ಹೋಗಿ ಪಂಡಿತರಲ್ಲಿ ಶಾಸ್ತ್ರ ಕೇಳೋದು ವಾಸಿ'' ಮತ್ತೋರ್ವ ಯಜಮಾನರಿಂದ ಹೊಸ ಸಲಹೆ ಬಂತು. ಅದಕ್ಕೆ ನನ್ನನ್ನು ಬಿಟ್ಟು ಸರ್ವಾನುಮತದ ಮುದ್ರೆ ಬಿತ್ತು. ನನಗೆ ನಗು ಬಂತು.

ವಿಜ್ಞಾನಿಯಾದ ನನಗೆ ಮೂಢನಂಬಿಕೆಗಳಲ್ಲಿ ಒಂದಿನಿತು ವಿಶ್ವಾಸವಿಲ್ಲ. ಯಾವುದನ್ನೂ ಪೂರ್ವಾಪರ ಯೋಚಿಸದೆ ತೀರ್ಮಾನ ತೆಗೆದುಕೊಳ್ಳೋ ಜಾಯಮಾನ ನನ್ನದಲ್ಲ. ಹಲ್ಲಿಶಕುನ ಕೇಳುವ ಸರ್ವಾನುಮತದ ಅಭಿಪ್ರಾಯವನ್ನು ನಾನು ಸಮರ್ಥಿಸುವುದು ದೂರದ ಮಾತು. ಒಂದು ವೇಳೆ ವಿರೋಧಿಸಿದರೆ... ? ಒಂಟಿ ದನಿಯಾಗಿ ಕೂಡಿದ ಮಂದಿಯಲ್ಲಿ ನಾನೊಬ್ಬ ಗೇಲಿ ವಸ್ತುವಾಗುವ ಅಳುಕು ! ಸಂಕೋಚ ಸ್ವಭಾವದ ನಾನು ಬಾಯಿಗೆ ಬೀಗ ಜಡಿಯದೆ ಬೇರೇ ವಿಧೀನೇ ಇದ್ದಿಲ್ಲ!

ಹಲ್ಲಿದೋಷ ಮಗನ ಮೇಲೆ ಯಾವ ರೀತಿ ಪರಿಣಾಮ ಬೀರೀತು...? ಅವನಿಗೆ ಯಾವ ಕೇಡು ಕಾದಿದೆ...? ಎಂಬ ಪ್ರಶ್ನೆಗಳು ಮಹಾದೇವನನ್ನು ಮಾನಸಿಕ ಆಘಾತಕ್ಕೆ ಎಡೆಮಾಡಿತು. ಕುಂಡಿಸುಟ್ಟ ಬೆಕ್ಕಿನ ಹಾಗೆ ಕುಂತಲ್ಲೆ ಕೂಡದೆ ಅಡ್ಡಾಡಕ್ಕೆ ಹತ್ತಿದ್ದ. ಇದಕ್ಕೆ ಸೂಕ್ತ ಪರಿಹಾರ ಪಂಡಿತರಿಂದಲೇ ಸಾಧ್ಯ ಎಂಬ ತೀರ್ಮಾನಕ್ಕೆ ಬಂದ. ಬೀಸೋ ದೊಣ್ಣೆ ತಪ್ಪಿಸಿಕೊಂಡರೆ ಸಾಕೆಂದು ನೇರವಾಗಿ ಪಂಡಿತರ ಮನೆ ಕಡೆ ದೌಡಾಯಿಸಿದ. ಪಂಡಿತರೆದುರು ಎಲೆ-ಅಡಕೆ, ದಕ್ಷಿಣೆ ಇರಿಸಿ ಕೂತ. ಬಳಿಕ ವಿಷಯ ಪ್ರಸ್ತಾಪಿಸಿದ.

ಶುಕ್ಲಾಚಾರಿ ಪಂಡಿತರು ಮೊದಲಿಗೆ ಪಂಚಾಂಗ ಓದಿದರು. ನಂತರ ಜ್ಯೋತಿಷ್ಯಶಾಸ್ತ್ರದ ಗ್ರಂಥದಲ್ಲಿ ಪರಿಶೋಧನೆ ಮಾಡಿದರು. ತದನಂತರ ಪಾಟಿ ಮೇಲೆ ಅಡ್ಡಾದಿಡ್ಡಿ ಗೆರೆ ಕೊರೆದು ಅಂಕಿ-ಸಂಖ್ಯೆ ತುಂಬಿದರು. ಆಮೇಲೆ ಕವಡೆ ಹಾಕಿ, ಕೈಬೆರಳು ಎಣಿಸಿ, ಕೂಡಿಸಿ ಕಳೆದು, ತಾಳೆಹಾಕಿ ಲೆಕ್ಕ ಹಾಕಿದರು. ಕೊನೆಗೆ ಹುಬ್ಬೇರಿಸಿ, ಕಣ್ಮುಚ್ಚಿ ಗಹನ ಯೋಚನೆಯಲ್ಲಿ ಕಳೆದುಹೋದರು.

**ರೈತರ ಪಂಪ್‌ಸೆಟ್‌ಗೆ ಉಚಿತ ವಿದ್ಯುತ್ :**

ಮಾಜಿ. ಸಿ.ಎಂ. ಯಡಿಯೂರಪ್ಪ



**...ನಾವು ಅಧಿಕಾರಕ್ಕೆ ಬಂದ್ರೆ 'ರೈತರಿಗೆ ಉಚಿತ ಪಂಪ್‌ಸೆಟ್' ಕೊಡ್ತೀವಿ ಅಂತ ಹೇಳಿ ಸಾರ್...!**

ಪಂಡಿತರ ನಟನೆ ಮಹಾದೇವನಿಗೆ ವಿಚಿತ್ರವೆನಿಸಿತು. ಚಣಕ್ಕೊಮ್ಮೆ ಬದಲಾಗುತ್ತಿದ್ದ ಮುಖಭಾವವನ್ನೇ ಬೆರಗು ಕಣ್ಣುಗಳಿಂದ ದಿಟ್ಟಿಸುತ್ತ ತಲೆಗೆ ಕೈ ಹಚ್ಚಿಕೊಂಡು ಅಡ್ಡ ಬಾಯಿ ಹಾಕದೆ ಶಿಲೆಯಾಗಿ ಕೂತಿದ್ದ. ತುಸು ಹೊತ್ತಿನ ನಂತರ ಪಂಡಿತರು ಬಾಯಿಬಿಟ್ಟರು.

''ಹಲ್ಲಿ ಪ್ರಭುದೇವನ ಬೆನ್ನಮ್ಯಾಲಿ ಬಿದ್ದೈತ್ರಿ. ಯಮ ಗಂಡಕಾಲದಲ್ಲಿ! ಮುಂಬರುವ ಭೀಕರ ಅಪಘಾತದ ಮುನ್ಸೂಚನೆ. ಈ ಕಂಟಕದಿಂದ ಪಾರಾಗಾಕ ಇರೋದು ಒಂದ್ ಹಾದಿ – ಕಂಚಿಯ ವಿಷ್ಣುಕಂಚಿ ದೇವಾಲಯದ ಗ್ವಾಡಿಮ್ಯಾಗಿರೋ ಬಂಗಾರದ ಹಲ್ಲಿನ್ ಮುಟ್ಟಿ ಬರೋದು. ವಾಪಸ್ಸು ಬಂದ ಬಳಿಕ ಮನ್ಯಾಗ ಸತ್ಯನಾರಾಯಣನ ಪೂಜೆ ಮಾಡ್ಸಿ, ಬಂಗಾರದ ಹಲ್ಲಿನ್ ದಾನ ಕೊಟ್ರ ಸಂಪೂರ್ಣ ದೋಷ ಪರಿಹಾರ ಆಗ್ತದ. ಉದಾಸೀನ ಎಸಗಿದರೆ ತಲೆದಂಡ !'' ಶುಕ್ಲಾಚಾರಿ ಹಲ್ಲಿ ಶಕುನ ನುಡಿದು ಮಹಾದೇವನಲ್ಲಿ ಎಲ್ಲಿಲ್ಲದ ಭಯಭೀತಿ ಹುಟ್ಟುಹಾಕಿದರು.

''ಇನ್ನು ಆದರ ನಿಗಾ ನಂಗೆ ಬಿಡ್ರಿ. ನಿಮ್ಮ ಆಣತಿಯಂತೆ ಹೇಗಾರ ಮಾಡಿ ಪ್ರಭುದೇವನ್ನ ಕಂಚಿಗೆ ಕಳಿಸೋ ಏರ್ಪಾಡು ಮಾಡ್ತೀನ್ರೀ. ಸತ್ಯನಾರಾಯಣನ ಪೂಜೆ ನೀವೇ ಸಾಂಗಗೊಳಿಸಬೇಕ್ರೀ'' ಅಂತ ಹೇಳಿ ಮಹಾದೇವ ಮನೆಕಡೆ ತಿರುಗಿ ನಡೆದ.

ಹೋದ ಅರ್ಧಗಂಟೆಯೊಳಗೆ ಮಹಾದೇವ ಅನ್ಯ ಮನಸ್ಕನಾಗಿ, ಜೋಲುಮೋರೆ ಹಾಕಿಕೊಂಡು ವಾಪಸ್ಸಾಗಿದ್ದ. ಆತನ ಶಾಂತ ಮುಖದ ಮೇಲೆ ಈಗ ಆತಂಕದ ಗೆರೆಗಳು ! ಶುಕ್ಲಾಚಾರಿ ನುಡಿದ ಹಲ್ಲಿ ಶಕುನದ ವರದಿಯನ್ನು ನಮಗೆ ಒಪ್ಪಿಸಿದ. ಅದು ಆತನಿಗೆ ನುಂಗಲಾರದ ಬಿಸಿ ತುಪ್ಪ! ಪ್ರಭುದೇವನನ್ನು ಕಂಚಿಗೆ ಕರೆದೊಯ್ಯುವ ಉಸ್ತುವಾರಿಯನ್ನು ನನಗೆ ವಹಿಸಿದ. ಎಲ್ಲರೂ ಯಥಾಪ್ರಕಾರ ತಲೆಯಾಡಿಸಿ ತಮ್ಮ ಸಮ್ಮತಿ ಸೂಚಿಸಿದರು. ನನಗೆ ಸ್ವಲ್ಪವೂ ಹಿಡಿಸಲಿಲ್ಲ. ಬೆಟ್ಟದಷ್ಟು ಕೋಪ ಬಂತು.

'ಮೂಢನಂಬಿಕೆಗಳ ಬಗ್ಗೆ ನಾನು ಹೊಂದಿದ್ದ ವಿಚಾರಗಳನ್ನು ಅವರಿಗೆಲ್ಲ ಮನದಟ್ಟಾಗುವಂತೆ ಗಟ್ಟಿಯಾಗಿ ಹೇಳು' ಅಂತ ಒಳಮನಸ್ಸು ಚೀರಿ ಹೇಳಿತು. ಅದುಮಿಟ್ಟುಕೊಳ್ಳಲಾಗದ ಹುರುಪು ಹುಟ್ಟಿಕೊಂಡಿತು. ತುಸು ಯೋಚನಾಮಗ್ನನಾದೆ. ನಂತರ –

''ಹಲ್ಲಿ ಮೈಮ್ಯಾಲಿ ಬೀಳೋದು, ಕಾಗೆ ಮೆಟ್ಟು ನೋಡೋದು, ಪ್ರಯಾಣ ಹೊರಟಾಗ ಬೆಕ್ಕು ಅಡ್ಡ ಬರೋದು, ಗೂಬೆ ಮನಿಕುಂಬಿ ಮ್ಯಾಲಿ ಕೂತು ಕೂಗೋ ದು – ಅಶುಭಸೂಚಕ ಅಂತ ಸಾರೋದು ಶುದ್ಧ ಸುಳ್ಳು ! ಅವೆಲ್ಲ ನೈಸರ್ಗಿಕ ಕ್ರಿಯೆಗಳು. ಮೂಢ ನಂಬಿಕೆಗಳು ರೂಢ್ಯಾಗಿಂದ ಬಂದು ಬದುಕಿನಾಗ ಬೆರ್ತುಹೋಗ್ಯಾವು. ತರ್ಕಶಾಸ್ತ್ರದ ತೆಕ್ಕೆಗೆ ಸಿಗ್ದ, ಅವೈಜ್ಞಾನಿಕ ಕಟ್ಟುಪಾಡುಗಳು.

''ವಾಸ್ತು, ಜ್ಯೋತಿಷ್ಯ, ಹೋಮ-ಹವನ – ಜನರನ್ನ ಸಮಾಧಾನಪಡಿಸೋಕೆ ಹುಟ್ಕೊಂಡಿರೊ ಕಟ್ಟು ಕತೆಗಳು. ಜ್ಯೋತಿಷಿಗಳು, ಹಾಲಕ್ಕಿ ಗಿಳಿಶಕುನದವರು ಜನರ ಭಾವನೆಗಳ ಜೊತೆ ಚೆಲ್ಲಾಟವಾಡೋ ಊಸರವಳ್ಳಿಗಳು. ಸುಂದರವಾದ ಸುಳ್ಳು ಶಕುನ ನುಡಿದು, ಜನಸಾಮಾನ್ಯರ ಮನದಾಗ ಭಯಭೀತಿ ಹುಟ್ಸಿ ರಕ್ತ ಹೀರೊ ಜಿಗಣೆಗಳು.

''ಮೂಢನಂಬಿಕೆಗಳನ್ನು ನಂಬೋದು ಬೇಡ್ಯಾಗ

ಹೋಗೋ ದೆವ್ವನ್ನ ಮನ್ಯಾಗ ಸೇರ್ಸಿಕೊಂಡ್ಹಾಂಗ. ಬೆಚ್ಚಿ ಬೀಳಬ್ಯಾಡ್ರಿ. ಇದು ಸತ್ಯ ! ಈಗ ಬದುಕು ಭಾಳಷ್ಟು ಬದಲಾಗೈತಿ. ನೀವ್ಯಾಕ ಇನ್ನೂ ಬದಲಾಗ್ದೇ ಮೂಢನಂಬಿಕೆ ಗಳಿಗೆ ಜೋತು ಬಿದ್ದೀರೀ ? ಕಂಚಿಗೆ ಹೋಗಿ ಬಂಗಾರದ ಹಲ್ಲಿ ಮುಟ್ಟಿಬಂದ್ರ ಆಗೋ ಫಾಯ್ದ ಅಷ್ಟರಾಗ ಐತಿ. ಅದಕ್ಕೆ ನನ್ನ ಕೈಲಿ ಕಂಚಿಗೆ ಹೋಗಾಕಾಗುಲ್ಲ'' ನನ್ನ ವಿಚಾರಗಳನ್ನು ಆದಷ್ಟು ಖಾರವಾಗಿ, ಮನಕದಡುವಂತೆ ಮಂಡಿಸಿದೆ. ವಿಷಾದದ ಸಂಗತಿಯೆಂದರೆ ನನ್ನ ವಿಚಾರಗಳು ಒಂದಿಷ್ಟೂ ಪ್ರಭಾವ ಬೀರಿದಂತಿಲ್ಲ!

''ಬಿಸಿರಕ್ತದ ನಿಮ್ಮಂಥ ಆಧುನಿಕರಿಗೆ ಅದೆಲ್ಲಾ ಅರ್ಥಾಗುಲ್ಲ ಬಿಡು. ನಮ್ಗೆ ಊಟ ತಿಂಡಿಗಳೆಷ್ಟು ಮುಖ್ಯವೋ ಅಷ್ಟೇ ಮುಖ್ಯ ಶತಮಾನಗಳಿಂದ ಬಂದ ಸಂಪ್ರದಾಯಗಳು. ಇವನ್ನ ದಿವ್ಯ ನಿರ್ಲಕ್ಷ್ಯಕ್ಕೆ ಗುರಿ ಮಾಡಿದ್ರ ಬಾಳೆ ನಡಸೂದು ವಜ್ಜಾದೀತು! ಮಣ್ಣ ಪಾಲಾಗ್ತೀವಿ! ತಲೆಹರಟೆಗೆ ಇದು ಸಮಯ ಅಲ್ಲ. ಇವತ್ತು ರಾತ್ರಿ ಪ್ರಭುದೇವ್ನ ಕರ್ಕೊಂಡು ನೀ ಕಂಚಿಗೆ ಹೋಗ್ತೀಯಾ. ಅಪಸ್ವರ ಎತ್ತದ ಹೇಳಿದಷ್ಟು ಮಾಡು'' ಅಂತ ಮಹಾದೇವ ತಿರುಗೇಟು ನೀಡಿದ. ಮತ್ತೆ ಮುಂದುವರೆಸಿ –

''ಹಲ್ಲಿ ಶಕುನ ಕೇಳಿದಾಗಿಂದ ನಂಗ್ಯಾಕೋ ಎದೆಯಾಗ ಸೂಜಿ ಚುಚ್ಚಿದ್ಹಾಂಗ ಆಗೈತಿ. ತಡಕೊಳ್ಳಾಕ ಆಗವಲ್ದು. ತಮಣಿ ಮಾಡಿಕೊಳ್ಳಾಕ ಹಂಗ ತುಸು ಹೊತ್ತು ಮಲ್ಕೋತೀನಿ. ನನ್ನ ತಂಟೆಗೆ ಯಾರೂ ಬರಬ್ಯಾಡ್ರಿ'' ಅಂತ ಹೇಳಿ ಒಳಗೊಳಗೇ ನೋವು ನುಂಗುತ್ತ ದೀವಾನದ ಮೇಲೆ ಕಣ್ಮುಚ್ಚಿ ಮಲಗಿದ. ಆತನಿಗೆ ಹಲ್ಲಿಶಕುನದ ಪ್ರಭಾವ ಬಲವಾಗಿ ತಾಗಿರಬೇಕು. ಮಾನಸಿಕವಾಗಿ, ದೈಹಿಕವಾಗಿ ತುಂಬಾ ಬಸವಳಿದಿದ್ದ. ನನಗೆ ಯೋಚನೆಗಿಟ್ಟುಕೊಂಡಿತು. ಕೂಡಲೇ ಡಾಕ್ಟರ್ ಕರೆಯಿಸಿ ತಪಾಸಣೆ ಮಾಡಿಸಿದೆ.

''ಮಹಾದೇವನ ಬಿ.ಪಿ. ಯದ್ವಾತದ್ವಾ ಏರಿ, ಹಗುರಾಗಿ ಹೃದಯಾಘಾತ ಆಗಿರಬೌದು. ಯಾವ್ದಕೂ ನಗರದ ತಜ್ಞ ಡಾಕ್ಟರ್ ಬಳಿ ಹೋಗೋದು ವಾಸಿ'' ಡಾಕ್ಟರ್ ಸಲಹೆ ಕೊಟ್ಟರು. ತಡಮಾಡದೆ ನೇರವಾಗಿ ನಗರಕ್ಕೆ ಹೋಗಿ ಮಹಾದೇವನ್ನ ಖಾಸಗಿ 'ಸಿಟಿ ನರ್ಸಿಂಗ್ ಹೋಂ'ಗೆ ಸೇರಿಸಿದೆ.

ಹೃದಯ ತಜ್ಞ ಡಾ|| ಪ್ರಭಾಕರ ಆತನನ್ನು ಸಮಗ್ರ ತಪಾಸಣೆಗೆ ಒಳಪಡಿಸಿದ ಬಳಿಕ ಸಂಜ್ಞೆಯಲ್ಲಿ ಕರೆದು ''ಅವರಿಗೆ ಹೃದಯಾಘಾತ ಆಗಿರೋದು ನಿಜ. ಜೀವಕ್ಕಂತು ಕುತ್ತಿಲ್ಲ. ಸಹಜ ಸ್ಥಿತಿಗೆ ಮರಳೋಕೆ ಒಂದು ವಾರ ಹಿಡೀಬೌದು'' ಎಂದು ಸೂಚಿಸಿದರು.

ಡಾಕ್ಟರ್ ಮರೆಯಾದ ಮರುಕ್ಷಣ ''ನಂಗೇನು ಧಾಡಿ ಆಗಿಲ್ಲ. ಒಂತಟಗು ಸುಸ್ತು, ನಿತ್ರಾಣ. ಚಿಂತಿಸ್ತಾನೀ ಕೂತ್ಕೋ ಬ್ಯಾಡ. ಕಂಚಿಗೆ ಹೋಗೋದನ್ನ ಯಾವ್ದಕೂ ಮರೀಬ್ಯಾಡ'' ಎಂದು ಸೋತ ದನಿಯಲ್ಲಿ ಹೇಳಿದ. ಕಡೆಗೆ ನಾನೇ ಸೋತೆ. ಇಷ್ಟವಿಲ್ಲದಿದ್ದರೂ ವಿಧೇಯತೆಯಿಂದ ತಲೆಯಾಡಿಸಿ ಹಳ್ಳಿಗೆ ಹೊರಡಲು ಎದ್ದು ನಿಂತೆ.

ಶುಕ್ರವಾರ ರಾತ್ರಿ ನಾನು, ಪ್ರಭುದೇವ ಕಂಚಿ ಬಸ್ಸು ಏರಿದೆವು. ಸೂರ್ಯೋದಯ ಸಮಯಕ್ಕೆ ಕಂಚಿಯಲ್ಲಿದ್ದೆವು. ಪ್ರಾತರ್ವಿಧಿ ಪೂರೈಸಿಕೊಂಡು, ಪೂಜೆ ಹೊತ್ತಿಗೆ ವಿಷ್ಣುಕಂಚಿ ದೇವಸ್ಥಾನಕ್ಕೆ ಹೋದೆವು. ದೇವರಿಗೆ ಅರ್ಚನೆ ಮಾಡಿಸಿದ ನಂತರ ಪ್ರಭು ದೇವ ಗೋಡೆ ಮೇಲಿದ್ದ ಆ ಬಂಗಾರದ ಹಲ್ಲಿಯನ್ನು ಮುಟ್ಟಿ ನಮಸ್ಕಾರ ಮಾಡಿದ.

ನನಗೆ ವಹಿಸಿದ್ದ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದ್ದಕ್ಕೆ ತುಂಬಾ ಸಂತಸವಾಗಿತ್ತು. ಮಂಕಾಗಿದ್ದ ಪ್ರಭುದೇವನ ಮೋರೆಯಲ್ಲಿ ಗೆಲುವಿನ ಗೆರೆಗಳು. ಪೊರೆ ಕಳಚಿಕೊಂಡ ನಾಗರನಂತೆ ಚುರುಕಾದ. ಭೋಜನಾಲಯದಲ್ಲಿ ಪೊಗದಸ್ತಾಗಿ ಊಟ ಮಾಡಿದೆವು. ಅಂದು ರಾತ್ರಿ ನಗರಕ್ಕೆ ಹೋಗೋ ಬಸ್ಸು ಹಿಡಿದೆವು.

ರವಿವಾರ ಬೆಳಗಿನ ಜಾವ, 'ಇನ್ನೇನು ಒಂದು ಗಂಟೆಯೊಳಗೆ ನಾವು ಊರಲ್ಲಿರುತ್ತೇವೆ. ಮಾರನೆಯ ದಿನ ಎಲ್ಲರೊಂದಿಗೆ ಬೆರೆತು ಸಂಭ್ರಮದಿಂದ ಜಾತ್ರೆ ಆಚರಿಸುತ್ತೇವೆ' ಹೀಗೆಲ್ಲ ಸುಂದರ ಯೋಚನೆಗಳ ಬೆನ್ನಲ್ಲೇ 'ಯಾವುದೂ ನಮ್ಮಿಚ್ಛೆಯಂತೆ ನಡೆಯುವುದಿಲ್ಲ. ಯಾವ ಗಳಿಗೆಯಲ್ಲಿ ಏನು ಕಾದಿದೆಯೋ ಹೇಳಲಿಕ್ಕಾಗದು' ಎಂಬ ಅಪಸ್ವರ ತಲೆ ಎತ್ತಬೇಕೇ !

ಮರುಕ್ಷಣದಲ್ಲಿ ಭಯಾನಕ ದೃಶ್ಯ ಧುತ್ತೆಂದು ನನ್ನ ಕಣ್ಣಿಗೆ ಬಿದ್ದಾಗ 'ಇನ್ನೇನು ಕತೆ ಮುಗಿಯಿತು ! ಪ್ರಾಣ ಹೋಗೋದು ಪಕ್ಕಾ !' ಎಂದು ನನ್ನ ಸಿಕ್ಸ್ತ್ ಸೆನ್ಸ್ ಚೀರಿ ಹೇಳಿತು. ಆ ಕ್ಷಣದಲ್ಲಿ ಕಣ್ಣು ಕತ್ತಲೆ... ಭೂಮಿ ತಿರುಗಿದಂತಾಗಿ, ಉಸಿರು ನಿಂತಂತಾಗಿ ನಾನು ಪ್ರಜ್ಞಾಶೂನ್ಯನಾಗಿಬಿಟ್ಟೆ!

ಸೋಮವಾರದ ದಿನಪತ್ರಿಕೆಯಲ್ಲಿ ರಸ್ತೆ ಅಪಘಾತದ ಸುದ್ದಿಯೊಂದು ಪ್ರಕಟವಾಗಿತ್ತು. ಕಂಚಿಯಿಂದ ನಗರಕ್ಕೆ ಬರುತ್ತಿದ್ದ ಸಾರಿಗೆ ಸಂಸ್ಥೆ ಬಸ್ಸು ನಗರದ ಆಸುಪಾಸಿನಲ್ಲಿ ಅಪಘಾತಕ್ಕೀಡಾಗಿದೆ. ಚಾಲಕ ಹಾಗೂ ನಾಲ್ಕು ಮಂದಿ ಪ್ರಯಾಣಿಕರು ಸ್ಥಳದಲ್ಲೇ ಮೃತಪಟ್ಟಿದ್ದಾರೆ. ಗಾಯಾಳಾದ ಪ್ರಯಾಣಿಕರನ್ನು ನಗರದ ಖಾಸಗಿ 'ಸಿಟಿ ನರ್ಸಿಂಗ್ ಹೋಂ'ನಲ್ಲಿ ಸೇರಿಸಿದ್ದಾರೆ. ತೂಕಡಿಸುತ್ತ ಬಸ್ಸು ಚಲಾಯಿಸುತ್ತಿದ್ದ ಚಾಲಕನ ಅಜಾಗರೂಕತೆ ಅಪಘಾತಕ್ಕೆ ಕಾರಣ. ಬಸ್ಸು ಸೇತುವೆಯ ಮೇಲೆ ಹೋಗುತ್ತಿರುವಾಗ ಹಠಾತ್ತನೆ ಎಡಕ್ಕೆ ಹೊರಳಿ ನದಿಗೆ ಧುಮ್ಮಿಕ್ಕಿತು.

ನಾನು ಆಪ್ತರ ಭಿಡೇಗೆ ಬಿದ್ದು ಮೂಢನಂಬಿಕೆಯ ಮರೀಚಿಕೆಯನ್ನು ಬೆನ್ನಟ್ಟಿಹೋಗಿ ಹುಚ್ಚುಮಂಗನಾದೆ. ಹೋಗಲಿ ಕೊನೆಗೆ ಸಿಕ್ಕಿದ್ದೇನು...? ಮೂರು ತಿಂಗಳು ನರ್ಸಿಂಗ್ ಹೋಂ ವಾಸದ ಕಠಿಣ ಸಜಾ.

ಡಾ|| ರುದ್ರಯ್ಯ ವಿ. ಗದಗ
'ಪಂಚವಟಿ', ೨೪೦/೪೨, ವಿವೇಕಾನಂದನಗರ, ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧

## ಸುದ್ದಿಚಿತ್ರ






ಬೆಂಗಳೂರಿನಲ್ಲಿ ಕಾರ್ಯನಿರ್ವಹಿಸುತ್ತಿರುವ 'ಇಂಡಿಯ ಡೆವಲಪ್‌ಮೆಂಟ್ ಫೌಂಡೇಶನ್' ಸಂಸ್ಥೆ ನೀಡುತ್ತ ಬಂದಿರುವ 'ದೇಶಸ್ನೇಹಿ' ಪ್ರಶಸ್ತಿಯನ್ನು ಈ ವರ್ಷ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅತ್ಯುತ್ತಮ ಸೇವೆ ಸಲ್ಲಿಸುತ್ತ ಬಂದಿರುವ ಐದು ಮಂದಿ ಮಹನೀಯರಿಗೆ ನೀಡಲಾಯಿತು. ನವಕರ್ನಾಟಕ ಪ್ರಕಾಶನ ಸಂಸ್ಥೆಯ ಶ್ರೀ ಆರ್. ಎಸ್. ರಾಜಾರಾಮ್, ಬೈಫ್ ಸಂಸ್ಥೆಯ ಡಾ|| ಜಿ.ಎನ್.ಎಸ್. ರೆಡ್ಡಿ , ಮಲಯಾಳಂ ಕವಯತ್ರಿ ಸುಗತ ಕುಮಾರಿ, ಮಹಿಳೆ-ಮಕ್ಕಳ ಯೋಗಕ್ಷೇಮ ಕ್ಷೇತ್ರದಲ್ಲಿ ತೊಡಗಿಕೊಂಡಿರುವ ಡಾ|| ಆರ್. ಪದ್ಮಿನಿ ಮತ್ತು ದೋಸ್ತಿ ಗುಂಪು ಸಂಘಟನೆಯ ಶ್ರೀ ಕೃಷ್ಣ ಗೊರಾಡಿಯ ಇವರು 2007ನೇ ಸಾಲಿನ 'ದೇಶಸ್ನೇಹಿ' ಪ್ರಶಸ್ತಿಗೆ ಪಾತ್ರರಾದವರು.

ಖ್ಯಾತ ಲೇಖಕಿ ನೇಮಿಚಂದ್ರ ಪ್ರಶಸ್ತಿ ಪ್ರದಾನ ಮಾಡಿದರು. ಶ್ರೀ ಆರ್. ಎಸ್. ರಾಜಾರಾಮ್ ತಮಗೆ ಬಂದ ಹತ್ತು ಸಾವಿರ ರೂ. ಬಹುಮಾನವನ್ನು ಶ್ರೀ ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಗೆ ಕೊಡುಗೆಯಾಗಿ ನೀಡಿದರು.

# ಜ್ಞಾನ ಆಯೋಗದ ವರದಿ
## ಕೆಲವು ಟಿಪ್ಪಣಿಗಳು

ಡಾ|| ಜಯಪ್ರಕಾಶ ಮಾವಿನಕುಳಿ

ಬೇರೆ ಬೇರೆ ಕಾಲವನ್ನು ಪ್ರಮುಖ ಧಾರೆಗಳು ಆವರಿಸಿಕೊಳ್ಳುತ್ತವೆ. ಉಳಿದೆಲ್ಲಾ ಏನೂ ಅಲ್ಲ, ಅದೊಂದೆ ಎಂಬ ವಾತಾವರಣ ಕಲ್ಪಿತವಾಗುತ್ತದೆ. ಪರಿವರ್ತನೆಯ ಯುಗ, ಉದ್ಯಮದ ಯುಗ ಎಂದೆಲ್ಲಾ ಗುರುತಿಸಿಕೊಂಡಂತೆ ೨೧ನೇ ಶತಮಾನವನ್ನು ಜ್ಞಾನಯುಗವೆಂದು ನಾವು ಕರೆಯುತ್ತಿದ್ದೇವೆ. ಇದರ ಪರಿಣಾಮವಾಗಿ ಜಗತ್ತು ಒಂದು ಹಳ್ಳಿಯಾದಂತಾಗಿ ಉಳಿದ ರಾಷ್ಟ್ರಗಳ ಎಲ್ಲೆಯನ್ನು ದಾಟಲು, ತಮ್ಮನ್ನು ವಿಸ್ತರಿಸಿಕೊಳ್ಳಲು, ಎಲ್ಲ ಕಡೆ ಮುಕ್ತವಾಗಲು ಸಂಪರ್ಕ, ಶಿಕ್ಷಣ, ಸಂಶೋಧನ ಇನ್ನಿತರ ಸಲಕರಣೆಗಳನ್ನು ತಯಾರು ಮಾಡುವುದು, ಪಕ್ವ ಮಾಡುವುದು – ಈ ಕಡೆಗೆ ಎಲ್ಲ ದೇಶಗಳು ಹೊರಳಿನಿಂತಿವೆ.

೨೧ನೇ ಶತಮಾನದ ಸವಾಲುಗಳನ್ನು ಎದುರಿಸಲು ಉತ್ಕೃಷ್ಟ ಶಿಕ್ಷಣದ ವ್ಯವಸ್ಥೆ, ವಿವಿಧ ಜ್ಞಾನಶಾಖೆಗಳ ಅಭಿವೃದ್ಧಿ, ಬೌದ್ಧಿಕ ಆಸ್ತಿ ಹಕ್ಕು, ಕೃಷಿ ಮತ್ತು ಉದ್ಯಮದಲ್ಲಿ ತಜ್ಞತೆ, ಈ ಮೂಲಕ ಸರ್ಕಾರ ದಕ್ಷತೆ ಮತ್ತು ಪಾರದರ್ಶಕತೆಯನ್ನು ಹೆಚ್ಚಿಸಲು ಸಹಾಯವಾಗುವಂತೆ ಪ್ರಧಾನಿ ಮನಮೋಹನ ಸಿಂಗ್ ಜೂನ್ ೧೩, ೨೦೦೫ರಂದು ಜ್ಞಾನ ಆಯೋಗ (Knowledge Commision)ವನ್ನು ರಚಿಸಿದರು. ಸ್ಯಾಮ್ ಪಿಟ್ರೋಡ ಅಧ್ಯಕ್ಷರು, ಡಾ|| ಪಿ. ಎಮ್. ಭಾರ್ಗವ ಉಪಾಧ್ಯಕ್ಷರು ಮತ್ತು ಆರು ಸದಸ್ಯರುಗಳು. ಅದರಲ್ಲಿ ಇನ್ಫೋಸಿಸ್‌ನ ನಂದನ್ ನೀಲೇಕಣಿ ಸಹ ಒಬ್ಬರು.

ಮುಂದಿನ ಹತ್ತು ವರುಷಗಳು ಅತ್ಯಂತ ಸಂಕ್ರಮಣಕಾಲವೆಂದು ಭಾವಿಸಿ ನಮ್ಮ ದೇಶ ಜ್ಞಾನದ ಆದಿ, ಉಗಮ ಮತ್ತು ವಿತರಣಾ ದೃಷ್ಟಿಯಲ್ಲಿ ಇತರ ದೇಶಗಳಿಗಿಂತ ಭಿನ್ನವೂ, ಶ್ರೇಷ್ಠವೂ ಆಗಿರಬೇಕು. ಆದುದರಿಂದ ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಹೆಚ್ಚು ಸದೃಢವನ್ನಾಗಿಯೂ, ದೇಶೀಯ ಸಂಶೋಧನೆ ಮತ್ತು ನೂತನ ಸೃಜನಾತ್ಮಕ ರೀತಿಯನ್ನಾಗಿ ಮಾಡಬೇಕು. ಇದಕ್ಕಾಗಿ ತಳಸ್ಪರ್ಶಿ ಹಂತದಿಂದ ಬದಲಾವಣೆ ಅಲ್ಲದೆ ವಿದೇಶಿ ಅರಿವಿನ ಮೂಲಗಳನ್ನು ಹುಡುಕಲು ಅವರಿಗೆ ಮುಕ್ತ ಪ್ರವೇಶ ಮಾಡುವ ವಿಚಾರ. ಇವೆಲ್ಲವೂ ಮುಖ್ಯವಾಗಿ ಆರೋಗ್ಯ, ಕೃಷಿ, ಶಿಕ್ಷಣ, ಉದ್ಯಮ ಮತ್ತು ಸರ್ಕಾರದ ಬಗ್ಗೆ, ಸಾರ್ವಜನಿಕ ದಕ್ಷತೆ ಕಾಪಾಡಲು ಇ-ಆಡಳಿತ, ಸಾರ್ವತ್ರಿಕ ಶಿಕ್ಷಣದ ವ್ಯವಸ್ಥೆ ಬಲಪಡಿಸುವ ಬಗ್ಗೆ ಅದರಲ್ಲೂ ಹುಡುಗಿಯರು, ದುರ್ಬಲರು, ಕಡೆಗಣಿಸಲ್ಪಟ್ಟವರು, ನುರಿತ ಕುಶಲಕರ್ಮಿಗಳಿಗೆ ಉತ್ತೇಜನ, ಮಾಹಿತಿ ಮತ್ತು ತಂತ್ರಜ್ಞಾನದ ಬಳಕೆಯಿಂದ ಶಿಕ್ಷಣದ ಗುಣಮಟ್ಟವನ್ನು ಎತ್ತರಿಸುವುದು – ಈ ಬಗ್ಗೆ ಸಂಪೂರ್ಣ ವರದಿ ಕೊಡುವ ಮಹತ್ತರ ಜವಾಬ್ದಾರಿಯನ್ನು ಈ ಅರಿವಿನ ಆಯೋಗಕ್ಕೆ ಕೇಂದ್ರ ಸರ್ಕಾರ ವಹಿಸಿ ೨ ಅಕ್ಟೋಬರ್ ೨೦೦೫ರಿಂದ ೨ ಅಕ್ಟೋಬರ್ ೨೦೦೮ರವರೆಗೆ ಇದನ್ನು ಸಾಧಿಸಬೇಕೆಂದು ಆಶಿಸಿತು.

ಐದು ಮುಖ್ಯ ವಿಷಯಗಳನ್ನು ಆಯೋಗ ಗಂಭೀರವಾಗಿ ಪರಿಶೀಲನೆಗೆ ತೆಗೆದುಕೊಂಡಿತು : ಜ್ಞಾನ ಜನಸಮುದಾಯಕ್ಕೆ ತಲುಪುವ ಬಗ್ಗೆ, ಜ್ಞಾನದ ಪರಿಕಲ್ಪನೆಗಳು, ಜ್ಞಾನದ ಉಗಮ, ಜ್ಞಾನವಾಹಿನಿಯ ಕಾರ್ಯಗತದ ಬಗ್ಗ ಮತ್ತು ಸೇವಾದೃಷ್ಟಿಯಲ್ಲಿ ಜ್ಞಾನದ ಪಾತ್ರ.

ಬೆಳಕಿದ್ದರೆ ಸಾಲದು ಅದು ಅನೇಕ ಹಣತೆಗಳನ್ನು ಹಚ್ಚಬೇಕು. ಆದುದರಿಂದ ಸಮುದಾಯಕ್ಕೆ ಜ್ಞಾನದ ಬಗ್ಗೆ ತಿಳುವಳಿಕೆ, ಸ್ವೀಕರಿಸುವ ಸಾಮರ್ಥ್ಯ ಇರಬೇಕು. ಒಟ್ಟಾರೆ ಭಾರತದ ಶೈಕ್ಷಣಿಕ ಪರಿಸ್ಥಿತಿಯನ್ನು ಅವಲೋಕಿಸಿದಾಗ ಇದು ನಿಚ್ಚಳವಾಗುತ್ತದೆ. ೨೫೦ ಮಿಲಿಯ ವಯಸ್ಕರು ಅನಕ್ಷರಸ್ಥರಾಗಿದ್ದಾರೆ. ಶಿಕ್ಷಣವೆಂಬುದು ಬದಲಾವಣೆಗೆ ಮಹಾ ಅಸ್ತ್ರ ಸ್ವಂತ ಆಲೋಚನೆಗೆ, ತೀವ್ರವಾಗಿ ನಿರ್ಧಾರ ಪಡೆಯಲು, ಸಾಮಾಜಿಕ-ಆರ್ಥಿಕ ವಿಷಯಗಳ ಬಗ್ಗೆ ಪ್ರಶ್ನಿಸಲು ಬಹಳ ಮುಖ್ಯ. ಆದರೆ ನಮ್ಮ ಪರಿಸ್ಥಿತಿ ಏನು ? ಒಂದು ಅಂದಾಜಿನ ಪ್ರಕಾರ (ಈ ಆಯೋಗದಲ್ಲಿಯೇ ಹೇಳಿರುವಂತೆ) ನೂರು ಮಿಲಿಯ ಮಕ್ಕಳು ಅನಕ್ಷರಸ್ಥರಾಗಿದ್ದಾರೆ. ಹೈಯರ್ ಪ್ರೈಮರಿ, ಸೆಕೆಂಡರಿ, ಉನ್ನತಶಿಕ್ಷಣ, ವೃತ್ತಿಪರತೆಯ ಶಿಕ್ಷಣ, ದೂರಶಿಕ್ಷಣ ಇವೆಲ್ಲವೂ ಈ ಆಯೋಗದ ಪ್ರಕಾರ ಶಿಥಿಲವಾಗಿವೆ. ಯಾವುದೇ ರಾಷ್ಟ್ರಕ್ಕೆ ಎರಡು ವಿಷಯ ಸ್ಪಷ್ಟವಾಗಬೇಕು. ಒಂದು, ಇರುವ ಸಂಪನ್ಮೂಲತೆಯನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು. ಇಲ್ಲವೇ ಹೊಸ ಸಂಪನ್ಮೂಲತೆಯನ್ನು ಸೃಷ್ಟಿಸಿಕೊಳ್ಳಬೇಕು. ಇಲ್ಲದಿದ್ದರೆ ನಾವು ನೆಪ ಒಡ್ಡಿ ಬದುಕನ್ನು ನರಕ ಮಾಡಿಕೊಳ್ಳುತ್ತೇವೆ. ಮಾಹಿತಿಯು ಜ್ಞಾನಕ್ಕೆ ಇಂಬುಕೊಡುತ್ತದೆ. ಹೀಗಾಗಿ ಮಾಹಿತಿಯನ್ನು ಪಡೆಯಲು ಇರುವ ಎಲ್ಲಾ ತಂತ್ರಜ್ಞಾನವನ್ನು ಪಡೆಯುವತ್ತ ಸಾಗಬೇಕು. ಹೀಗಾಗಿ ಮಾಹಿತಿ ಪಡೆಯುವ ಹಕ್ಕನ್ನು ಸರಿಯಾಗಿ ಬಳಸಿಕೊಳ್ಳಬೇಕು ಎಂಬುದು ಆಯೋಗದ ಇನ್ನೊಂದು ಮುಖ್ಯ ಕಳಕಳಿ.

ಪ್ರಧಾನ ಮಂತ್ರಿಗಳು ತಮ್ಮ ಆಶಯ ಭಾಷಣದಲ್ಲಿ ಹೇಳಿರುವಂತೆ ಪ್ರತಿವರುಷವೂ ನಮ್ಮ ವಿಶ್ವವಿದ್ಯಾನಿಲಯಗಳು ಮೂರು ಲಕ್ಷದ ಐವತ್ತು ಸಾವಿರ ಇಂಜಿನಿಯರುಗಳನ್ನು ಮತ್ತು ಸುಮಾರು ಐದುಸಾವಿರ ಡಾಕ್ಟರೇಟ್ ಪದವೀಧರರನ್ನು ಸೃಷ್ಟಿಸುತ್ತಿವೆ. ಆದುದರಿಂದ ನಮ್ಮ ದೇಶವು ಇಷ್ಟರಲ್ಲಿಯೇ ಜಗತ್ತಿಗೆ ಮಾರ್ಗದರ್ಶನ ಮಾಡುವ ಶ್ರೇಷ್ಠತೆಯಲ್ಲಿ ನಿಲ್ಲಬೇಕಾಗಿತ್ತು, ಆದರೆ ಹಾಗಿಲ್ಲ. ಆಯೋಗವು ಈ ಬಗ್ಗೆ





ಜಿಜ್ಞಾಸೆ ಮಾಡಿ ನಿಷ್ಕರ್ಷಿಸಬೇಕು. ಇಷ್ಟೇ ಅಲ್ಲದೆ, ಬಹಳ ಮುಖ್ಯವಾದ ಮಾನವ ಸಂಪತ್ತು ನಮ್ಮಲ್ಲಿದೆ. ಚೀನಾದಲ್ಲಿ ಹೆಚ್ಚು ಜನಸಂಖ್ಯೆ ಇರಬಹುದು. ಆದರೆ ಅಲ್ಲಿ ವಯಸ್ಸಾದವರು ಹೆಚ್ಚಾಗುತ್ತಿದ್ದಾರೆ. ಆದರೆ ನಮ್ಮಲ್ಲಿ ಯುವಕರು ಹೆಚ್ಚಾಗುತ್ತಿದ್ದಾರೆ. ಹೀಗಾಗಿ ಜಗತ್ತು ನಮ್ಮ ಕಡೆ ನೋಡುತ್ತಿದೆ. ಆದರೆ ಈ ಯುವಕರ ದೇಶ ಅಜ್ಞಾನಿ ಯುವಕರ ತಾಣವಾಗಬಾರದು. ಈ ಬಗ್ಗೆ ಚಿಂತನೆಯನ್ನು ಮಾಡಿ ಯುವಕರ ಧೀಃ ಶಕ್ತಿಯನ್ನು ಪುನರುಜ್ಜೀವನಗೊಳಿಸುವ ಮಹತ್ತರ ಹೊಣೆಗಾರಿಕೆ ನಮ್ಮ ಮುಂದಿದೆ.

ಚಿಂತನ ಚಿಲುಮೆಯೆಂದು ವ್ಯಾಖ್ಯಾನಿಸಿಕೊಂಡಿರುವ ಜ್ಞಾನ ಆಯೋಗದಲ್ಲಿಯೇ ಮೀಸಲಾತಿ ಇನ್ನಿತರ ಬಗ್ಗೆ ತುಸು ಗೊಂದಲ ಇದೆ ಎಂದರೂ ಸಹ ಉನ್ನತ ಶಿಕ್ಷಣದ ಬಗ್ಗೆ ಜ್ಞಾನ ಆಯೋಗವು ನವೆಂಬರ್ ೨೯, ೨೦೦೬ರಂದು ಪ್ರಧಾನ ಮಂತ್ರಿಯವರಿಗೆ ಒಂದು ಟಿಪ್ಪಣಿಯನ್ನು ಸಲ್ಲಿಸಿತು. ಹತ್ತೊಂಬತ್ತು ಪುಟಗಳ ಈ ಪುಟ್ಟ ವರದಿಯು ಉನ್ನತ ಶಿಕ್ಷಣದ ವಿಚಾರದಲ್ಲಿ ಕ್ರಾಂತಿಕಾರಕ ಬದಲಾವಣೆ ತರಬಹುದೆಂದು ನಿರೀಕ್ಷಿಸಲಾಗಿದೆ. ಏಳು ಅಧ್ಯಾಯಗಳ ಈ ವರದಿಯ ಪೀಠಿಕೆಯಲ್ಲಿ ಉನ್ನತ ಶಿಕ್ಷಣದ ಅಗಾಧತೆ, ಅರ್ಹತೆ ಮತ್ತು ಸಮಾನ ನ್ಯಾಯಪರತೆಗಳಿಗೆ ಒತ್ತುಕೊಡಲು ಮುಂದಾಗಿದೆ.

ತನ್ನ ಆರಂಭದಲ್ಲಿಯೇ ವರದಿ ೧೮-೨೪ ವರುಷದಲ್ಲಿನ ಯುವಕರಲ್ಲಿ ಕೇವಲ ಶೇಕಡ ಏಳು ಜನರು ಮಾತ್ರ ಉನ್ನತ ಶಿಕ್ಷಣ ಪಡೆಯಲು ಶಕ್ತರಾಗಿದ್ದಾರೆ. ಉನ್ನತ ಶಿಕ್ಷಣದ ಜೀವಧಾತುಗಳೆಂದರೆ ವಿಶ್ವವಿದ್ಯಾನಿಲಯಗಳು ಮತ್ತು ಪದವಿ ಕಾಲೇಜುಗಳು. ಹೀಗಾಗಿ ಇವುಗಳನ್ನು ಮೇಲ್ದರ್ಜೆಗೆ ಏರಿಸುವ ಬಗ್ಗೆ ವರದಿಯಲ್ಲಿ ಮಾತುಗಳಿವೆ. ೨೦೧೫ರ ಹೊತ್ತಿಗೆ ಕನಿಷ್ಠ ಶೇಕಡ ೧೫ರಷ್ಟು (೧೮-೨೪ ವರುಷದ) ವಿದ್ಯಾರ್ಥಿಗಳನ್ನು ಉನ್ನತ ಶಿಕ್ಷಣದ ಕಕ್ಷೆಯೊಳಗೆ ತರಬೇಕೆಂಬುದು ಆಶಯ. ಹಾಗಾದರೆ ಮಾತ್ರ ಕುಶಲತೆ, ಸಾಮರ್ಥ್ಯಗಳನ್ನು ಬೆಳೆಸಿ ಜ್ಞಾನ ಆರ್ಥಿಕ ವಲಯವನ್ನು ಸೃಷ್ಟಿಸಬಹುದು. ಆದುದರಿಂದ ವರದಿಯ ಪ್ರಕಾರ : ವಿಶ್ವವಿದ್ಯಾನಿಲಯ ಮತ್ತು ಕಾಲೇಜುಗಳ ಕಾರ್ಯಚಟುವಟಿಕೆಗಳನ್ನು ಬದಲು ಮಾಡಬೇಕು; ಅವುಗಳ ಸಂಪನ್ಮೂಲಗಳನ್ನು ಹೆಚ್ಚಿಸಲು ಮಾರ್ಗೋಪಾಯಗಳನ್ನು ಕಂಡುಹಿಡಿಯಬೇಕು; ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸಬೇಕು; ಶ್ರೇಷ್ಠತೆಯನ್ನು ತರಲು ರಾಷ್ಟ್ರೀಯ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಬೇಕು; ದುರ್ಬಲರಿಗೆ, ಅವಕಾಶವಂಚಿತರಿಗೆ, ಉನ್ನತ ಶಿಕ್ಷಣ ಸಿಗುವಂತೆ ವ್ಯವಸ್ಥೆಯಾಗಬೇಕು.

ಇವುಗಳನ್ನು ಗಮನದಲ್ಲಿಟ್ಟುಕೊಂಡು ಏಳು ಅಂಶಗಳ –ವಿಶ್ವವಿದ್ಯಾನಿಲಯ, ಪದವಿ ಕಾಲೇಜುಗಳು, ನಿಯಂತ್ರಣ ವ್ಯವಸ್ಥೆ, ಸಂಪನ್ಮೂಲತೆ, ಗುಣಮಟ್ಟ, ರಾಷ್ಟ್ರೀಯ ವಿಶ್ವವಿದ್ಯಾನಿಲಯಗಳ ಪ್ರಸ್ತಾಪ ಮತ್ತು ಎಲ್ಲರಿಗೂ ಅವಕಾಶ – ಮೇಲೆ ಈ ವರದಿ ತನ್ನ ಜ್ಞಾನವನ್ನು ಬಿತ್ತರಿಸಿದೆ !

ವಿಶ್ವವಿದ್ಯಾನಿಲಯಗಳು ಶ್ರೇಷ್ಠ ಪ್ರತಿಭೆಗಳನ್ನು ಆಕರ್ಷಿಸಬೇಕು. ಯಾಕೆಂದರೆ ವಿಶ್ವವಿದ್ಯಾನಿಲಯಗಳು ಜ್ಞಾನವನ್ನು ಸೃಷ್ಟಿಸುವ, ಇತರರಿಗೆ ನೀಡುವ ಮತ್ತು ಜ್ಞಾನವನ್ನು ಪ್ರಸರಿಸುವ ಕೇಂದ್ರಗಳು. ಜಗತ್ತಿನ ೫೦ ಶ್ರೇಷ್ಠ ವಿಶ್ವವಿದ್ಯಾನಿಲಯಗಳ ಪೈಕಿ ಭಾರತದ್ದು ಯಾವುದೂ ಇಲ್ಲ. ಇದಕ್ಕೆ ಸಾಮಾನ್ಯವಾಗಿ ಕಾರಣಗಳೇನೆಂದರೆ ಪಠ್ಯ, ಸೃಜನಶೀಲಾತ್ಮಕ ಕಲಿಕೆ, ಘಂಟೆಗಳ ನಡುವೆ ಬಿಗಿಬಂಧ, ಫಲಿತಾಂಶ ಪ್ರಕಟಣೆಯಲ್ಲಿ

> ಜ್ಞಾನ ಆಯೋಗವು ವಿಶ್ವವಿದ್ಯಾನಿಲಯದ ಗುಣಮಟ್ಟದ ಬಗ್ಗೆ ಚಿಂತನೆ ನಡೆಸಿದೆ. ಈ ವಿಷಯದಲ್ಲಿ ವಿಶ್ವವಿದ್ಯಾನಿಲಯಕ್ಕೆ ಉತ್ತರದಾಯಿತ್ವ ಇಲ್ಲ. ಆದರೆ ಇದು ಸರ್ಕಾರದ ಹಿಡಿತವನ್ನು ಹೆಚ್ಚಿಸುವುದಲ್ಲ. ವಿದ್ಯಾರ್ಥಿಗಳನ್ನು ಸಬಲೀಕರಿಸುವ ದೃಷ್ಟಿಯಲ್ಲಿ ಇದನ್ನು ನೋಡಬೇಕು. ಇದು ಆಗಬೇಕಾದರೆ ಸ್ಪರ್ಧೆ ಇರಬೇಕು. ಇಲ್ಲಿನ ವಿಶ್ವವಿದ್ಯಾನಿಲಯಕ್ಕೆ ಸ್ಪರ್ಧೆ ನೀಡಲು ವಿದೇಶೀ ವಿಶ್ವವಿದ್ಯಾನಿಲಯಗಳನ್ನು ಆಹ್ವಾನಿಸಬೇಕು ಮತ್ತು ನಮ್ಮ ವಿಶ್ವವಿದ್ಯಾನಿಲಯಗಳು ವಿದೇಶಕ್ಕೆ ಹೋಗಬೇಕು. ಆಗ ಮಾತ್ರ ವಿಶ್ವವಿದ್ಯಾನಿಲಯಗಳ ಅಂತಃಶಕ್ತಿ ಅರಿವಾಗುತ್ತದೆ. ಇದರ ಜೊತೆಯಲ್ಲಿ ಈಗಿರುವ ನ್ಯಾಕ್ ಸಂಯೋಜನೆಯ ಪದ್ಧತಿ ಸರಿಯಲ್ಲ. ಇಲ್ಲಿಯವರೆಗೂ ಅದು ಕೇವಲ ಶೇಕಡ ಹತ್ತರಷ್ಟು ಸಂಸ್ಥೆಗಳಿಗೆ ಮಾತ್ರ ಅರ್ಹತಾ ಪತ್ರ ನೀಡಲು ಶಕ್ತವಾಗಿದೆ. ಈ ರೀತಿಯ ಸಂಸ್ಥೆ ಒಂದೇ ಇರುವುದು ಸರಿಯಲ್ಲ. ಮುಂದೆ ಸ್ಥಾಪನೆಯಾಗಲಿರುವ ನೂತನ ಸ್ವತಂತ್ರ ಉನ್ನತ ಶಿಕ್ಷಣ ನಿಯಂತ್ರಣ ಪ್ರಾಧಿಕಾರವು ಅನೇಕ ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ ಕಾಲೇಜುಗಳ ಗುಣಮಟ್ಟದ ಮೌಲ್ಯಮಾಪನ ಮಾಡಲು ಅನುಮತಿ ನೀಡಬೇಕು. ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಪ್ರತಿಭಾವಂತ ಶಿಕ್ಷಕರಿಗೆ ಸಂಬಳ, ಸೌಲಭ್ಯಗಳನ್ನು ಹೆಚ್ಚಿಸಬೇಕು.

ಅನಿರ್ದಿಷ್ಟತೆ, ಸೌಕರ್ಯಗಳ ಅತೀವ ಕೊರತೆ, ಅಂತರ್‌ಶಿಸ್ತು ಅಧ್ಯಯನಕ್ಕೆ ಅಡ್ಡಿ, ಸಂಶೋಧನೆಯಲ್ಲಿ ನಿರಾಸಕ್ತಿ, ಪ್ರಕಟಣೆಯ ನಿರಾಸಕ್ತಿ, ಅತೀವ ನಿರ್ಲಕ್ಷ್ಯ – ಕಾಲದ ಪ್ರತಿಸ್ಪಂದನದ ಕೊರತೆ; ಇವುಗಳನ್ನು ಮನಗಂಡು ಜ್ಞಾನ ಆಯೋಗವು ತನ್ನ ವರದಿಯ ಟಿಪ್ಪಣಿಯಲ್ಲಿ ಕೆಲವು ಸಲಹೆಗಳನ್ನು ನೀಡಿದೆ :

೨೦೧೫ರೊಳಗೆ ಭಾರತದಲ್ಲಿ ೧೫೦೦ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಬೇಕು. ಕಳೆದ ಮೂರು ವರುಷಗಳಲ್ಲಿ ಚೀನಾದಲ್ಲಿ ೧೨೫೦ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ. ಪ್ರತೀ ಮೂರು ವರುಷಕ್ಕೊಮ್ಮೆ ಹೊರಗಡೆ ತಜ್ಞರಿಂದ ಪರಿಶೀಲಿಸಿ ವಿಶ್ವವಿದ್ಯಾನಿಲಯದ ಪಠ್ಯಕ್ರಮವನ್ನು ಪರಿಷ್ಕರಿಸಿ ಜಾರಿಗೆ ತರಬೇಕು. ಪರೀಕ್ಷೆಗಳು ಕೇವಲ ಜ್ಞಾಪಕಶಕ್ತಿಯನ್ನು ಅಳೆಯುವ ಸಾಧನಗಳಾಗದೆ ವಿದ್ಯಾರ್ಥಿಯ ವಿಶ್ಲೇಷಿಸುವ ಜಾಣ್ಮೆ ಮತ್ತು ಸೃಜನಶೀಲ ಚಿಂತನೆಗಳನ್ನು ಗುರುತಿಸುವಂತಾಗಿರಬೇಕು. ಅದಕ್ಕಾಗಿ ನಿರಂತರವಾಗಿ ವಿದ್ಯಾರ್ಥಿಯನ್ನು ಮೌಲ್ಯಮಾಪನ ಮಾಡುವಂತಿರಬೇಕು. ಆರಂಭದಲ್ಲಿ ಇದು ಶೇಕಡ ೨೫ ಇದ್ದು, ನಂತರ ಇದನ್ನು ೫೦ಕ್ಕೆ ಏರಿಸಬೇಕು. ಅರ್ಧವಾರ್ಷಿಕ ಪರೀಕ್ಷೆಗಳಿರಬೇಕು ಮತ್ತು ಕ್ರೆಡಿಟ್‌ಗಳನ್ನು ನೀಡಬೇಕು. ಈಗ ಪ್ರಮುಖ ಸಂಶೋಧನೆಗಳು ವಿಶ್ವವಿದ್ಯಾನಿಲಯದ ಹೊರಗಡೆ ನಡೆಯುತ್ತಿವೆ. ಬೋಧನೆ ಮತ್ತು ಸಂಶೋಧನೆ ಒಟ್ಟಿಗೆ ಇರಬೇಕು. ಆಗ ಮಾತ್ರ ವಿಶ್ವವಿದ್ಯಾನಿಲಯಕ್ಕೆ ಹೆಚ್ಚು ಅರ್ಥ ಬರುತ್ತದೆ. ಆದುದರಿಂದ ಸಂಶೋಧನೆಗೆ ಸಂಪನ್ಮೂಲಗಳನ್ನು ಉದಾರವಾಗಿ ಹರಿದುಬರುವಂತೆ ನೋಡಿಕೊಳ್ಳಬೇಕು. ಇದಕ್ಕೆ ಮೂಲತಃ ಬೇಕಾಗಿರುವ ಪ್ರತಿಭಾವಂತ ಅಧ್ಯಾಪಕರನ್ನು ನೇಮಿಸಿಕೊಳ್ಳುವಂತೆ, ಇಟ್ಟುಕೊಳ್ಳುವಂತೆ ನೋಡಿಕೊಳ್ಳಬೇಕು. ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ತಮ್ಮ ವಿದ್ಯಾರ್ಥಿಗಳನ್ನೇ ನೇಮಿಸಿಕೊಳ್ಳುವ ಪರಿಪಾಠ ಬಂದಿದೆ. ಹೀಗಾಗಿ ಅದೇ ವಿಶ್ವವಿದ್ಯಾನಿಲಯದವರನ್ನು ನೇಮಕಾತಿಯಲ್ಲಿ ಕನಿಷ್ಠ ೫೦ಕ್ಕಿಂತ ಹೆಚ್ಚು ನೇಮಕಾತಿ ಮಾಡಿಕೊಳ್ಳದಂತೆ ನಿರ್ಬಂಧ ಇರಬೇಕು. ವಿಶ್ವವಿದ್ಯಾನಿಲಯಗಳು ಸಂಪನ್ಮೂಲದ ಕೊರತೆಯನ್ನು ಅನುಭವಿಸುತ್ತಿವೆ. ಶೇಕಡ ೭೫ಕ್ಕಿಂತಲೂ ಹೆಚ್ಚು, ಸಂಬಳಕ್ಕೆ ಹೋಗುತ್ತಿದೆ. ಇನ್ನುಳಿದ ಭಾಗದಲ್ಲಿ ೧೫ರಷ್ಟು ವಿದ್ಯುತ್, ಬಾಡಿಗೆ, ದೂರವಾಣಿ ಇನ್ನಿತರ ಖರ್ಚುಗಳಿಗೆ ಹೋಗುತ್ತಿದೆ. ಉಳಿದ ಶೇಕಡ ೫ ಅಥವಾ ಹತ್ತುಗಳಿಂದ ಏನು ಮಾಡಲೂ ಸಾಧ್ಯವಿಲ್ಲದೆ ವಿಶ್ವವಿದ್ಯಾನಿಲಯಗಳು ಅಸಹಾಯಕವಾಗಿವೆ. ವಿಶ್ವವಿದ್ಯಾನಿಲಯದ ಗ್ರಂಥಭಂಡಾರ, ಪ್ರಯೋಗಾಲಯಗಳು, ಆಟದ ವ್ಯವಸ್ಥೆ, ಸಭಾಂಗಣ, ಅಂತರ್ಜಾಲದ ವ್ಯವಸ್ಥೆಗಳು ಇರುವಂತೆ ನೋಡಿಕೊಳ್ಳಬೇಕು. ಎಲ್ಲ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ ಅದು ಸಿಗುವಂತಿರಬೇಕು. ಮತ್ತೊಂದು ದೊಡ್ಡ ದೋಷವೆಂದರೆ ವಿಶ್ವವಿದ್ಯಾನಿಲಯಗಳಿಗೆ ಸ್ವಾಯತ್ತತೆಯೂ ಇಲ್ಲ, ಉತ್ತರದಾಯಿತ್ವವೂ ಇಲ್ಲ. ಯಾರು ಯಾರಿಗೂ ಯಾವುದಕ್ಕೂ ಉತ್ತರ ಹೇಳಬೇಕಾಗಿಲ್ಲ. ಸರ್ಕಾರದ ಮೂಗು ತೂರಿಸುವಿಕೆಯಿಂದ ಪಾರದರ್ಶಕತೆ ಇಲ್ಲದೆ ವಿಶ್ವವಿದ್ಯಾನಿಲಯಗಳು ಜಿಡ್ಡು ಹಿಡಿದ ಗೂಡುಗಳಾಗಿವೆ. ಆದುದರಿಂದ ಕುಲಪತಿಗಳ ನೇಮಕಾತಿಯಲ್ಲಿ ಸರ್ಕಾರ ಮಧ್ಯಪ್ರವೇಶಿಸಬಾರದು; ಆರು ವರುಷಗಳ ಅವಧಿ ಇರಬೇಕು; ವಿಶ್ವವಿದ್ಯಾನಿಲಯ ಶೈಕ್ಷಣಿಕ ಮಂಡಳಿ, ಆಡಳಿತ ಮಂಡಳಿ, ಸ್ಥಾಯಿ ಸಮಿತಿಗಳ ಗಾತ್ರವನ್ನು ಕಡಿಮೆ ಮಾಡಬೇಕು; ಇವುಗಳು ವರದಿಯ ಮುಖ್ಯ ಸಲಹೆಗಳು.

ಇನ್ನು ಪದವಿ ಕಾಲೇಜುಗಳ ಬಗ್ಗೆ ವರದಿ ಹೇಳುವುದೇನೆಂದರೆ ೧೭,೬೦೦ ಕಾಲೇಜುಗಳು ಭಾರತದಲ್ಲಿವೆ. ಅವುಗಳಲ್ಲಿ ಸುಮಾರು ೨೦೦ ಸ್ವಾಯತ್ತತೆ ಪಡೆದುಕೊಂಡ ಕಾಲೇಜುಗಳು. ಐವತ್ತು ವರುಷಗಳ ಹಿಂದೆ ಸಂಯೋಜನೆಗೆ ಒಂದು ಅರ್ಥ ಇತ್ತು. ಈಗಲೂ ಆ ವ್ಯವಸ್ಥೆಗೆ ಏನೂ ಪ್ರಾಮುಖ್ಯತೆ ಇಲ್ಲ. ವಿಶ್ವವಿದ್ಯಾನಿಲಯಕ್ಕೆ

ಭಾರವಾಗಿರುವ, ಕಾಲೇಜುಗಳ ಪಠ್ಯಕ್ರಮದ ತ್ವರಿತ ಬದಲಾವಣೆಗೆ ಅಡ್ಡವಾಗಿರುವ ಇಂಥ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಬೇಕು. ಆದುದರಿಂದ ಏಕಾಕಿ ಕಾಲೇಜು ಅಥವಾ ಕಾಲೇಜಿನ ಗುಂಪುಗಳನ್ನಾಗಿ ಪರಿಗಣಿಸಿ ಎಲ್ಲದಕ್ಕೂ ಸ್ವಾಯತ್ತತೆ ನೀಡಬೇಕು. ಕ್ರಮೇಣ ಇವುಗಳನ್ನು ವಿಶ್ವವಿದ್ಯಾನಿಲಯಗಳನ್ನಾಗಿ ಮಾಡಬೇಕು. ಇವುಗಳೆಲ್ಲವೂ ಸೇರಿ ೨೦೧೫ರೊಳಗೆ ೧೫೦೦ ವಿಶ್ವವಿದ್ಯಾನಿಲಯಗಳಾಗಬೇಕು. ಆದರೆ ಸಮಸ್ಯೆ ಎಂದರೆ ಕೆಲವು ಕಾಲೇಜುಗಳು ಸ್ವಾಯತ್ತತೆಗೆ ಅರ್ಹವಾಗಿದ್ದರೂ ಅವನ್ನು ಬಯಸುವುದಿಲ್ಲ. ಇವುಗಳ ಮನ ಒಲಿಸುವ ಕಾರ್ಯ ಆಗಬೇಕು. ಹಲವು ಕಾಲೇಜುಗಳು ಸ್ವಾಯತ್ತತೆಗೆ ಅರ್ಹವಾಗಿರುವುದಿಲ್ಲದಿದ್ದರೂ ಅದರ ಆಕಾಂಕ್ಷಿಗಳಾಗಿರುತ್ತವೆ. ಅವುಗಳನ್ನು ಸ್ವಾಯತ್ತತೆಗೆ ಸಿದ್ಧಪಡಿಸಬೇಕು. ಇವುಗಳಲ್ಲಿ ಕೆಲವು ಕಾಜೇಜುಗಳಾದರೂ ಕಮ್ಯುನಿಟಿ ಕಾಲೇಜನ್ನಾಗಿ – ಅಂದರೆ ವೃತ್ತಿ ಶಿಕ್ಷಣ ಎರಡು ವರ್ಷ ಮತ್ತು ಸಾಂಪ್ರದಾಯಿಕ ಶಿಕ್ಷಣ ಮೂರು ವರ್ಷ – ಪರಿವರ್ತಿಸಬಹುದು. ಇಂಥ ಕಮ್ಯುನಿಟಿ ಕಾಲೇಜುಗಳಿಂದ ಒಂದು ಪರಿಪೂರ್ಣ ಶಿಕ್ಷಣ ಪಡೆಯುವ ಸಾಧ್ಯತೆ ಇರುತ್ತದೆ. ಇದರ ಜೊತೆಯಲ್ಲಿ ಪರೀಕ್ಷೆ ಮತ್ತು ಪಠ್ಯಕ್ರಮಕ್ಕಾಗಿ (ಈಗ ವಿಶ್ವವಿದ್ಯಾನಿಲಯದಲ್ಲಿ ಇರುವಂತೆ) ಒಂದು ನೂತನ ಕೇಂದ್ರ ಮತ್ತು ರಾಜ್ಯ ಮಂಡಳಿಗಳನ್ನು ಸ್ಥಾಪಿಸಿ ಅಗತ್ಯವಿದ್ದ ಕಾಲೇಜುಗಳು ಈ ಮಂಡಳಿಯಿಂದ ಸಂಯೋಜನೆ ಪಡೆದುಕೊಳ್ಳಬಹುದು.

ಉನ್ನತ ಶಿಕ್ಷಣದಲ್ಲಿ ನಿಯಮಗಳು ಪ್ರಗತಿಗೆ ಅಡ್ಡಿ ಆಗಿವೆ. ಒಂದು ವಿಶ್ವವಿದ್ಯಾನಿಲಯ ಸ್ಥಾಪಿಸಲು ಸಂಸತ್ತಿನ (ಶಾಸನ ಸಭೆಯ) ಅನುಮತಿ ಬೇಕು. ಹೀಗಾಗಿ ಇದು ಕಷ್ಟಸಾಧ್ಯ. ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಖಾಸಗಿಯವರು ಮುಂದೆಬಾರದಿರುವುದು ಇದೂ ಒಂದು ಕಾರಣ. ಹೀಗಾಗಿ ಕಾಲೇಜುಗಳ ಭಾರದಿಂದ ವಿಶ್ವವಿದ್ಯಾನಿಲಯ ಕುಸಿಯುತ್ತಿದೆ. ಇದರ ಜೊತೆಯಲ್ಲಿ ಧನಸಹಾಯ ನೀಡಲು ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ (ಯುಜಿಸಿ)ದ ಕಠಿಣ ನಿಯಮಗಳು. ಹೀಗಾಗಿ ಜಗತ್ತಿನ ಯಾವ ಭಾಗದಲ್ಲೂ ಇರದ ಪ್ರವೇಶದ ಬಗ್ಗೆ ನಿಯಮ, ಸಂಯೋಜನೆ, ಸಾರ್ವಜನಿಕ ಹಣ ವಿತರಣೆ, ಅವಕಾಶಗಳ ರಚನೆ ಮತ್ತು ಅನುಮತಿ – ಈ ಎಲ್ಲಾ ಕಾರ್ಯಗಳೂ ಒಂದೇ ಯುಜಿಸಿ ನಿರ್ವಹಿಸುತ್ತಿದೆ. ಇದು ಸರಿಯಲ್ಲ. ಹೀಗಾಗಿ ಒಂದು 'ನೂತನ ಸ್ವತಂತ್ರ ಉನ್ನತ ಶಿಕ್ಷಣ ಪ್ರಾಧಿಕಾರ'ವನ್ನು ಸ್ಥಾಪಿಸಿ ಇದರ ಮೂಲಕ ವಿಶ್ವವಿದ್ಯಾನಿಲಯ ಸ್ಥಾಪಿಸಲು ಅನುಮತಿ, ಪ್ರವೇಶ ಅರ್ಹತೆ ಮತ್ತು ಇತರ ನಿಯಮಗಳನ್ನು ಮಾಡುವ ಅಧಿಕಾರ ಈ ಪ್ರಾಧಿಕಾರಕ್ಕಿರಬೇಕು. ಯುಜಿಸಿ ಕೇವಲ ಹಣ ವಿತರಣೆ ಮಾಡುವ ಅಧಿಕಾರ ಹೊಂದಿರಬೇಕು. ಈ ಪ್ರಾಧಿಕಾರವು ಒಬ್ಬ ಅಧ್ಯಕ್ಷ ಮತ್ತು ಆರು ತಜ್ಞ ಸದಸ್ಯರನ್ನು ಹೊಂದಿರುತ್ತದೆ. ಆರು ವರ್ಷಗಳ ಅವಧಿಯ ಈ ಪ್ರಾಧಿಕಾರದಲ್ಲಿ ಮೂರನೇ ಒಂದು ಭಾಗದಷ್ಟು ಸದಸ್ಯರು ಎರಡು ವರ್ಷಗಳಿಗೊಮ್ಮೆ ನಿವೃತ್ತರಾಗುತ್ತಾರೆ. ಅಧ್ಯಕ್ಷ ಮತ್ತು ಸದಸ್ಯರುಗಳನ್ನು ಆಯ್ಕೆ ಸಮಿತಿಯ ಸಲಹೆಯ ಮೇರೆಗೆ ಪ್ರಧಾನಮಂತ್ರಿ ನೇಮಿಸುತ್ತಾರೆ. ಇಡೀ ರಾಷ್ಟ್ರದಲ್ಲಿ ಇದೊಂದೇ ಉನ್ನತ ಶಿಕ್ಷಣದ ನಿಯಮ, ಪದವಿ ನೀಡುವ ಅಧಿಕಾರ, ಎಲ್ಲವನ್ನೂ ನಿರ್ವಹಿಸಬೇಕು.

ಈ ವರದಿ ಟಿಪ್ಪಣಿಯಲ್ಲಿ ಆರ್ಥಿಕ ಸಂಪನ್ಮೂಲತೆಯ ಬಗ್ಗೆ ಪ್ರಸ್ತಾಪ ಇದೆ. ಜಗತ್ತಿನ ಯಾವ ದೇಶದಲ್ಲೂ ಸರ್ಕಾರದ ಧನಸಹಾಯ ಉನ್ನತ ಶಿಕ್ಷಣಕ್ಕೆ ಇಲ್ಲದಿಲ್ಲ. ನಮ್ಮ ದೇಶದಲ್ಲಿ ಈಗ

---

ಅವ್ವ ಕೊಟ್ಟ ರೊಟ್ಟಿ ಬುತ್ತಿ ಹೊತ್ತು
ತಲೆಯ ತುಂಬ ವಿದ್ಯೆಯ ಕನಸ ಹೊತ್ತು
ಬರಿಗಾಲ ಬಂಟನಾಗಿ ಗಾವುದಗಾವುದ ನಡೆದು
ಕೊನೆಗೂ ಪೇಟೆಯ ಹೃದಯ ತಲುಪಿದಾಗ
ಮೋಡ ಕಂಡ ಸೋಗೆ ಸೊಗಸು.

ಭಗೀರಥನ ಜಾಡು ಹಿಡಿದು
ದಾರಿ ತೋರಿದ ಕೈದೀವಿಗೆಗೆ ಕೈ ಮುಗಿದು
ಕಣ್ಮುಚ್ಚಿ ಶಾರದೆಯ ಗುಡಿ ಹೊಕ್ಕಾಗ
ತುಂಬಿತ್ತು ಕಣ್ಣು.

ಠಾಕುಠೀಕಿನ ಶಿಸ್ತಿನ ಮಾಸ್ತರರು
ಶಹರಿನ ಗಮ್ಮತ್ತಿನ ಶರಾಯಿ ಹುಡುಗರು
ದೊಗಲೆ ಅಂಗಿ ಚಣ್ಣ ಗಾಂಧೀಟೋಪಿಗೆ ಕಳೆಬಂದು
ಮೈದುಂಬಿ ಬೆಳೆದದ್ದು ಜ್ಞಾನದೀವಟಿಗೆಯ ಕೆಳಗೆ
ಅಂದದ ಕೈತೋಟದ ಚೆಂಗುಲಾಬಿಗಳ ನಡುವೆ
ಅರಳಿ ನಿಂತ ಕಾಡುಮಲ್ಲಿಗೆ
ನೋಡನೋಡುತ್ತಾ ಮುಗಿಲೆತ್ತರಕೆ ಚಾಚಿದಾಗ
ಎಲ್ಲ ಹೃದಯವಂತರ ಮನೆ ಬಾಗಿಲು ತೆರೆದು
ಮನೆಯ ಮಗನಾಗಿಸಿಕೊಂಡು
ವಿದ್ಯೆಯ ಪರ್ವತವನೇರಲನುವು ಮಾಡಿದ್ದು
ಚಿನಕುರುಳಿ ಹಳ್ಳಿ ಹೈದನದದೇನು ಮೋಡಿಯೋ !

ಸ್ವಾತಂತ್ರ್ಯ ಮಹಾಯಜ್ಞದ ಅಗ್ನಿಕುಂಡದಲಿ
ಪ್ರಜ್ವಲಿಸಿದ ಮಹಾಗ್ನಿಗೆ ಹನಿತುಪ್ಪವಾಗಿ
ಖದ್ದರಿನ ದೀಕ್ಷೆ ಪಡೆದು
ಎಲ್ಲ ಸವಾಲಿಗೂ ಹೋರಾಟವೇ ಉತ್ತರವೆಂದು
ಹಾಸ್ಯ ಚಟಾಕಿಗಳೇ ಚಿಕಿತ್ಸೆ ಎಂದು ಹೊರಟಾಗ
ತೆರೆದ ಮನದ ಕಂಪು ದಿಕ್ಕು ದಿಕ್ಕಿಗೆ
ಕೆರೆಯ ನೀರನು ಕೆರೆಗೆ ಚೆಲ್ಲುವ ಜೀವಸೆಲೆಯಾಗಿ
ನನ್ನದೆಂಬುದು ಏನೂ ಇಲ್ಲ ನಿನ್ನದೇ ಎಲ್ಲ ಎನ್ನುವ
ಧನ್ಯತೆಯ ಭಾವ ತಳೆದು
ಶಾರದೆಯ ಪರಿಚಾರಿಕೆಯಲ್ಲಿ ಮದುವೆಯನ್ನೇ ಮರೆತು
ಶಿಷ್ಯಕೋಟಿಯ ಪ್ರೀತಿ ತೋಟದಲಿ ನಿಂತು ಆಗಾಗ
ಪೌರೋಹಿತ್ಯದ ಕೈಂಕರ್ಯವನ್ನು ಕೈಗೊಂಡು
ತಾಯ ಪ್ರೀತಿಯ ಎಲ್ಲರಿಗೆ ಹಂಚಿ,
ಶಕುಂತಲೆಯ ಹರಸಿದ ಕಣ್ವರಾಗಿ ಕಂಗೊಳಿಸಿದಾಗ
ಬುದ್ಧ, ಬಸವ ವಿವೇಕರ ವಚನ
ನಿನದಿಸಿತ್ತು ಇಲ್ಲೆಲ್ಲೋ.

ಆಲದ ಬಿಳಲು ತಾನೇ ಮರವೆಂದಾಗ
ನೇವರಿಸಿದ ಕೈ ಆಗಾಗ ಸರಿತಪ್ಪುಗಳ ತೂಗುತ್ತಾ
ತನ್ನ ತಾನೇ ಕನ್ನಡಿಸಿಕೊಂಡದ್ದು ಜನಜನಿತ
ಸಾವನ್ನೇ ಛೇಡಿಸುತ್ತಾ ಕಿಚಾಯಿಸುತ್ತಾ



## ಪ್ರೀತಿಯ ಎಚ್.ಎನ್.

ಬದುಕನ್ನು ಗಾಢವಾಗಿ ಪ್ರೀತಿಸಿದ ಪ್ರೀತಿಯ ಹರಿಕಾರ
ಪವಾಡಗಳನ್ನು ಬಯಲಾಗಿಸುತ್ತ ತಾನೇ ಪವಾಡವಾಗಿ
ಹುಟ್ಟಿದ ದಿನ ಮರೆತು ನೆನ್ನೆ ಮೊನ್ನೆ ಹುಟ್ಟಿದ
ನೆನಪು ಹೊತ್ತು ಮೇಷ್ಟ್ರಾಗಿ ಮತ್ತೆ ಬರುವುದೆಂದು ?
ಆಸೆ ಹೊತ್ತು ಕಾಯುತ್ತಿದೆ ಶಾರದೆಯ ಕುಟೀರ

ಡಾ॥ ಎಂ. ಲೀಲಾವತಿ
ಪ್ರಾಂಶುಪಾಲರು, ನ್ಯಾಷನಲ್ ಕಾಲೇಜು,
ಬಸವನಗುಡಿ, ಬೆಂಗಳೂರು - ೫೬೦ ೦೦೪

ಉನ್ನತ ಶಿಕ್ಷಣಕ್ಕೆ ೦.೭ ಜಿಡಿಪಿ (ಒಟ್ಟು ಶಿಕ್ಷಣಕ್ಕೆ ಶೇಕಡ ೪.೭ ಜಿಡಿಪಿ) ಇದೆ. ಇದು ಏನೇನೂ ಸಾಲದು. ೨೦೧೨ರೊಳಗೆ ಕನಿಷ್ಠ ಶೇಕಡ ೧.೫ರಷ್ಟನ್ನಾದರೂ ಹೆಚ್ಚಿಸಬೇಕು. ಉನ್ನತ ಶಿಕ್ಷಣಕ್ಕೆ ಸರ್ಕಾರದ ಧನಸಹಾಯ ಏನೇನೂ ಸಾಲದು. ಬರಿಯ ಸರ್ಕಾರದ ಮೇಲೆ ಅವಲಂಬಿಸುವುದಕ್ಕಿಂತ ಬೇರೆ ಬೇರೆ ರೀತಿಯಲ್ಲಿ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳಬೇಕು. ಬಹು ಮುಖ್ಯವಾಗಿ ವಿಶ್ವವಿದ್ಯಾನಿಲಯಗಳಲ್ಲಿರುವ ಭೂಮಿ. ಈ ಭೂಮಿಯನ್ನು ಬಳಸಿಕೊಂಡು ಆರ್ಥಿಕ ಶಕ್ತಿಯನ್ನು ಗಳಿಸಿಕೊಳ್ಳಬೇಕು. ವಿದ್ಯಾರ್ಥಿಗಳಿಂದ ಈಗ ಸಂಗ್ರಹಿಸುತ್ತಿರುವ ಶುಲ್ಕ ಏನೇನೂ ಸಾಲದು. ಈ ಫೀಜು ವಿಶ್ವವಿದ್ಯಾನಿಲಯದ ಶೇಕಡ ೨೦ರಷ್ಟಾದರೂ ಖರ್ಚನ್ನು ಭರಿಸುವ ಶಕ್ತಿ ಹೊಂದಿರಬೇಕು. ಈಗ ಅದು ಶೇಕಡ ಹತ್ತರಷ್ಟೂ ಇಲ್ಲ. ದಾನಿಗಳಿಂದ ಹಣ ಸಂಗ್ರಹಿಸಬೇಕು. ಇದು ೧೯೫೦ರಲ್ಲಿ ಶೇಕಡ ೧೨ ಇದ್ದುದು ೧೯೯೦ರಲ್ಲಿ ಶೇಕಡ ಮೂರಕ್ಕೆ ಇಳಿದಿದೆ. ಇದೇ ರೀತಿ ಹಳೆಯ ವಿದ್ಯಾರ್ಥಿಗಳಿಂದ ಸಂಗ್ರಹಿಸಬೇಕು. ಇದಲ್ಲದೇ ಸರ್ಕಾರ ಭೂಮಿಯನ್ನು ಮತ್ತು ಖಾಸಗಿಯವರು ಹಣವನ್ನು ನೀಡಿ ಜಂಟಿಯಾಗಿ ವಿಶ್ವವಿದ್ಯಾನಿಲಯ ಸ್ಥಾಪಿಸಿ ನಡೆಸಬೇಕು. ಇನ್ನೊಂದು ಮುಖ್ಯ ವಿಷಯವೆಂದರೆ ವಿದೇಶೀ ವಿದ್ಯಾರ್ಥಿಗಳನ್ನು ಆಕರ್ಷಿಸುವುದು. ೩೦ ವರುಷದ ಹಿಂದೆ ಇದ್ದಷ್ಟೂ ಭಾರತದ ಶಿಕ್ಷಣದ ಬಗ್ಗೆ ಈಗ ವಿದೇಶೀ ವಿದ್ಯಾರ್ಥಿಗಳಿಗೆ ಅರಿವು ಇಲ್ಲ. ಸುಮಾರು ಐವತ್ತು ಸಾವಿರ ವಿದೇಶೀ ವಿದ್ಯಾರ್ಥಿಗಳನ್ನು ಆಕರ್ಷಿಸಿ ಹತ್ತು ದಶಲಕ್ಷ ಅಮೆರಿಕನ್ ಡಾಲರ್ ಶುಲ್ಕ ಇಟ್ಟರೂ ಅದು ವರ್ಷಕ್ಕೆ ೨೩೦೦ ಕೋಟಿ ರೂಪಾಯಿಗಳಾಗುತ್ತವೆ. ಇದರ ಮತ್ತೊಂದು ವಿಷಾದದ ಸಂಗತಿ ಎಂದರೆ ನಮ್ಮ ದೇಶದಿಂದ ವಿದೇಶಕ್ಕೆ ಒಂದು ಲಕ್ಷದ ಅರವತ್ತು ಸಾವಿರ ವಿದ್ಯಾರ್ಥಿಗಳು ಹೋಗಿ ವರ್ಷಕ್ಕೆ ಇಪ್ಪತ್ತೈದು ದಶಲಕ್ಷ ಅಮೆರಿಕನ್ ಡಾಲರ್ (೧೮,೪೦೦ ಕೋಟಿ ರೂಪಾಯಿಗಳನ್ನು) ನೀಡುತ್ತಿದ್ದಾರೆ. ಇದರ ಬಗ್ಗೆ ವಿಶೇಷವಾಗಿ ಗಮನ ಹರಿಸಬೇಕು.

ಜ್ಞಾನ ಆಯೋಗವು ವಿಶ್ವವಿದ್ಯಾನಿಲಯದ ಗುಣಮಟ್ಟದ ಬಗ್ಗೆ ಚಿಂತನೆ ನಡೆಸಿದೆ. ಈ ವಿಷಯದಲ್ಲಿ ವಿಶ್ವವಿದ್ಯಾನಿಲಯಕ್ಕೆ ಉತ್ತರದಾಯಿತ್ವ ಇಲ್ಲ. ಆದರೆ ಇದು ಸರ್ಕಾರದ ಹಿಡಿತವನ್ನು ಹೆಚ್ಚಿಸುವುದಲ್ಲ. ವಿದ್ಯಾರ್ಥಿಗಳನ್ನು ಸಬಲೀಕರಿಸುವ ದೃಷ್ಟಿಯಲ್ಲಿ ಇದನ್ನು ನೋಡಬೇಕು. ಇದು ಆಗಬೇಕಾದರೆ ಸ್ಪರ್ಧೆ ಇರಬೇಕು. ಇಲ್ಲಿನ ವಿಶ್ವವಿದ್ಯಾನಿಲಯಕ್ಕೆ ಸ್ಪರ್ಧೆ ನೀಡಲು ವಿದೇಶೀ ವಿಶ್ವವಿದ್ಯಾನಿಲಯಗಳನ್ನು ಆಹ್ವಾನಿಸಬೇಕು ಮತ್ತು ನಮ್ಮ ವಿಶ್ವವಿದ್ಯಾನಿಲಯಗಳು ವಿದೇಶಕ್ಕೆ ಹೋಗಬೇಕು. ಆಗ ಮಾತ್ರ ವಿಶ್ವವಿದ್ಯಾನಿಲಯಗಳ ಅಂತಃಶಕ್ತಿ ಅರಿವಾಗುತ್ತದೆ. ಇದರ ಜೊತೆಯಲ್ಲಿ ಈಗಿರುವ ನ್ಯಾಕ್ ಸಂಯೋಜನೆಯ ಪದ್ಧತಿ ಸರಿಯಲ್ಲ. ಇಲ್ಲಿಯವರೆಗೂ ಅದು ಕೇವಲ ಶೇಕಡ ಹತ್ತರಷ್ಟು ಸಂಸ್ಥೆಗಳಿಗೆ ಮಾತ್ರ ಅರ್ಹತಾ ಪತ್ರ ನೀಡಲು ಶಕ್ತವಾಗಿದೆ. ಈ ರೀತಿಯ ಸಂಸ್ಥೆ ಒಂದೇ ಇರುವುದು ಸರಿಯಲ್ಲ. ಮುಂದೆ ಸ್ಥಾಪನೆಯಾಗಲಿರುವ ನೂತನ ಸ್ವತಂತ್ರ ಉನ್ನತ ಶಿಕ್ಷಣ ನಿಯಂತ್ರಣ ಪ್ರಾಧಿಕಾರವು ಅನೇಕ ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ ಕಾಲೇಜುಗಳ ಗುಣಮಟ್ಟದ ಮೌಲ್ಯಮಾಪನ ಮಾಡಲು ಅನುಮತಿ ನೀಡಬೇಕು. ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಪ್ರತಿಭಾವಂತ ಶಿಕ್ಷಕರಿಗೆ ಸಂಬಳ, ಸೌಲಭ್ಯಗಳನ್ನು ಹೆಚ್ಚಿಸಬೇಕು. ಎಲ್ಲರನ್ನೂ ಒಂದೇ ರೀತಿಯಾಗಿ ಭಾವಿಸಬಾರದು. ಕೆಲವು ಮೂಲಭೂತ ವಿಷಯಗಳು – ವಿಜ್ಞಾನ ಮತ್ತು ಕಲಾವಿಭಾಗಗಳಲ್ಲಿ – ಉದಾರ ಶಿಕ್ಷಣಕ್ಕೆ ಅತೀ ಮುಖ್ಯವಾಗಿರುವುದರಿಂದ ಅವುಗಳನ್ನು ಕಲಿಯಲು ಬರುವ ವಿದ್ಯಾರ್ಥಿಗಳಿಗೆ ಮತ್ತು ಬೋಧಿಸುವ ಶಿಕ್ಷಕರಿಗೆ ಉತ್ತೇಜನ ನೀಡಲು ಕ್ರಮ ತೆಗೆದುಕೊಳ್ಳಬೇಕು.

ವರದಿಯ ಮತ್ತೊಂದು ಮುಖ್ಯ ಪ್ರಸ್ತಾಪವೆಂದರೆ 'ರಾಷ್ಟ್ರೀಯ ವಿಶ್ವವಿದ್ಯಾನಿಲಯಗಳು'. ಇವು ದೇಶದ ಶ್ರೇಷ್ಠ ವಿಶ್ವವಿದ್ಯಾನಿಲಯಗಳಾಗಬೇಕು. ಇಲ್ಲಿ ಸ್ನಾತಕ ಮತ್ತು ಸ್ನಾತಕೋತ್ತರ ಪದವಿಯ ಶಿಕ್ಷಣ ನೀಡಬೇಕು. ಎಲ್ಲ ವಿಷಯಗಳಿಗೂ ಅವಕಾಶ ಇರಬೇಕು. ಇಂಥ ಐವತ್ತು ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಬೇಕು. ಅದರಲ್ಲೂ ಆರಂಭದಲ್ಲಿ ಇನ್ನು ಮೂರು ವರ್ಷಗಳಲ್ಲಿ ಹತ್ತು ವಿಶ್ವವಿದ್ಯಾನಿಲಯಗಳನ್ನು ತುರ್ತಾಗಿ ಸ್ಥಾಪಿಸಬೇಕು. ಶ್ರೇಷ್ಠ ಅಧ್ಯಾಪಕರನ್ನು ದೇಶ ಮತ್ತು ವಿದೇಶಗಳಿಂದ ಆಕರ್ಷಿಸಬೇಕು. ಖಾಸಗಿಯವರು ಇಂಥ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಲು ಮುಂದೆ ಬರುವಂತೆ ಅವರಿಗೆ ಸರ್ಕಾರಿ ಭೂಮಿಯನ್ನು ನೀಡಬೇಕು. ಹೆಚ್ಚುವರಿ ಭೂಮಿ ಇದ್ದರೆ ಇದನ್ನೇ ಒಂದು ಸಂಪನ್ಮೂಲ ಸಂಗ್ರಹಕ್ಕೆ ದಾರಿ ಮಾಡಿಕೊಳ್ಳಲು ವಿಶ್ವವಿದ್ಯಾನಿಲಯಕ್ಕೆ ಅನುಮತಿ ಇರಬೇಕು. ಒಂದು ಸ್ವತಂತ್ರ ಸಂಸ್ಥೆಯ ಮೂಲಕ ಅಖಿಲ ಭಾರತ ಮಟ್ಟದ ಪ್ರವೇಶ ಪರೀಕ್ಷೆ ನಡೆಸಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿಕೊಳ್ಳಬೇಕು. ಸೆಮೆಸ್ಟರ್ ಮತ್ತು ಕ್ರೆಡಿಟ್ ಆಧಾರಗಳ ಮೇಲೆ ಪರೀಕ್ಷಾ ವ್ಯವಸ್ಥೆ ಇರಬೇಕು. ಶಿಕ್ಷಕರ ಕೊಡುಗೆ, ಸಂಶೋಧನೆ, ವಿದ್ಯಾರ್ಥಿ ಮೌಲ್ಯಮಾಪನಗಳ ಆಧಾರದ ಮೇಲೆ ಭಡ್ತಿ ನೀಡಬೇಕು. ಇಂಥ ವಿಶ್ವವಿದ್ಯಾನಿಲಯಗಳಿಗೆ ಸಂಯೋಜನೆ ನೀಡುವ ಅವಕಾಶವಿರುವುದಿಲ್ಲ. ಕೇಂದ್ರದಲ್ಲಿ ವಿಭಾಗ ತೆಗೆದು ಸ್ನಾತಕ ಮತ್ತು ಸ್ನಾತಕೋತ್ತರ ಶಿಕ್ಷಣ ನೀಡಬೇಕು. ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಅನುಪಾತ ೨:೧ ಇರಬೇಕು.

ಜ್ಞಾನ ಆಯೋಗದ ಟಿಪ್ಪಣಿಯ ಕೊನೆಯ ಅಂಶ ಪ್ರವೇಶಾತಿಯ ಬಗೆಗೆ. ಯಾವುದೇ ಕಾರಣದಿಂದಲೂ, ಮುಖ್ಯವಾಗಿ ಹಣದ ಕೊರತೆಯಿಂದ, ಯಾರೂ ಉನ್ನತ ಶಿಕ್ಷಣದಿಂದ ವಂಚಿತರಾಗಬಾರದು. ಇದಕ್ಕೆ ಒಂದು ಸುಲಭ ಉಪಾಯವೆಂದರೆ ಕಣ್ಣುಮುಚ್ಚಿಕೊಂಡು ಶೈಕ್ಷಣಿಕ ಅರ್ಹತೆಯಿದ್ದವರಿಗೆಲ್ಲಾ ಉನ್ನತ ಶಿಕ್ಷಣದ ಬಾಗಿಲು ತೆರೆಯುವುದು. ವಿದ್ಯಾರ್ಥಿಗಳಿಗೆ ಹಣಕ್ಕಾಗಿ ಎರಡು ಬ್ಯಾಂಕ್‌ಗಳನ್ನು ಗುರುತಿಸಿ ಅವುಗಳು ಅವರ ಎಲ್ಲಾ ಖರ್ಚುಗಳನ್ನೂ ಭರಿಸುವಂತೆ ನೋಡಿಕೊಳ್ಳಬೇಕು. ಬ್ಯಾಂಕುಗಳಿಗೆ ತಮ್ಮದೇ ನಿಯಮವಿದ್ದರೆ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಸ್ಕಾಲರ್‌ಶಿಪ್ ಅನ್ನು ದುರ್ಬಲರಿಗೆ, ಅವಕಾಶವಂಚಿತರಿಗೆ ನೀಡಲು ಒಂದು ಲಕ್ಷ ಸ್ಕಾಲರ್‌ಶಿಪ್ ಅನ್ನು ಸ್ಥಾಪಿಸಬೇಕು.

ಇವಿಷ್ಟು ಟಿಪ್ಪಣಿಯ ರೂಪದಲ್ಲಿ ಜ್ಞಾನ ಆಯೋಗ ಹೇಳಿದ್ದರೂ ಇದರಲ್ಲಿ ಅಂಥಾ ವಿಶೇಷತೆಯಾಗಲಿ ಹೊಸ ಜ್ಞಾನವಾಗಲಿ ಕಾಣಿಸುತ್ತಿಲ್ಲ. ಉನ್ನತಶಿಕ್ಷಣಕ್ಕೆ ಹೊಸ ಆಯಾಮವನ್ನು ನೀಡುವ ಕ್ರಾಂತಿಕಾರಕ ಯಾವ ಅತ್ಯಮೂಲ್ಯ ಸಲಹೆಗಳೂ ನನಗೆ ಕಾಣಿಸುತ್ತಿಲ್ಲ. ೧೫೦೦ ವಿಶ್ವವಿದ್ಯಾನಿಲಯಗಳಾಗಬೇಕು ಎಂದರೆ ಹೇಗೆ ಸಾಧ್ಯ ? ಸ್ವಾಯತ್ತತೆ ನೀಡಬೇಕೆಂದರೆ ಅದರ ನೀತಿ-ನಿಯಮಗಳು ಹೆಚ್ಚು ಭಯಾನಕವಾಗಿವೆ. ರಾಷ್ಟ್ರೀಯ ವಿಶ್ವವಿದ್ಯಾನಿಲಯದ ಸಲಹೆ ಈಗ ಇರುವ ಕೇಂದ್ರೀಯ ವಿಶ್ವವಿದ್ಯಾನಿಲಯದ ಮಾದರಿ ಅಷ್ಟೆ. 'ಸ್ನಾತಕ ವಿಷಯಗಳನ್ನು ಇಲ್ಲಿಯೇ ಕಲಿಸಬೇಕು' ಎಂಬುದನ್ನು ಬಿಟ್ಟು ಒಂದು ಲಕ್ಷ ಸ್ಕಾಲರ್‌ಶಿಪ್ ನೀಡಬೇಕೆನ್ನುತ್ತದೆ ವರದಿ. ಕೇವಲ ಶೇಕಡ ಒಂದರಷ್ಟು ವಿದ್ಯಾರ್ಥಿಗಳು ಮಾತ್ರ ಇದರ ಪ್ರಯೋಜನ ಪಡೆಯಬಹುದು. ಈಗ ಇರುವ ವಿಶ್ವವಿದ್ಯಾನಿಲಯಗಳ ಜೊತೆಯಲ್ಲಿಯೇ ಒಂದು ಕೇಂದ್ರ ಮತ್ತು ರಾಜ್ಯಮಟ್ಟದ ಸ್ನಾತಕ ಶಿಕ್ಷಣ ಮಂಡಳಿಗಳ ಸ್ಥಾಪನೆ ಅನಗತ್ಯವಾದದ್ದು. ಇವುಗಳು ವಿಶ್ವವಿದ್ಯಾನಿಲಯದ ಕೆಲಸಗಳಿಗಿಂತ ಭಿನ್ನವಾಗಿ ಕೆಲಸ ಮಾಡುವುದಿಲ್ಲ. ಇಲ್ಲಿಯವರೆಗೆ ಯುಜಿಸಿ ಮಾಡುತ್ತಿದ್ದ ಕೆಲಸಗಳಿಗೆ ಕಡಿವಾಣ ಹಾಕಿ 'ನೂತನ ಸ್ವತಂತ್ರ ಉನ್ನತ ಶಿಕ್ಷಣ ನಿಯಂತ್ರಣ ಪ್ರಾಧಿಕಾರ' ಸ್ಥಾಪಿಸಿ ಕಾರ್ಯನಿರ್ವಹಿಸುವ ಪ್ರಸ್ತಾಪವನ್ನು ಇತ್ತೀಚೆಗೆ ನಡೆದ ವಿಶ್ವವಿದ್ಯಾನಿಲಯಗಳ ಕುಲಪತಿಗಳ ಸಮ್ಮೇಳನ ತಳ್ಳಿಹಾಕಿದೆ. ಫೀಜನ್ನು ಜಾಸ್ತಿ ಮಾಡುವುದಕ್ಕೂ ಸಮ್ಮೇಳನ ತನ್ನ ವಿರೋಧವನ್ನು ವ್ಯಕ್ತಪಡಿಸಿದೆ. ಪ್ರಧಾನ ಮಂತ್ರಿ ಮನಮೋಹನ ಸಿಂಗ್‌ರವರು ಈಗಾಗಲೇ ಜ್ಞಾನ ಆಯೋಗದ ವರದಿಗೆ ಹತ್ತರಲ್ಲಿ ಏಳು ಅಂಕಗಳನ್ನು ನೀಡಿದ್ದಾರೆ.

ಒಂದು ಮಾತು ಸ್ಪಷ್ಟವಿದೆ. ಉನ್ನತ ಶಿಕ್ಷಣ ಪಡೆದವರಿಗೆ ಅವಕಾಶಗಳು ಉದ್ಯೋಗದಲ್ಲಿ ವಿಫಲವಾಗಿವೆ. ನಮಗಿರುವ ಮುಖ್ಯ ಸ್ಪರ್ಧಿ ಚೀನಾ. ಅಲ್ಲಿ ಹಠತೊಟ್ಟು ಉನ್ನತ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಿ ದಾಪುಗಾಲು ಹಾಕುತ್ತಿದೆ. ಅನೇಕ ವಿಷಯಗಳಲ್ಲಿ ಬೋಧಿಸಲು ಕಾಲೇಜುಗಳಲ್ಲಿ ಅಧ್ಯಾಪಕರೇ ಸಿಗುತ್ತಿಲ್ಲ. ಭೌತಶಾಸ್ತ್ರ, ರಸಾಯನಶಾಸ್ತ್ರ, ವಾಣಿಜ್ಯ, ಆಂಗ್ಲಭಾಷೆ, ಕಂಪ್ಯೂಟರ್ – ಹೀಗೆ. ಇಂಥ ಸನ್ನಿವೇಶದಲ್ಲಿ 'ಯುವಭಾರತ'ವನ್ನು ನಾವು ನಾಲ್ಕು ಗೋಡೆಗಳ ಮನೆಯಲ್ಲಿ ಕುಳ್ಳಿರಿಸಿ ಅವರ ಸಾಮರ್ಥ್ಯವನ್ನು ಅಪವ್ಯಯ ಮಾಡಿದರೆ ದೇಶದ ಸರ್ವತೋಮುಖ ಅಭಿವೃದ್ಧಿ ಆಗುವುದಿಲ್ಲ. ಇದಕ್ಕೆ ಎಲ್ಲರನ್ನು ಒಳಗೊಳ್ಳಬಹುದಾದ ಶಿಕ್ಷಣ ಪದ್ಧತಿ ಬೇಕು. ಜ್ಞಾನ ಆಯೋಗದ ತಳಸ್ಪರ್ಶಿ ವರದಿಯ ಪ್ರಕಾರ ಕೇವಲ ಶೇಕಡ ೭ರಷ್ಟು (೧೮-೨೪ ವರುಷದವರು) ಮಾತ್ರ ಉನ್ನತ ಶಿಕ್ಷಣ ಪಡೆಯಲು ಸಾಧ್ಯವಾಗಿದೆ. ಎಲ್ಲಿದ್ದೇವೆ ನಾವು ? ಯೂರೋಪಿನ ಬಹುಖ್ಯಾತ ವಿಶ್ವವಿದ್ಯಾನಿಲಯಗಳಾದ ಇಂಗ್ಲೆಂಡಿನ ಆಕ್ಸ್‌ಫರ್ಡ್, ಇಟಲಿಯ ಬೋಲೋಗ್ನಗಳು ಸ್ಥಾಪಿತವಾಗುವ ಎಷ್ಟೋ ದಶಕಗಳ ಮೊದಲೇ ನಮ್ಮ ದೇಶದಲ್ಲಿ ನಲಂದ ವಿಶ್ವವಿದ್ಯಾನಿಲಯ (ಕ್ರಿ.ಶ. ೪೨೭) ಇತ್ತು. ನಲಂದ ವಿಶ್ವವಿದ್ಯಾನಿಲಯ ನಾಶವಾಗಲು ಇತರ ಕಾರಣಗಳ ಜೊತೆಗೆ ಆರ್ಥಿಕ ಕೊರತೆ ಮತ್ತು ವಿಶ್ವವಿದ್ಯಾನಿಲಯದ ಅಧಿಕಾರಿಗಳ ಭ್ರಷ್ಟಾಚಾರ ಕಾರಣಗಳೆಂದು ಇತಿಹಾಸಕಾರರು ಗುರುತಿಸುತ್ತಾರೆ. ಕಾಲೇಜು ಸ್ಥಾಪಿಸಲು, ಕೋರ್ಸುಗಳನ್ನು ಸರ್ಕಾರದ ಕಪಿಮುಷ್ಟಿಯಿಂದ ಒಪ್ಪಿಗೆ ಪಡೆಯಲು ರಾಜಧಾನಿಯ ಬಹು ಅಂತಸ್ತಿನ ಕಟ್ಟಡದಲ್ಲಿ ಒದ್ದಾಡುವುದು, ವಿಶ್ವವಿದ್ಯಾನಿಲಯದ ನಿಧಾನ ನಿರ್ಧಾರ ಇವೆಲ್ಲವುಗಳ ಮೇಲೆ ವರದಿ ತನ್ನ ಕ್ಷ-ಕಿರಣ ಬೀರಬೇಕಾಗಿತ್ತು. ಸರ್ಕಾರ ಉನ್ನತ ಶಿಕ್ಷಣವನ್ನು ಖಾಸಗಿಯವರಿಗೆ ಒಪ್ಪಿಸಿ ಹಿಂತೆಗೆಯುತ್ತಿರುವುದು ಆರೋಗ್ಯವಂತ ಸಮಾಜದ ಲಕ್ಷಣವಲ್ಲ. ಈ ಹಿಂದೆ ಇದ್ದಂತೆ ಸರ್ಕಾರದ ಭೂಮಿ ಮತ್ತು ಖಾಸಗಿಯವರದೇ ಆದ ಅನೇಕ ಶಿಕ್ಷಣ ಸಂಸ್ಥೆಗಳು ಬಂದಿದ್ದು ಹಳೆಯ ಕತೆ. ಈಗ ಜ್ಞಾನ ಆಯೋಗದ ಹೊಸ ನೋಟ ಏನಿದೆ ಇದರಲ್ಲಿ ? (ಚಿತ್ರಕೃಪೆ : ಬೆಂಗಳೂರು ದರ್ಶನ)

ಡಾ।। ಜಯಪ್ರಕಾಶ ಮಾವಿನಕುಳಿ
ಪ್ರಿನ್ಸಿಪಾಲ್, ಎಂ.ಜಿ.ಎಂ. ಕಾಲೇಜು, ಉಡುಪಿ – [illegible]

# ಸಾಹಿತ್ಯ ಸಮ್ಮೇಳನ ಸಾಧಿಸಿದ್ದೇನು ?

**ನಾ. ದಿವಾಕರ**

ಉಡುಪಿಯಲ್ಲಿ ನಡೆದ ೭೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ ನಿರೀಕ್ಷಿತ ಮಟ್ಟದಲ್ಲಿ ಉತ್ಸಾಹ ಮೂಡಿಸದಿರುವುದು ದುರದೃಷ್ಟಕರ. ರಾಜಕೀಯ ಅರಾಜಕತೆಯ ನಡುವೆಯೇ ನಡೆದ ಸಮ್ಮೇಳನವು, ರಾಜ್ಯದ ಜನತೆ ಎದುರಿಸುತ್ತಿರುವ ಜ್ವಲಂತ ಸಾಂಸ್ಕೃತಿಕ-ಸಾಹಿತ್ಯಿಕ ಸಮಸ್ಯೆಗಳಿಗೆ ನಿರ್ದಿಷ್ಟವಾದ ಪರಿಹಾರ ಮಾರ್ಗವನ್ನು ಸೂಚಿಸಬಹುದೆಂಬ ಬಹುಜನಗಳ ನಿರೀಕ್ಷೆ, ಎಂದಿನಂತೆ ಹುಸಿಯಾಗೇ ಉಳಿದಿದೆ. ಅನೇಕ ಆಭಾಸಗಳ ನಡುವೆ ಜರುಗಿದ ಮೂರುದಿನಗಳ ಸಮ್ಮೇಳನಕ್ಕೆ ಮುನ್ನ ಪ್ರಗತಿಪರರು ಏರ್ಪಡಿಸಿದ್ದ ಸೌಹಾರ್ದ ಸಾಹಿತ್ಯ ಸಮ್ಮೇಳನ, ಇತ್ತ ಪೂರಕವೂ ಆಗದೆ, ಅತ್ತ ಪರ್ಯಾಯವೂ ಆಗದೆ ಪರ್ಯವಸಾನ ಗೊಂಡಿದ್ದೂ ವಿಪರ್ಯಾಸವೇ. ಪರ್ಯಾಯ ಸಮ್ಮೇಳನದ ಆಯೋಜಕರೂ ಸಹ ಅದನ್ನು ಪೂರಕವೆಂದೇ ಹೇಳಿಕೊಂಡಿದ್ದು, ಎಲ್ಲೋ ಒಂದು ಕಡೆ ಅಳುಕಿನ ಮನೋಭಾವ ಸೂಚಿಸಿತ್ತು. ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಸಾಹಿತ್ಯ ಜಾತ್ರೆಗಿಂತಲೂ ಭಿನ್ನವಾಗಿ, ಜನರ ಸಮಸ್ಯೆಗಳನ್ನು ಕೇಂದ್ರ ಬಿಂದುವಾಗಿರಿಸಿಕೊಂಡು ನಡೆಸುವ ಸಮ್ಮೇಳನ ಪರ್ಯಾಯವೇ ಅಲ್ಲವೆ ? ೭೦ರ ದಶಕದ ಬಂಡಾಯ ಸಾಹಿತ್ಯದಲ್ಲಿ ಕಂಡುಬಂದ ಗಾಂಭೀರ್ಯ, ಉತ್ಸುಕತೆ ಮತ್ತು ಸಂಚಲನ, ಪ್ರಸ್ತುತ ಪರ್ಯಾಯ ಸಮ್ಮೇಳನದಲ್ಲಿ ಕಂಡುಬರಲಿಲ್ಲವೆಂದೇ ಹೇಳಬಹುದು. ಆದಾಗ್ಯೂ ಪೂರಕವಾಗುವಂತಿದ್ದರೆ ಸಮ್ಮೇಳನದ



ಅವಶ್ಯಕತೆಯೇ ಇರಲಿಲ್ಲವೆನಿಸುತ್ತದೆ. ಪರ್ಯಾಯವೇ ಆಗಿದ್ದಲ್ಲಿ ಇನ್ನೂ ಹೆಚ್ಚಿನ ಆಳವಾದ ಚಿಂತನೆ ಅವಶ್ಯವಿತ್ತೆಂದು ವ್ಯಾಖ್ಯಾನಿಸಬಹುದು. ಏನೇ ಆದರೂ, ಉಡುಪಿಯಲ್ಲಿ ನಡೆದ ಎರಡೂ ಸಮ್ಮೇಳನಗಳು ಕನ್ನಡ ಸಾಹಿತ್ಯಾಸಕ್ತರನ್ನು, ಸಾಮಾನ್ಯ ಜನತೆಯನ್ನು ನಿರಾಸೆಗೊಳಿಸಿರುವುದು ಸ್ಪಷ್ಟವಾಗಿದೆ.

ಸಮ್ಮೇಳನದ ಪೂರ್ವದಲ್ಲಿ ಸಾಹಿತ್ಯ ಲೋಕದಲ್ಲಿ ಕೇಳಿಬಂದ ಅಪಸ್ವರಗಳು, ಭಿನ್ನಾಭಿಪ್ರಾಯಗಳು ಪ್ರಮುಖವಾಗಿ ಆಂಗ್ಲ ಭಾಷಾ ಕಲಿಕೆ ಮತ್ತು ಶಾಸ್ತ್ರೀಯ ಭಾಷೆಯನ್ನು ಕುರಿತದ್ದಾಗಿತ್ತು. ಒಂದನೇ ತರಗತಿಯಿಂದಲೇ ಆಂಗ್ಲ ಭಾಷೆಯನ್ನು ಕಲಿಸುವ ಸರ್ಕಾರದ ನಿರ್ಧಾರವನ್ನು ಸಮ್ಮೇಳನದ ಪ್ರಯೋಜಕರು ಮತ್ತು ಹಲವಾರು ಸಾಹಿತಿಗಳು ತೀವ್ರವಾಗಿ ಖಂಡಿಸುತ್ತಿದ್ದ ಹಿನ್ನೆಲೆಯಲ್ಲಿ, ಸಮ್ಮೇಳನದಲ್ಲಿ ಈ ನೀತಿಯ ಫಲಶ್ರುತಿಯ ಬಗ್ಗೆ ನಿಷ್ಪಕ್ಷಪಾತ ಸಮೀಕ್ಷೆ ನಡೆಸಲು ಸರ್ಕಾರವನ್ನು ಆಗ್ರಹಿಸುವ ನಿರ್ಧಾರ ಕೈಗೊಂಡಿರುವುದು ಬಾಲಿಶವೆನಿಸುತ್ತದೆ. ಈಗಾಗಲೇ ಈ ವಿಷಯದಲ್ಲಿ ರಾಜ್ಯದ ಹಲವಾರು ಚಿಂತಕರು, ಸಾಹಿತಿಗಳು, ಕಲಾವಿದರು ತಮ್ಮ ವಾದಗಳನ್ನು ಮಂಡಿಸಿ, ತೀವ್ರ ಚರ್ಚೆಯೂ ನಡೆದಿದೆ. ಒಂದು ರೀತಿಯಲ್ಲಿ ಆಂಗ್ಲರು ಭಾರತವನ್ನು ಇಬ್ಭಾಗ ಮಾಡಿದಂತೆಯೇ, ಶಿಕ್ಷಣದಲ್ಲಿ ಆಂಗ್ಲ ಮಾಧ್ಯಮ ಅನುಷ್ಠಾನಗೊಳಿಸುವ ಸರ್ಕಾರದ ನಿರ್ಧಾರ ಕನ್ನಡ ಸಾರಸ್ವತ ಲೋಕವನ್ನು ಇಬ್ಭಾಗ ಮಾಡಿದೆ. ಆದರೆ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ರಾಜ್ಯದ ಸಾಮಾಜಿಕ ಸ್ಥಿತ್ಯಂತರದ ಹಿನ್ನೆಲೆಯಲ್ಲಿ ಈ ಬಗ್ಗೆ ಗಂಭೀರ ಚರ್ಚೆಯನ್ನು ನಡೆಸುವ ಅಗತ್ಯ ಇತ್ತೆಂದು ಹೇಳಬೇಕಿಲ್ಲ. ಇನ್ನು ಶಾಸ್ತ್ರೀಯ ಭಾಷೆಗೆ ಸಂಬಂಧಿಸಿದಂತೆ ಸಮ್ಮೇಳನ ಯಾವುದೇ ನಿರ್ಣಯ ಕೈಗೊಳ್ಳದಿರುವುದು ಎಲ್ಲರಲ್ಲೂ ಅಚ್ಚರಿ ಮೂಡಿಸಿದೆ. ಇಲ್ಲಿ ಬಹುಶಃ ಕೇಂದ್ರ ಮಂತ್ರಿಗಳ ಭರವಸೆ ತನ್ನದೇ ಪಾತ್ರ ವಹಿಸಿರುವ ಸಾಧ್ಯತೆಗಳಿವೆ. ಆದಾಗ್ಯೂ ಶಾಸ್ತ್ರೀಯ ಭಾಷೆಯ ವಿಚಾರದಲ್ಲಿ ಸಾಹಿತ್ಯ ಲೋಕದಲ್ಲಿ ತೀವ್ರ ಭಿನ್ನಾಭಿಪ್ರಾಯ ಮೂಡಿರುವ ಹಿನ್ನೆಲೆಯಲ್ಲಿ ಶಾಸ್ತ್ರೀಯ ಭಾಷೆಯ ಸ್ಥಾನವನ್ನು ಗಳಿಸುವುದರಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಉಂಟಾಗಬಹುದಾದ ಸತ್ಪರಿಣಾಮಗಳನ್ನಾದರೂ ಸಮ್ಮೇಳನ ಚರ್ಚೆಗೊಳಪಡಿಸಬಹುದಾಗಿತ್ತು. ಸಾಮಾನ್ಯ ಜನತೆಯ ದೃಷ್ಟಿಯಿಂದ ನಗಣ್ಯವಾಗಿರುವ ಈ ವಿವಾದ, ಸಾಹಿತ್ಯ ವಲಯದಲ್ಲೂ ಪರಸ್ಪರ ದ್ವೇಷಾರೋಪಗಳಿಗೆ ಕಾರಣವಾಗಿರುವುದು ಸಮ್ಮೇಳನದ ಸಂದರ್ಭದಲ್ಲೂ ಪ್ರಕಟವಾಗಿದೆ. ಹಾಗಾಗಿ ಸಾಹಿತ್ಯ ಸಮ್ಮೇಳನ ಈ ವಿಷಯದಲ್ಲಿ ತನ್ನದೇ ಆದ ಸ್ಪಷ್ಟ ನಿಲುವನ್ನು ಪ್ರತಿಪಾದಿಸುವಲ್ಲಿ ವಿಫಲವಾಗಿದೆ ಎಂದೇ ಹೇಳಬಹುದು.

ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಕೈಗೊಳ್ಳುವ ನಿರ್ಣಯಗಳು ಅನೇಕ ವೇಳೆ ಹಾಳೆಗಳ ಮೇಲೆಯೇ ಉಳಿದುಬಿಡುತ್ತವೆ. ಒಂದೆಡೆ ರಾಜಕೀಯ ಇಚ್ಛಾಶಕ್ತಿಯ ಕೊರತೆಯಾದರೆ, ಇನ್ನೊಂದೆಡೆ, ಈ ನಿರ್ಣಯಗಳನ್ನಾಧರಿಸಿದ ಯಾವುದೇ ಜನಪರ-ಕನ್ನಡಪರ ಕೆಲಸಗಳನ್ನು ಸಾಹಿತ್ಯ ಪರಿಷತ್ತಾಗಲೀ, ಕನ್ನಡ ಸಂಘಟನೆಗಳಾಗಲೀ ಕೈಗೊಳ್ಳುವುದಿಲ್ಲ. ಪ್ರಸ್ತುತ ಸಮ್ಮೇಳನದಲ್ಲಿ ಕೈಗೊಂಡ ಅನೇಕ ನಿರ್ಣಯಗಳು ಹಿಂದಿನ ಸಮ್ಮೇಳನಗಳ ಪುನರಾವರ್ತನೆಯಂತಿವೆ. ಹನ್ನೆರಡು ನಿರ್ಣಯಗಳಲ್ಲಿ ನಾಲ್ಕು ಹಣಕಾಸಿಗೆ ಸಂಬಂಧಿಸಿದ್ದಾದರೆ ಇನ್ನುಳಿದಂತೆ ಗಂಭೀರವಾದ ಚಿಂತನೆಯನ್ನೊಳಗೊಂಡ ನಿರ್ಣಯಗಳು ಕಂಡುಬರುವುದಿಲ್ಲ. ಕೊಡಗು ಮತ್ತು ಉತ್ತರ ಕರ್ನಾಟಕದಲ್ಲಿ ಕೇಳಿಬರುತ್ತಿರುವ ಪ್ರತ್ಯೇಕತೆ ಮತ್ತು ಸ್ವಾಯತ್ತತೆಯ ಬಗ್ಗೆ ಯಾವುದೇ ಸ್ಪಷ್ಟ ನಿಲುವು ತಾಳದಿರುವುದು ಅಚ್ಚರಿ ಮೂಡಿಸುತ್ತದೆ. ಶಿಕ್ಷಣದಲ್ಲಿ ಕನ್ನಡವನ್ನು ಕಡ್ಡಾಯ ಮಾಡುವ ನಿಟ್ಟಿನಲ್ಲಿ ಸರ್ಕಾರದ ವೈಫಲ್ಯದ ಹಿನ್ನೆಲೆಯಲ್ಲಿ, ಸರ್ಕಾರದಿಂದ ಶೀಘ್ರ ಭಾಷಾ ನೀತಿಯ ಅನುಷ್ಠಾನಕ್ಕೆ ಆಗ್ರಹಿಸುವ ನಿರ್ಣಯ ಅತ್ಯಗತ್ಯವಾಗಿತ್ತು. ಸರ್ಕಾರಿ ಇಲಾಖೆಗಳಲ್ಲಿ, ನಾಮಫಲಕಗಳಲ್ಲಿ ಕನ್ನಡ ಕಡ್ಡಾಯವಾದರೆ ಸಾಕೆಂಬ ಮನೋಭಾವ ಇಲ್ಲಿ ಕಂಡುಬರುತ್ತದೆ. ಭಾಷಾ ಅಭಿವೃದ್ಧಿಗೆ ಅವಶ್ಯಕವಾದ ಅಧೋರಚನೆಗಳನ್ನು ಸೂಕ್ತ ರೀತಿಯಲ್ಲಿ ಒದಗಿಸಲು ರಾಜ್ಯದಲ್ಲಿ ಯಾವುದೇ ಸರ್ಕಾರವೂ ಕ್ರಮ ಕೈಗೊಳ್ಳದಿರುವುದು ಸ್ಪಷ್ಟವಾಗಿದ್ದರೂ, ಸಮ್ಮೇಳನದಲ್ಲಿ ಈ ಕುರಿತ ಯಾವುದೇ ದನಿ ಕೇಳಿಬಂದಿಲ್ಲ. ಗಡಿನಾಡ ಪ್ರದೇಶಗಳಲ್ಲಿ ಕನ್ನಡ ಸೊರಗುತ್ತಿರುವುದು ಸರ್ಕಾರದ ನೀತಿಗಳಿಂದಲೇ ಎಂದರೆ ತಪ್ಪಾಗಲಾರದು. ಆಂಗ್ಲ ಮಾಧ್ಯಮವನ್ನು ವಿರೋಧಿಸುವುದರಿಂದ ಕನ್ನಡ ಕಲಿಕೆ ಮತ್ತು ಭಾಷಾ ಅಭಿವೃದ್ಧಿ ಸಾಧ್ಯವಾಗುವುದಿಲ್ಲ ಎಂಬ ಅಂಶವನ್ನು ನಾವು ಮನಗಾಣಬೇಕಾಗಿದೆ. ಬದಲಾಗಿ ಗಡಿನಾಡ ಪ್ರದೇಶಗಳಲ್ಲಿ ಹೆಚ್ಚು ಕನ್ನಡ ಶಾಲೆಗಳನ್ನು ತೆರೆದು, ಶಿಕ್ಷಕರನ್ನು ನೇಮಿಸುವುದು ತುರ್ತು ಅಗತ್ಯತೆಯಾಗಿದೆ. ಪ್ರಾಥಮಿಕ ಶಿಕ್ಷಣದ ರಾಷ್ಟ್ರೀಕರಣವಾಗದೆ, ಸಮಗ್ರ ರಾಜ್ಯ ಜನತೆಗೆ ಸಾರ್ವತ್ರಿಕ ಶಿಕ್ಷಣ ಸೌಲಭ್ಯ ಒದಗಿಸಲಾಗುವುದಿಲ್ಲ ಎಂಬ ಕಹಿ ಸತ್ಯ ಸಮ್ಮೇಳನದಲ್ಲಿ ಪ್ರಕಟವಾಗಲೇ ಇಲ್ಲ. ಈ ಸಂದರ್ಭದಲ್ಲೇ ಗ್ರಾಮೀಣ ಜನತೆಗೆ ಅವಶ್ಯವೆನಿಸಿರುವ ಆಂಗ್ಲ ಶಿಕ್ಷಣ, ಈ ಅನಿಸಿಕೆಯನ್ನು ಸೃಷ್ಟಿಸಿರುವ ಸಾಮಾಜಿಕ-ಆರ್ಥಿಕ ಅಭದ್ರತೆ, ಜಾಗತೀಕರಣದಿಂದ ಕರ್ನಾಟಕದ ಜನತೆಯಲ್ಲಿ ಮೂಡಿರುವ ಅಭದ್ರತಾ ಮನೋಭಾವ ಈ ಎಲ್ಲಾ ಅಂಶಗಳನ್ನು ಸಮ್ಮೇಳನದಲ್ಲಿ ಚರ್ಚಿಸುವ ಆಗತ್ಯವಿತ್ತೆನಿಸುತ್ತದೆ. ಹೊರರಾಜ್ಯದವರು ಕರ್ನಾಟಕವನ್ನು ಆಕ್ರಮಿಸುತ್ತಿದ್ದಾರೆ ಎಂದು

ಹುಯಿಲೆಬ್ಬಿಸುವ ಪ್ರವೃತ್ತಿ ಸಾಹಿತ್ಯ ಸಮ್ಮೇಳನದಲ್ಲೂ ವ್ಯಕ್ತಗೊಂಡದ್ದು ವಿಷಾದನೀಯ. ಆದಾಗ್ಯೂ ಈ ಅಂಶಗಳನ್ನು ಕುರಿತ ಗಂಭೀರ ಚಿಂತನೆ ಸಮ್ಮೇಳನದಲ್ಲಿ ಎಲ್ಲಿಯೂ ವ್ಯಕ್ತವಾಗಿಲ್ಲ. ಸಾಹಿತ್ಯವನ್ನು ಸಮಾಜದ ಒಂದು ಅವಿಭಾಜ್ಯ ಅಂಗವಾಗಿ ಪರಿಗಣಿಸಿದಾಗ ಮಾತ್ರ, ವರ್ಷಂಪ್ರತಿ ನಡೆಯುವ ಸಾಹಿತ್ಯ ಸಮ್ಮೇಳನಗಳಲ್ಲಿ ಸಾಮಾಜಿಕ-ಆರ್ಥಿಕ ಸ್ಥಿತ್ಯಂತರದ ನೆಲೆಗಟ್ಟಿನಲ್ಲಿ ಗಂಭೀರವಾದ ಚರ್ಚೆ ನಡೆಯಲು ಸಾಧ್ಯ. ಆದರೆ ಅಂತಿಮ ನಿರ್ಣಯಗಳನ್ನು ನೋಡಿದಾಗ ಈ ಆಶಯಗಳ ಕೊರತೆ ಎದ್ದುಕಾಣಿಸುತ್ತದೆ.

ಇಡೀ ಸಾಹಿತ್ಯ ಸಮ್ಮೇಳನದಲ್ಲಿ ಜನಸಾಮಾನ್ಯರನ್ನು, ಸಾಹಿತ್ಯಾಸಕ್ತರನ್ನು ಮುಖ್ಯವಾಗಿ ಕಾಡಿದ ಪ್ರಶ್ನೆ ನಮ್ಮ ಮುದ್ರಣ-ದೃಶ್ಯ ಮಾಧ್ಯಮಗಳ ಪಾತ್ರ. ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ತಮ್ಮ ಪತ್ರಿಕೆಗಳ ಉಳಿವಿಗಾಗಿ ಪ್ರಾದೇಶಿಕ ವರದಿಗಳಿಗೇ ದುಂಬಾಲು ಬಿದ್ದಿರುವ ರಾಜ್ಯದ ಪ್ರಮುಖ ಪತ್ರಿಕೆಗಳು ಸಮ್ಮೇಳನದಲ್ಲಿ ನಡೆದ ಗೋಷ್ಠಿಗಳ ಬಗ್ಗೆ ಅಥವಾ ಕವಿಗೋಷ್ಠಿಯ ಬಗ್ಗೆ ಅಷ್ಟಾಗಿ ಕಾಳಜಿ ತೋರದಿರುವುದು ಶೋಚನೀಯವೆಂದೇ ಹೇಳಬಹುದು. ಪ್ರಮುಖ ವಿಚಾರಗೋಷ್ಠಿಗಳು ವರದಿಯಾಗಲೇ ಇಲ್ಲ. ಅಧ್ಯಕ್ಷರಾಗಿದ್ದ ಎಲ್.ಎಸ್.ಎಸ್. ರವರ ಭಾಷಣವನ್ನು ಯಾವುದೇ ಪತ್ರಿಕೆಯೂ ಪ್ರಕಟಿಸಲಿಲ್ಲ. ಕನಿಷ್ಠ ಪಕ್ಷ ಸಮ್ಮೇಳನಾಧ್ಯಕ್ಷರ ಭಾಷಣದ ವಿಮರ್ಶೆಯೂ ಎಲ್ಲಿಯೂ ಪ್ರಕಟವಾಗಲಿಲ್ಲ. ಕರ್ನಾಟಕದ ಭೂಪಟವನ್ನು ಪರದೆಯ ಮೇಲೆ ವಿಜೃಂಭಿಸುವುದರಿಂದಲೇ ತಮ್ಮ ನಾಡಪ್ರೇಮ ತೋರುವ ದೃಶ್ಯ ಮಾಧ್ಯಮಗಳು, ಟಿ.ವಿ. ಚಾನೆಲ್‌ಗಳು, ವಾರ್ತೆಗಳ ಸಮಯದಲ್ಲಿ ಬಿಟ್ಟರೆ ಯಾವುದೇ ಕಾರ್ಯಕ್ರಮವನ್ನೂ ಬಿತ್ತರಿಸದಿದ್ದುದು ಶೋಚನೀಯವಲ್ಲವೇ ? ಸಿನಿಮಾ ನಟಿಯರ ವಿವಾಹ ಸಂದರ್ಭಗಳಿಗೆ ನೇರ ಪ್ರಸಾರ ನೀಡುವ ಚಾನೆಲ್‌ಗಳು ಸಾಹಿತ್ಯ ಸಮ್ಮೇಳನ ಎಂದಾಕ್ಷಣ ದೂರವಾಗಿದ್ದೇಕೆ ? ಪ್ರಾಯೋಜಕರಿಲ್ಲವೆಂದೆ ? ಕನ್ನಡದ ಉದ್ಧಾರಕ್ಕಾಗಿ ಟಿಪ್ಪು ಸುಲ್ತಾನನ ಖಡ್ಗ ಝಳಪಿಸುವ ಉದ್ಯಮಿಗಳು ಇರಲಿಲ್ಲವೆ ? ಅಥವಾ ಬೆಂಗಳೂರನ್ನು ಸಿಲಿಕಾನ್ ಸಿಟಿ ಮಾಡುವ ಮಾಹಿತಿ ತಂತ್ರಜ್ಞಾನ ಉದ್ಯಮಿಗಳು ಇರಲಿಲ್ಲವೆ ? ಸಮ್ಮೇಳನದ ನಂತರದಲ್ಲೂ ಯಾವುದೇ ಪತ್ರಿಕೆಗಳು, ಟಿವಿ ಚಾನೆಲ್‌ಗಳು ಅಲ್ಲಿ ನಡೆದ ವಿಚಾರಗಳ ಬಗ್ಗೆ ಆರೋಗ್ಯಕರವಾದ ಚರ್ಚೆಯಲ್ಲಿ ಜನತೆಯನ್ನು ತೊಡಗಿಸಬಹುದಿತ್ತಲ್ಲವೇ ? ಈ ನಿಟ್ಟಿನಲ್ಲಿ ಜಿಲ್ಲಾಮಟ್ಟದ ಪತ್ರಿಕೆಗಳೇ ಉತ್ತಮ ರೀತಿಯಲ್ಲಿ ಸ್ಪಂದಿಸಿರುವುದು ಸ್ತುತ್ಯರ್ಹ.

ಇನ್ನು ಕರ್ನಾಟಕ ರಕ್ಷಣಾ ವೇದಿಕೆಯ (ಕರವೇ) ಗುಂಪುಗಾರಿಕೆ ಸಮ್ಮೇಳನದಲ್ಲಿ ಮೇಳೈಸಿದ್ದು ಸಾಹಿತ್ಯ ಸಮ್ಮೇಳನಕ್ಕೆ ಶೋಭಿಸುವಂತಹುದಲ್ಲ. ಕರವೇ ಸಂಘಟನೆಗಳಲ್ಲಿ ನಾಡ ಜನತೆ ಕಾಣುತ್ತಿರುವ ವೈಯಕ್ತಿಕ ಪ್ರತಿಷ್ಠೆ, ಹೋರಾಟದ ಉನ್ಮಾದಗಳಿಗೆ ಸಾಹಿತ್ಯ ಸಮ್ಮೇಳನ ವೇದಿಕೆಯಾಗುವ ಅವಶ್ಯಕತೆ ಇರಲಿಲ್ಲ. ಕರವೇ ನಾಯಕರಾಗಲೀ, ಸದಸ್ಯರಾಗಲೀ, ಸಾಹಿತ್ಯ ಲೋಕದಲ್ಲಿ ತಮ್ಮನ್ನು ಎಷ್ಟರಮಟ್ಟಿಗೆ ತೊಡಗಿಸಿಕೊಂಡಿದ್ದಾರೆ ಎಂಬ ಮೂಲಭೂತ ಪ್ರಶ್ನೆ ಇಲ್ಲಿ ಉದ್ಭವಿಸುತ್ತಿದೆ. ಹೋರಾಟಗಳನ್ನು ರೂಪಿಸುವ ಸಂಘಟನಾ ಸಾಮರ್ಥ್ಯ ಮತ್ತು

> ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಕೈಗೊಳ್ಳುವ ನಿರ್ಣಯಗಳು ಅನೇಕ ವೇಳೆ ಹಾಳೆಗಳ ಮೇಲೆಯೇ ಉಳಿದುಬಿಡುತ್ತವೆ. ಒಂದೆಡೆ ರಾಜಕೀಯ ಇಚ್ಛಾಶಕ್ತಿಯ ಕೊರತೆಯಾದರೆ, ಇನ್ನೊಂದೆಡೆ, ಈ ನಿರ್ಣಯಗಳನ್ನಾಧರಿಸಿದ ಯಾವುದೇ ಜನಪರ - ಕನ್ನಡಪರ ಕೆಲಸಗಳನ್ನು ಸಾಹಿತ್ಯ ಪರಿಷತ್ತಾಗಲೀ, ಕನ್ನಡ ಸಂಘಟನೆಗಳಾಗಲೀ ಕೈಗೊಳ್ಳುವುದಿಲ್ಲ. ಪ್ರಸ್ತುತ ಸಮ್ಮೇಳನದಲ್ಲಿ ಕೈಗೊಂಡ ಅನೇಕ ನಿರ್ಣಯಗಳು ಹಿಂದಿನ ಸಮ್ಮೇಳನಗಳ ಪುನರಾವರ್ತನೆಯಂತಿವೆ. ಹನ್ನೆರಡು ನಿರ್ಣಯಗಳಲ್ಲಿ ನಾಲ್ಕು ಹಣಕಾಸಿಗೆ ಸಂಬಂಧಿಸಿದ್ದಾದರೆ ಇನ್ನುಳಿದಂತೆ ಗಂಭೀರವಾದ ಚಿಂತನೆಯನ್ನೊಳಗೊಂಡ ನಿರ್ಣಯಗಳು ಕಂಡುಬರುವುದಿಲ್ಲ. ಕೊಡಗು ಮತ್ತು ಉತ್ತರ ಕರ್ನಾಟಕದಲ್ಲಿ ಕೇಳಿಬರುತ್ತಿರುವ ಪ್ರತ್ಯೇಕತೆ ಮತ್ತು ಸ್ವಾಯತ್ತತೆಯ ಬಗ್ಗೆ ಯಾವುದೇ ಸ್ಪಷ್ಟ ನಿಲುವು ತಾಳದಿರುವುದು ಅಚ್ಚರಿ ಮೂಡಿಸುತ್ತದೆ. ಶಿಕ್ಷಣದಲ್ಲಿ ಕನ್ನಡವನ್ನು ಕಡ್ಡಾಯ ಮಾಡುವ ನಿಟ್ಟಿನಲ್ಲಿ ಸರ್ಕಾರದ ವೈಫಲ್ಯದ ಹಿನ್ನೆಲೆಯಲ್ಲಿ, ಸರ್ಕಾರದಿಂದ ಶೀಘ್ರ ಭಾಷಾನೀತಿಯ ಅನುಷ್ಠಾನಕ್ಕೆ ಆಗ್ರಹಿಸುವ ನಿರ್ಣಯ ಅತ್ಯಗತ್ಯವಾಗಿತ್ತು. ಸರ್ಕಾರಿ ಇಲಾಖೆಗಳಲ್ಲಿ, ನಾಮಫಲಕಗಳಲ್ಲಿ ಕನ್ನಡ ಕಡ್ಡಾಯವಾದರೆ ಸಾಕೆಂಬ ಮನೋಭಾವ ಇಲ್ಲಿ ಕಂಡುಬರುತ್ತದೆ. ಭಾಷಾ ಅಭಿವೃದ್ಧಿಗೆ ಅವಶ್ಯಕವಾದ ಅಧೋರಚನೆಗಳನ್ನು ಸೂಕ್ತ ರೀತಿಯಲ್ಲಿ ಒದಗಿಸಲು ರಾಜ್ಯದಲ್ಲಿ ಯಾವುದೇ ಸರ್ಕಾರವೂ ಕ್ರಮ ಕೈಗೊಳ್ಳದಿರುವುದು ಸ್ಪಷ್ಟವಾಗಿದ್ದರೂ, ಸಮ್ಮೇಳನದಲ್ಲಿ ಈ ಕುರಿತ ಯಾವುದೇ ದನಿ ಕೇಳಿಬಂದಿಲ್ಲ.

ಸಾಹಿತ್ಯಿಕ ನೆಲೆಗಟ್ಟಿನಲ್ಲಿ ರಾಜ್ಯದ ಸಾಂಸ್ಕೃತಿಕ-ಸಾಮಾಜಿಕ ಸ್ಥಿತ್ಯಂತರಗಳ ವಿಮರ್ಶೆ, ಒಂದೇ ನೆಲೆಗಟ್ಟಿನಲ್ಲಿ ನಿಲ್ಲುವುದಿಲ್ಲ ಎಂಬ ಅರಿವನ್ನು ಸಾಹಿತ್ಯ ಪರಿಷತ್ತು ಪರಿಗಣಿಸಿದ್ದಲ್ಲಿ ಈ ಆಭಾಸಗಳು ನಡೆಯುತ್ತಿರಲಿಲ್ಲ. ಕರವೇ ಆಗಲೀ ಇತರ ಕನ್ನಡಪರ ಸಂಘಟನೆಗಳೇ ಆಗಲೀ ಕನ್ನಡ ಸಾಹಿತ್ಯ ಲೋಕದಲ್ಲಿ ಯಾವುದೇ ಕೊಡುಗೆ ಸಲ್ಲಿಸದೆಯೇ ಸಮ್ಮೇಳನವನ್ನು ಅಲಂಕರಿಸಿದ್ದು ಸುವರ್ಣ ಕರ್ನಾಟಕದ ವಿಪರ್ಯಾಸವೆಂದೇ ಹೇಳಬಹುದು. ಗೋಕಾಕ್ ಚಳುವಳಿಯ ನಂತರದಲ್ಲಿ ಕರ್ನಾಟಕದಲ್ಲಿ ಶೀಘ್ರಗತಿಯಲ್ಲಿ ಬೆಳೆದ ಹೋರಾಟಗಾರರ ವೇದಿಕೆಗಳು, ಕಳೆದ ಮೂರು ದಶಕಗಳಲ್ಲಿ ಹಲವಾರು ಸಂದರ್ಭಗಳಲ್ಲಿ ವೀರೋಚಿತ ಹೋರಾಟಗಳನ್ನು ಮಾಡಿದ್ದರೂ, ಒಂದು ವಿಶಾಲ ದೃಷ್ಟಿಕೋನವುಳ್ಳ ವೇದಿಕೆಯನ್ನು ನಿರ್ಮಿಸುವಲ್ಲಿ ವಿಫಲಗೊಂಡಿವೆ ಎಂದು ಹೇಳಬಹುದು. ಬಹುತೇಕ ಸಂಘಟನೆಗಳು ತಮ್ಮ ನಾಯಕರ ವೈಫಲ್ಯ ಮತ್ತು ವೈಯಕ್ತಿಕ ಪ್ರತಿಷ್ಠೆಗಳಿಗೆ ಬಲಿಯಾಗಿದ್ದರೆ, ಕೆಲವು ಸಂಘಟನೆಗಳು ಲಂಪಟತನವನ್ನು ತಮ್ಮ ಪ್ರಮುಖ ಕಾರ್ಯಸೂಚಿಯನ್ನಾಗಿ ಮಾಡಿಕೊಂಡಿರುವುದು ಸ್ಪಷ್ಟವಾಗಿದೆ. ಮೋರೆಗೆ ಮಸಿ ಬಳಿಯುವುದೇ ಕನ್ನಡ ಪ್ರೇಮದ ಕುರುಹಾಗುವ ಹಾಗಿದ್ದಲ್ಲಿ, ಕನ್ನಡಪರ ಸಂಘಟನೆಗಳ ಹೋರಾಟದ ಸ್ವರೂಪವೇ ಪ್ರಶ್ನಾರ್ಹವಾಗುತ್ತದೆ. ಕನ್ನಡ ಭಾಷೆ ಮತ್ತು ಕನ್ನಡಿಗರ ಸಾಂಸ್ಕೃತಿಕ ಅಭಿವೃದ್ಧಿಗಿಂತಲೂ ತಮ್ಮ ಸಂಘಟನೆಗಳ ಪ್ರತಿಷ್ಠೆ ಮತ್ತು ಪ್ರಚಾರವನ್ನೆ ಬಂಡವಾಳವನ್ನಾಗಿರಿಸಿಕೊಂಡಿರುವ ಕನ್ನಡಪರ ಸಂಘಟನೆಗಳು, ಯಾವುದೇ ರಚನಾತ್ಮಕ ಕಾರ್ಯದಲ್ಲಿ ತೊಡಗದಿರುವುದು ಪ್ರಸ್ತುತ ಸಂದರ್ಭದಲ್ಲಿ ವ್ಯಕ್ತವಾಗುತ್ತಿದೆ. ಇಡೀ ಸಮಾಜವನ್ನು ಮತ್ತು ವಿಶೇಷವಾಗಿ ಯುವಜನತೆಯನ್ನು ಕಾಡುತ್ತಿರುವ ಲಂಪಟ ಪ್ರವೃತ್ತಿಯೇ ಇಲ್ಲಿಯೂ ಸಹ ವ್ಯಕ್ತವಾಗುತ್ತಿದ್ದು, ಕಳೆದ ಎರಡು ಸಾಹಿತ್ಯ ಸಮ್ಮೇಳನಗಳಲ್ಲಿ ಈ ಬೆಳವಣಿಗೆಗೆ ಸಾಂಕೇತಿಕವಾಗಿ ಮನ್ನಣೆ ನೀಡಲಾಗಿದೆ ಎಂದು ಹೇಳಬಹುದು.

ಸಮ್ಮೇಳನದಲ್ಲಿ ಸಂಘಪರಿವಾರದ ಛಾಯೆಯನ್ನು ದೂರಮಾಡುವ ನಿಟ್ಟಿನಲ್ಲಿ ಕಸಾಪ ಅಧ್ಯಕ್ಷ ಚಂಪಾರವರು ಯಶಸ್ವಿಯಾಗಿದ್ದರೂ, ಸಮ್ಮೇಳನಕ್ಕೆ ಪುರೋಗಾಮಿ, ಪ್ರಗತಿಪರ ದೃಷ್ಟಿಕೋನ ನೀಡುವುದರಲ್ಲಿ ವಿಫಲರಾಗಿರುವುದು ಸ್ಪಷ್ಟವಾಗಿದೆ. ಅಧ್ಯಕ್ಷರ ಆಯ್ಕೆಯಲ್ಲಿನ ಗೊಂದಲ, ಹಿಂದಿನ ಸಮ್ಮೇಳನದ ಅಧ್ಯಕ್ಷರ ಮತ್ತು ಅನೇಕ ಹಿರಿಯ ಸಾಹಿತಿಗಳ ಗೈರು ಹಾಜರಿ, ಈ ನಿಟ್ಟಿನಲ್ಲಿ ಬೆಟ್ಟುಮಾಡಿ ತೋರಿಸುತ್ತವೆ. ಸಾಹಿತ್ಯಲೋಕದ ದಿಗ್ಗಜರ ನಡುವಿನ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಭಾಷಾ ಅಭಿವೃದ್ಧಿಗೆ ಮಾರಕವಾಗುವುದಾದರೆ, ಅದು ದುರದೃಷ್ಟಕರ ಬೆಳವಣಿಗೆಯಾಗುತ್ತದೆ. ಸಮ್ಮೇಳನಾಧ್ಯಕ್ಷರ ಭಾಷಣದ ಪೂರ್ಣ ಪ್ರತಿ ದೊರೆತಿಲ್ಲವಾದರೂ, ಪತ್ರಿಕಾ ವಿಮರ್ಶೆಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಅಧ್ಯಕ್ಷರ ಭಾಷಣದಲ್ಲಿ ಭಾವಾವೇಶವೇ ಹೆಚ್ಚಾಗಿದ್ದಂತೆ ಭಾಸವಾಗುತ್ತದೆ. ಕರ್ನಾಟಕದ ದುಡಿಯುವ ಜನತೆಯನ್ನು ಮತ್ತು ಕನ್ನಡ ಭಾಷಿಕರನ್ನು ಕಾಡುತ್ತಿರುವ ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಕಿಂಚಿತ್ತೂ ಸ್ಪಂದಿಸದ ಅಧ್ಯಕ್ಷರ ಭಾಷಣ

ಇಡೀ ಸಮ್ಮೇಳನವನ್ನು ಪ್ರತಿನಿಧಿಸಿತ್ತೆಂದು ಹೇಳಬಹುದು.

ಕರ್ನಾಟಕ ಮತ್ತು ಕನ್ನಡಿಗರು ಇಂದು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಜಾಗತೀಕರಣದ ಪ್ರಭಾವ, ಸಾಂಸ್ಕೃತಿಕ ಅಧಃಪತನ, ಸಾಮಾಜಿಕ-ಧಾರ್ಮಿಕ ಕ್ಷೋಭೆ, ಜಾತಿವಾದದ ಕರಾಳ ಛಾಯೆ, ಕೋಮುವಾದ ಮತ್ತು ಮೂಲಭೂತವಾದದ ಕರಿನೆರಳು, ನಿರುದ್ಯೋಗದ ಸಮಸ್ಯೆ, ಮಹಿಳೆಯರು, ದಲಿತರು ಮತ್ತಿತ್ತರ ಅವಕಾಶ ವಂಚಿತ ಸಮುದಾಯಗಳ ಸಂಕಷ್ಟಗಳು, ಹೀಗೆ ಹತ್ತು ಹಲವಾರು ಕಠಿಣ ಸಮಸ್ಯೆಗಳು ಕನ್ನಡಿಗರನ್ನು ಕಾಡುತ್ತಿವೆ. ಈ ಗೊಂದಲಮಯ ಸನ್ನಿವೇಶದಲ್ಲಿ ಕರ್ನಾಟಕದ ಜನತೆ ಒಂದೆಡೆ ಸಾಮಾಜಿಕ-ಆರ್ಥಿಕ ಅಭದ್ರತೆಯನ್ನು ಪ್ರಕಟಪಡಿಸುತ್ತಲೇ ಇನ್ನೊಂದೆಡೆ ತಮ್ಮ ಭಾಷಾ ಅಸ್ಮಿತೆಗಾಗಿ, ಸಾಮಾಜಿಕ ಘನತೆಗಾಗಿ ಹೋರಾಡುತ್ತಿದ್ದಾರೆ. ಈ ಬಿಕ್ಕಟ್ಟನ್ನು ಭಾಷೆಗಷ್ಟೇ ಸೀಮಿತವಾದ ಭಾವನಾವಾದದಿಂದ ವಿಶ್ಲೇಷಿಸಿದಲ್ಲಿ ಭಾವುಕತೆ ವಾಸ್ತವತೆಯನ್ನು ಮರೆಮಾಡುತ್ತದೆ. ಆಗಲೇ ಎಲ್ಲ ಸಮಸ್ಯೆಗಳಿಗೂ ಹೊರ ರಾಜ್ಯದವರನ್ನು ಅಥವಾ ಹೊರನಾಡಿನ ಸಂಸ್ಕೃತಿಯನ್ನು ದೂಷಿಸುವ ಪರಿಪಾಠ ಬೆಳೆಯುತ್ತದೆ. ಈ ನಿಟ್ಟಿನಲ್ಲಿ ಒಂದು ವಿಶಾಲ ದೃಷ್ಟಿಕೋನದ, ದಾರ್ಶನಿಕತೆಯ ಚಳುವಳಿ ಕನ್ನಡಿಗರಿಗೆ ಅವಶ್ಯವಾಗಿದೆ ಎನಿಸುತ್ತದೆ. ಕನ್ನಡ ನಾಡು, ನುಡಿ, ಸಂಸ್ಕೃತಿ, ಭಾಷೆ ಮತ್ತು ಆರ್ಥಿಕತೆಯ ಬೆಳವಣಿಗೆಯಲ್ಲಿ ಎಲ್ಲ ವರ್ಗಗಳೂ ತಮ್ಮದೇ ಆದ ಕಾಣಿಕೆ ಸಲ್ಲಿಸಿವೆ. ಹೊರರಾಜ್ಯದಿಂದ ರಾಜ್ಯಕ್ಕೆ ವಲಸೆ ಬರುವವರಲ್ಲಿ ಬಹುತೇಕ ದುಡಿಯುವ ವರ್ಗಗಳಾಗಿರುತ್ತಾರೆ. ತಮ್ಮ ದೈನಂದಿನ ಬದುಕಿಗೆ ಅಂಡಲೆಯುವ ಸಮುದಾಯದಿಂದ ಭಾಷೆಗಾಗಲೀ, ಸಾಮಾಜಿಕ ಸಾಮರಸ್ಯಕ್ಕಾಗಲೀ ಧಕ್ಕೆ ಉಂಟಾಗುವುದಿಲ್ಲ ಎಂಬ ವಾಸ್ತವವನ್ನು ಕನ್ನಡಪರ ಸಂಘಟನೆಗಳು ಗ್ರಹಿಸಬೇಕಾಗಿದೆ. ದುಡಿಯುವ ಜನತೆಯ, ಶ್ರಮಜೀವಿ ವರ್ಗದ ಮತ್ತು ಅವಕಾಶವಂಚಿತ ಸಮುದಾಯಗಳ ಸಂಕಷ್ಟಗಳಿಗೆ ಕಾರಣೀಭೂತವಾದ ನೈಜ ವೈರಿಯನ್ನು ಗುರುತಿಸಲು ವಿಫಲವಾದಾಗ, ಯಾವುದೇ ಸಮಾಜವು ಭಾವುಕತೆಗೆ ಶರಣಾಗುತ್ತದೆ. ಈ ಪ್ರವೃತ್ತಿಯನ್ನು ಹಲವಾರು ಭಾಷಾ ಚಳುವಳಿಗಳಲ್ಲಿ, ಪ್ರಾದೇಶಿಕ ಅಸ್ತಿತ್ವದ ಹೋರಾಟಗಳಲ್ಲಿ ಕಾಣಬಹುದು. ಈ ರೀತಿಯ ಹೋರಾಟಗಳು ಆಳುವ ವರ್ಗಗಳಿಗೆ ಸದಾ ಆಪ್ಯಾಯಮಾನವಾಗುತ್ತವೆ. ಸಾಮಾನ್ಯ ಜನತೆಗೆ ಉರುಳಾಗುತ್ತದೆ. ಕರ್ನಾಟಕದಲ್ಲಿ ಕನ್ನಡ ಪರ ಚಳುವಳಿ ಇದೇ ಹಾದಿ ಹಿಡಿಯುತ್ತಿರುವುದು ವಿಷಾದನೀಯ.

ಕನ್ನಡಿಗರಲ್ಲೇ ಹಿಂದೂ-ಮುಸ್ಲಿಂ-ದಲಿತ-ಒಕ್ಕಲಿಗ ಎಂಬ ವಿಘಟನಾ ಪ್ರಕ್ರಿಯೆ ಈಗಾಗಲೇ ಪರಾಕಾಷ್ಠೆ ತಲುಪಿದೆ. ಪ್ರಸ್ತುತ ರಾಜಕೀಯ ಬೆಳವಣಿಗೆಗಳ ಹಿನ್ನೆಲೆಯಲ್ಲಿ, ಸಾಮುದಾಯಿಕ ಪ್ರಶ್ನೆಗಳು ಸ್ಪಷ್ಟವಾದ ಜಾತಿ ಸ್ವರೂಪವನ್ನು ಪಡೆದುಕೊಳ್ಳುತ್ತಿರುವುದು ಆತಂಕಕಾರಿ ಅಂಶವಾಗಿದೆ. ಇದೇ ನಿಟ್ಟಿನಲ್ಲಿ ಜನತೆಯ ಸಾಮಾಜಿಕ-ಆರ್ಥಿಕ ಸಮಸ್ಯೆಗಳೂ ಭಾಷೆ ಮತ್ತು ಪ್ರಾದೇಶಿಕ ನೆಲೆಗಟ್ಟಿನಲ್ಲಿ ಪ್ರಕಟಗೊಳ್ಳುತ್ತಿದೆ. ಈ ಸಂದರ್ಭದಲ್ಲಿ ಈಗಾಗಲೇ ''ನಾವು-ಅವರು''ಗಳ ಪರಿಭಾಷೆಯ ಸುಳಿಗೆ ಸಿಲುಕಿ ನಲುಗುತ್ತಿರುವ ಕನ್ನಡ ಜನತೆಗೆ, ಒಂದು ಮಾರ್ಗಸೂಚಿಯಾಗಿ, ದಾರಿದೀಪವಾಗಿ, ಮಾರ್ಗದರ್ಶಕವಾಗಿ ಸಾಹಿತ್ಯ ಪರಿಷತ್ತು, ಸಾಹಿತ್ಯ ಸಮ್ಮೇಳನ ನಡೆಯಬೇಕಾಗಿದೆ. ವಿಭಿನ್ನತೆಯ ನಡುವೆಯೇ ಐಕ್ಯತೆಯನ್ನು ಸಾಧಿಸುವ ಬಹುಮುಖೀ ಸಂಸ್ಕೃತಿಯ ಅಂಗವಾಗಿಯೇ ಕನ್ನಡ ಜನಸಮುದಾಯ ಮುನ್ನಡೆಯುವ ತುರ್ತು ಅಗತ್ಯತೆ ಈಗ ಹೆಚ್ಚಾಗಿ ಕಾಣುತ್ತಿದೆ. ಸಾಹಿತ್ಯದ ಹೆಸರಿನಲ್ಲಿ ಒಂದೆಡೆ ಸಾಮಾಜಿಕ ಸಾಮರಸ್ಯವನ್ನು ಹಾಳುಗೆಡಹುವ ಹುನ್ನಾರ ಬಹಳ ವ್ಯವಸ್ಥಿತವಾಗಿ ನಡೆಯುತ್ತಿದ್ದರೆ, ಇನ್ನೊಂದೆಡೆ ಕನ್ನಡ ಸಾರಸ್ವತಲೋಕ ತನ್ನ ನೈತಿಕ-ಸಾಮಾಜಿಕ ಹೊಣೆಗಾರಿಕೆಯಿಂದ ನುಣುಚಿಕೊಳ್ಳುತ್ತಿರುವುದೂ ಸ್ಪಷ್ಟವಾಗುತ್ತಿದೆ. ಸಾಹಿತಿಗಳು ತಮ್ಮ ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ರೂಪಿಸುವ ಸಾಹಿತ್ಯಕ ಮೌಲ್ಯಗಳಿಗಿಂತಲೂ, ಸಾಹಿತ್ಯವು ಪ್ರತಿನಿಧಿಸುವ ಸಾಮಾಜಿಕ ಮೌಲ್ಯಗಳು ಸಾಮಾನ್ಯ ಜನತೆಯ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತವೆ. ಜಾಗತೀಕರಣದ ನೆಲೆಗಟ್ಟಿನಲ್ಲಿ ಅಭದ್ರತೆಯಲ್ಲಿ ನಲುಗುತ್ತಿರುವ ಕನ್ನಡ ನಾಡಿನ ಶ್ರಮಜೀವಿ ವರ್ಗಗಳಿಗೆ ಈ ಸಾಮಾಜಿಕ ಮೌಲ್ಯಗಳೇ ಪ್ರಧಾನವಾಗುತ್ತವೆ. ಈ ನಿಟ್ಟಿನಲ್ಲಿ ಒಂದು ಸಂವೇದನಾಶೀಲ ಸಂವಾದ ನಡೆಸುವಲ್ಲಿ ಉಡುಪಿ ಸಾಹಿತ್ಯ ಸಮ್ಮೇಳನ ವಿಫಲವಾಗಿದೆ. ಮುಂಬರುವ ಸಾಹಿತ್ಯ ಸಮ್ಮೇಳನಗಳಾದರೂ ಪೂರಕವೋ, ಪರ್ಯಾಯವೋ, ಅಧಿಕೃತವೋ, ಈ ಸಂವಾದಕ್ಕೆ ಒಂದು ವೇದಿಕೆಯಾದಲ್ಲಿ ಒಳಿತು.


ನಾ. ದಿವಾಕರ
ಸಂಖ್ಯೆ ೫೦೪, 'ಚಿರಂತನ', ೧೩ನೇ ಅಡ್ಡರಸ್ತೆ, ೨ನೇ ಹಂತ, ಶ್ರೀರಾಂಪುರ, ಮೈಸೂರು - ೫೭೦೦೨೩

೧೯೩೨ ಸೆಪ್ಟೆಂಬರ್ ೨೪, ಭಾರತ ದೇಶದ ಅಸ್ಪೃಶ್ಯರ, ದಲಿತರ ಬದುಕಿನ ಕರಾಳ ದಿನ. ಈ ದೇಶದ 'ಗ್ರಾಮ ಸ್ವರಾಜ್ಯ' ಮತ್ತು ರಾಜಕೀಯ ಸ್ವಾತಂತ್ರ್ಯದ ಪ್ರೇಮಿ ಎಂ. ಕೆ. ಗಾಂಧಿ ಮತ್ತು ಮಹಾನ್ ಮಾನವತಾವಾದಿ, ಉರಿವ ಜ್ಞಾನದ ಪಂಜಿನಂತಿದ್ದ ಡಾ|| ಬಿ. ಆರ್. ಅಂಬೇಡ್ಕರ್ ಭೇಟಿಯಾದ ದಿನ.

ಶತಶತಮಾನಗಳಿಂದ ನೋವುಂಡು ದಮನಿತರಾದ ದಲಿತರ ಬದುಕಿಗೆ ಬಿಡುಗಡೆಯನ್ನು ನೀಡಲು ಸದಾ ಓದು, ಹೋರಾಟ ಮತ್ತು ಸಂವಿಧಾನಿಕ ಸಾಧ್ಯತೆಗಳಿಗೆ ಪ್ರಯತ್ನಿಸುತ್ತಾ ಸಾಗಿದ ಅಂಬೇಡ್ಕರ್‌ರವರ ಅನೇಕ ವರ್ಷದ ಪ್ರಾಂಜಲ ನೋಟವೊಂದಕ್ಕೆ, ಈ ದೇಶದ ಹಿಂದೂ ಸನಾತನ ಮನಸ್ಸುಗಳು ನೀಡಿದ ಮರೆಯ ಲಾರದ ಬರೆಯೇ ಪ್ರಸಿದ್ಧ 'ಪೂನಾ ಒಪ್ಪಂದ'. ಇಂದು ಅತ್ಯಂತ ವೈಜ್ಞಾನಿಕ ಅರ್ಥದಲ್ಲಿ ಬಳಕೆಯಾಗಿರುವ ಮೀಸಲಾತಿಯ ಹಿಂದಿನ ಅಂಬೇಡ್ಕರ್‌ರ ಹೋರಾಟದ ಅರ್ಥವಂತಿಕೆಯು ಮಹತ್ತರವಾದುದು. ಆದರೆ ಅವರು ತಮ್ಮ ರಾಜಕೀಯ ಹೋರಾಟದಲ್ಲಿ ಮೀಸಲಾತಿಯನ್ನು ಒಪ್ಪಿಕೊಳ್ಳುವಂತಾಗಿದ್ದು ಅತ್ಯಂತ ದುಃಖದ ಸಂಗತಿ ಎಂದೇ ಬಣ್ಣಿಸಿದ್ದಾರೆ. ೧೯೨೮ರಲ್ಲಿ ಸರ್ ಜಾನ್ ಸೈಮನ್‌ನ ಅಧ್ಯಕ್ಷತೆಯಲ್ಲಿ ಸಂವಿಧಾನದ ರಚನೆಯ ಸಂದರ್ಭದಲ್ಲಿ ಅಗತ್ಯವಾದ ಬದಲಾವಣೆಯನ್ನು ತರಲೋಸುಗ ಆಯೋಗವನ್ನು ನೇಮಿಸಲಾಗಿತ್ತು. ನಂತರ ೧೯೩೦ರ ನವೆಂಬರ್‌ನಲ್ಲಿ ಲಂಡನ್‌ನಲ್ಲಿ ದುಂಡುಮೇಜಿನ ಪರಿಷತ್ತು, ಭಾರತೀಯರ ಹಕ್ಕುಗಳ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದುದು. ಅಸ್ಪೃಶ್ಯರನ್ನು ಪ್ರತಿನಿಧಿಸಲು ಪ್ರಥಮ ಬಾರಿಗೆ ಡಾ|| ಬಿ. ಆರ್. ಅಂಬೇಡ್ಕರ್‌ರನ್ನು ಆಹ್ವಾನಿಸಲಾಯಿತು. ೧೯೧೯ರ ರಾಜ್ಯಾಂಗವು ಭಾರತ ದಲ್ಲಿನ ಮುಸ್ಲಿಂ, ಸಿಖ್ ಮುಂತಾದ ಅಲ್ಪಸಂಖ್ಯಾತ ವರ್ಗಗಳನ್ನು ಗುರುತಿಸಿ ಅವರಿಗೆ ರಾಜಕೀಯ ರಕ್ಷಣೆ ನೀಡಿದ್ದಿತು. ಇದರಲ್ಲಿ ಅಸ್ಪೃಶ್ಯರಿಗೆ ಸ್ಥಾನವಿರಲಿಲ್ಲ ಮತ್ತು ಅವರಿಗೆ ಸಿಗಬೇಕಾದ ಶಾಸನಬದ್ಧ ರಕ್ಷಣೆಯನ್ನು ನೀಡಲಾಗಿರಲಿಲ್ಲ. ಇದಕ್ಕೆ ಮೊದಲು ರಚಿತವಾಗಿದ್ದ ಮಾಂಟೆಗೋ-ಚೆಲ್ಮ್ಸ್‌ಫರ್ಡ್ ವರದಿ ಅಸ್ಪೃಶ್ಯರಿಗೆ ಸೂಕ್ತ ರಕ್ಷಣೆ ಒದಗಿಸುವ ಕಾನೂನನ್ನು ಸಂವಿಧಾನದಲ್ಲಿ ಸೇರಿಸ ಬೇಕೆಂದು ಶಿಫಾರಸ್ಸು ಮಾಡಿದರೂ ಆ ಕಾರ್ಯವನ್ನು ಆ ಸಂದರ್ಭದಲ್ಲಿ ಕೈಬಿಡಲಾಗಿತ್ತು. ಹಿಂದೂಗಳೆಂದು ಕರೆಸಿಕೊಳ್ಳುತ್ತಿದ್ದ ಅಸ್ಪೃಶ್ಯರ ಮೇಲೆ ಹಿಂದೂಗಳಿಂದಲೇ ನಡೆಯುತ್ತಿದ್ದ ದಬ್ಬಾಳಿಕೆ ಮತ್ತು ಅತ್ಯಾಚಾರಗಳನ್ನು ನಿಲ್ಲಿಸಲು ಅಗತ್ಯವಾದ ಯಾವುದೇ ಕಾನೂನುಗಳನ್ನು ರಚಿಸಿಲ್ಲವೆಂದು ಅಂಬೇಡ್ಕರ್‌ಗೆ ಮನವರಿಕೆಯಾಗಿತ್ತು. ಈ ಹಿನ್ನೆಲೆಯಿಂದ ದುಂಡುಮೇಜಿನ ಪರಿಷತ್ತಿನಲ್ಲಿ ಸಿಕ್ಕ ಅವಕಾಶವನ್ನು ಬಳಸಿಕೊಳ್ಳುವ ಅಂಬೇಡ್ಕರ್ ದಲಿತರ ರಕ್ಷಣೆಗಾಗಿ ಅವರ ಪರವಾದ ಹಲವಾರು ರಚನಾತ್ಮಕ ವಿಚಾರಗಳನ್ನು ಕುರಿತು ಯೋಜನೆಗಳ ಕರಡನ್ನು ರಚಿಸಿದರು. ಅಲ್ಲದೆ, ಆ ಬಗ್ಗೆ ವಿವರಗಳನ್ನು ಮಂಡಿಸಿ ಮೊದಲ ಅಧಿವೇಶನದ ಹೊತ್ತಿಗೆ ಅಸ್ಪೃಶ್ಯರನ್ನು ಪ್ರತ್ಯೇಕ ವಾಗಿ ಒಪ್ಪಿಕೊಳ್ಳುವ ಬಗೆಗೆ ಸರ್ವಸಮ್ಮತ ಅಭಿಪ್ರಾಯ ರೂಪುಗೊಳ್ಳುವಂತೆ ಮಾಡಿದರು. ೨ನೇ ಅಧಿವೇಶನಕ್ಕೆ ಗಾಂಧಿಯವರ ಆಗಮನವಾಗುತ್ತದೆ. ಅಲ್ಲಿಂದ ಅಂಬೇಡ್ಕರ್‌ರವರ ನಿಲುವುಗಳಿಗೆ ವಿರೋಧಗಳು ಶುರುವಾಗುತ್ತವೆ. ಗಾಂಧೀಜಿಯವರು ಅಸ್ಪೃಶ್ಯರ ಬಗ್ಗೆ ಪ್ರತ್ಯೇಕ ಅಸ್ತಿತ್ವವನ್ನು ವಿರೋಧಿಸಿ ''ಕಾಂಗ್ರೆಸ್ ಪಕ್ಷ ಹಿಂದೂ, ಮುಸ್ಲಿಂ, ಸಿಖ್ ಕಗ್ಗಂಟನ್ನು ಬಿಡಿಸಲು ಸಮಾಧಾನಕರ ನಿಲುವು ತಳೆದಿದೆಯೆಂದು ಭಾವಿಸುತ್ತೇನೆ; ಅಸ್ಪೃಶ್ಯರ ವಿಷಯಕ್ಕೆ ಸಂಬಂಧಿಸಿದಂತೆ ಡಾ|| ಅಂಬೇಡ್ಕರ್ ಹೇಳುವುದನ್ನು ನನ್ನಿಂದ ಗ್ರಹಿಸಲು ಸಾಧ್ಯವಿಲ್ಲ. ದಲಿತರ ಹಿತಾಸಕ್ತಿಗಳನ್ನು ರಕ್ಷಿಸುವ ಜವಾಬ್ದಾರಿ ಹೊತ್ತ ಅಂಬೇಡ್ಕರ್ ಅವರೊಂದಿಗೆ ವಿಚಾರಗಳನ್ನು ಹಂಚಿಕೊಳ್ಳುವಲ್ಲಿ ಕಾಂಗ್ರೆಸ್‌ಗೆ ಹೆಮ್ಮೆ ಇದೆ. ಸಿಖ್/ಮುಸ್ಲಿಂರಿಗೆ ನೀಡಿದಂತೆ ದಲಿತರಿಗೆ ಯಾವುದೇ ವಿಶೇಷ ಪ್ರಾತಿನಿಧ್ಯ ನೀಡುವುದನ್ನು ನಾನು ಉಗ್ರವಾಗಿ ವಿರೋಧಿಸುತ್ತೇನೆ, ಅಲ್ಲದೆ ದಲಿತರಿಗೆ ಪ್ರತ್ಯೇಕ ರಾಜಕೀಯ ಅಸ್ತಿತ್ವ ನೀಡುವುದನ್ನು ಕೂಡ'' ಎಂದು ಮಾತನಾಡುತ್ತಾರೆ. ಈ ಚರ್ಚೆಯಲ್ಲಿ ಗಾಂಧಿ



ಮುಂದುವರೆದು ''ಅಸ್ಪೃಶ್ಯರ ಪರವಾಗಿ ಅಂಬೇಡ್ಕರ್ ಮಂಡಿಸಿದ ಬೇಡಿಕೆಯು ಅತ್ಯಂತ ಹೀನಾಯವಾಗಿದ್ದು, ಭಾರತಕ್ಕೆ ಸ್ವಾತಂತ್ರ್ಯ ಸಿಗದಿದ್ದರೂ ಚಿಂತೆಯಿಲ್ಲ, ಆದರೆ ದಲಿತರಿಗೆ ಪ್ರತ್ಯೇಕ ಚುನಾವಣೆ ವ್ಯವಸ್ಥೆ ಮತ್ತು ಮೀಸಲಾತಿಯನ್ನು ನಾವು ತೀವ್ರವಾಗಿ ವಿರೋಧಿಸುತ್ತೇವೆ; ಇದರಿಂದ ಹಿಂದೂ ಧರ್ಮವು ಛಿದ್ರವಾಗುತ್ತದೆ. ಅಂತಹ ಸ್ಥಿತಿಯನ್ನು ನಾನು ನೋಡಲಾರೆ'' ಎಂದು ಹಿಂದೂ ಧಾರ್ಮಿಕ ಪರ ನಿಲುವನ್ನು, ಅಸ್ಪೃಶ್ಯ ವಿರೋಧಿ ಸಾಧ್ಯತೆ ಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳುತ್ತಾರೆ. ಅಲ್ಲದೆ ದಲಿತರಿಗೆ ಸಿಗುವ ಪ್ರತ್ಯೇಕ ಚುನಾವಣಾ ವ್ಯವಸ್ಥೆಯನ್ನು ಒಪ್ಪದೇ ಯರವಾಡ ಜೈಲಿನಲ್ಲಿಯೇ ಉಪವಾಸ ಮಾಡುತ್ತಾರೆ.

**ಡಾ|| ಕುಂಸಿ ಉಮೇಶ್**

# 'ಅಲ್ಲೇ ಕುಂತವರೇ'
# ಕರಾಳ ೭೫ ವಸಂತ



**೨೦೦೪ರ ಚುನಾವಣೆ**

| ಕ್ರಮ ಸಂಖ್ಯೆ | ಜಾತಿ/ ಜನಾಂಗ | ಜನಸಂಖ್ಯೆ (ಶೇಕಡ) | ಹಾಲಿ ಶಾಸಕರು | ಇರಬೇಕಾದ ಶಾಸಕರು | ಹೆಚ್ಚುವರಿ ಶಾಸಕರು | ಕಡಿಮೆ ಶಾಸಕರು |
|---|---|---|---|---|---|---|
| ೧. | ಬ್ರಾಹ್ಮಣರು | ೩.೪೬ | ೭ | ೮ | – | ೦೧ |
| ೨. | ಲಿಂಗಾಯಿತರು | ೧೫.೩೪ | ೭೧ | ೩೪ | ೩೭ | – |
| ೩. | ಒಕ್ಕಲಿಗರು | ೧೦.೮೧ | ೪೭ | ೨೪ | ೨೩ | – |
| ೪. | ಮೇಲ್ಜಾತಿ ಜನರು | ೨.೦೯ | ೨೧ | ೦೫ | ೧೬ | – |
| ೫. | ಹಿಂ. ವರ್ಗ | ೩೧.೧೧ | ೩೫ | ೭೦ | – | ೩೫ |
| ೬. | ಅಲ್ಪಸಂಖ್ಯಾತರು | ೧೩.೭೫ | ೦೬ | ೩೧ | – | ೨೫ |
| ೭. | ಪ. ಜಾತಿ | ೧೬.೭೨ | ೩೩ | ೩೭ | – | ೦೪ |
| ೮. | ಪ. ಪಂ. | ೬.೭೨ | ೦೪ | ೧೫ | – | ೧೧ |

ಅದು ಒಂದು ಸಾವು ಬದುಕಿನ ಪ್ರಶ್ನೆಯಾದರೂ ಅಂಬೇಡ್ಕರ್ ತಮ್ಮ ಅಭಿಪ್ರಾಯದಲ್ಲಿ ಯಾವುದೇ ಬದಲಾವಣೆಯನ್ನು ಮಾಡಿಕೊಳ್ಳುವುದಿಲ್ಲ. ಗಾಂಧಿಯ ಉಪವಾಸ ಮುಂದುವರಿದಾಗ ಕಾಂಗ್ರೆಸ್‌ನ ಸನಾತನಿಗಳು ಅವರ ಮನವೊಲಿಸಿ ಉಪವಾಸ ಮುಕ್ತಗೊಳಿಸುತ್ತಿದ್ದರೆ ಇಂದಿನ ಇಂಡಿಯಾದ ಚರಿತ್ರೆಯೇ ಬದಲಾಗಿರುತ್ತಿತ್ತು. ಆದರೆ ಎಲ್ಲರೂ ಸೇರಿ ಅಂಬೇಡ್ಕರ್‌ರವರನ್ನೇ ಮನವೊಲಿಸುವುದರ ಮೂಲಕ ಪರ್ಯಾಯ ದಾರಿಗಳನ್ನು ಸೂಚಿಸಿ ಕಸ್ತೂರಿಬಾ ಅವರನ್ನು ಮುಂದುಮಾಡುತ್ತಾರೆ. ಹತಾಶರಾಗಿ ನಾಳಿನ ದಿನಗಳಲ್ಲಿ ಗಾಂಧೀಜಿಯ ಸಾವಿನಿಂದಾಗಿ ದಲಿತರಿಗಾಗುವ ಮಾರಣಾಂತಿಕ ಅನಾಹುತವನ್ನು ಯೋಚಿಸಿದ ಅಂಬೇಡ್ಕರ್ ಒತ್ತಡಕ್ಕೆ ಮಣಿದು ದುಃಖದಿಂದ ಈ ಒಪ್ಪಂದಕ್ಕೆ ಸಹಿ ಮಾಡುತ್ತಾರೆ.

ದೇಶದ ಬಹುದೊಡ್ಡ ದುಡಿವ ವರ್ಗಕ್ಕೆ ಸಮರ್ಪಕ ನಾಯಕರ್‍ಯಾರೂ ಬೆಳೆಯದಂತೆ ಮಾಡಿದ ಕೀರ್ತಿ ೧೯೩೨ ಸೆಪ್ಟೆಂಬರ್ ೨೪ರ ಈ ಪೂನಾ ಒಪ್ಪಂದಕ್ಕೆ ಸಲ್ಲುತ್ತದೆ. ಡಾ|| ಬಿ. ಆರ್. ಅಂಬೇಡ್ಕರ್‌ರವರು ಕಟ್ಟಿಕೊಂಡು ಬಂದ ಪ್ರತ್ಯೇಕ ಚುನಾವಣೆಯ ಮತ್ತು ಮತದಾನದ ಬಹುದೊಡ್ಡ ಕನಸನ್ನು ಕೊಂದ ಈ ಒಪ್ಪಂದವು ದಲಿತರ ಬಾಳಿನ ಕರಾಳ ಸತ್ಯವಾಗಿದೆ. ಈ ದುರಂತದ ತೀವ್ರತೆಯು ದಲಿತರನ್ನು, ದುಡಿವ ವರ್ಗದ ಶೋಷಿತರನ್ನು, ೬೦ ವರ್ಷದ ಸ್ವಾತಂತ್ರ್ಯದ ನಂತರವೂ ಅದೇ ದೀನ ಸ್ಥಿತಿಯಲ್ಲಿಡುವಂತೆ ಮಾಡಿದೆ. ಇದಕ್ಕೆ ಸಾಕ್ಷಿಯಾಗಿ ಇಡೀ ದೇಶದ ಚರಿತ್ರೆಯೆ ನಮ್ಮ ಮುಂದಿದೆ. ದಲಿತರು ರಾಜಕೀಯ ಶಕ್ತಿಯಾದರೆ ಅದಕ್ಕೆ ಸಮಾನಾಂತರವಾಗಿ ಶೈಕ್ಷಣಿಕ, ಆರ್ಥಿಕ ಹಾಗೂ ಸಾಮಾಜಿಕವಾಗಿ ಸಬಲರಾಗುವರೆಂಬುದನ್ನು ಮನಗಂಡು ಈ ದೇಶದ ಸೌಮ್ಯ, ಶಾಂತಿದೂತ, ನಾಯಕರು ತಮ್ಮ ಮನದಾಳದ ಹಿಂದೂ ಸನಾತನ ಮೂಲಭೂತವಾದಿ ಅಜೆಂಡಾಕ್ಕೆ ಅಂಬೇಡ್ಕರ್‌ರವರ ಮುಕ್ಕಾಗದ ಅವಿರತ ಹೋರಾಟದ ಮತ್ತು ಜ್ಞಾನದ ಐತಿಹಾಸಿಕ ಹಿರಿಮೆಯನ್ನು ಬಲಿ ನೀಡಿದ್ದೆ ಈ ಒಪ್ಪಂದ.

ಇದಕ್ಕೀಗ ೭೫ ವರ್ಷ, ಸ್ವಾತಂತ್ರ್ಯಕ್ಕೆ ೬೦. ಇಲ್ಲಿಯವರೆಗೆ ದೇಶಾದ್ಯಂತ ಅದೆಷ್ಟು ದಲಿತರು ಮುಖ್ಯಮಂತ್ರಿಯಾಗಿದ್ದಾರೆ, ಉನ್ನತ ಅಧಿಕಾರವನ್ನು ಹೊಂದಿದ್ದಾರೆ ಎಂಬುದನ್ನು ಯೋಚಿಸಿದರೆ ದಿಗಿಲಾಗುತ್ತದೆ. ದೇಶದಾದ್ಯಂತ ಹೈಕೋರ್ಟ್‌ಗಳಲ್ಲಿ ೪೨೧ ಜನ ನ್ಯಾಯಾಧೀಶರಲ್ಲಿ ಕೇವಲ ೨೦ ಜನ ಪರಿಶಿಷ್ಟಜಾತಿ ಮತ್ತು ಪಂಗಡದ ನ್ಯಾಯಾಧೀಶರಿದ್ದಾರೆ. ಭಾರತೀಯ ರಾಜಕಾರಣದಲ್ಲಿ ಶೇ. ೭.೫, ಶಿಕ್ಷಣದಲ್ಲಿ ಶೇ. ೫.೫, ಸರ್ಕಾರಿ ನೌಕರಿಯಲ್ಲಿ ಶೇ. ೧, ವ್ಯಾಸಂಗದಲ್ಲಿ ಶೇ. ೧, ಭೂ ಒಡೆತನದಲ್ಲಿ ಶೇ. ೧, ವರ್ಗ ೧ರ ಹುದ್ದೆಗಳಲ್ಲಿ ಕೇವಲ ಶೇ. ೨೦ ಇದೆಲ್ಲದರ ಹಿಂದಿರುವುದು ಈ ಒಪ್ಪಂದದ ಕರಾಳತೆಯೇ ಆಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಈ ಕೋಷ್ಟಕವನ್ನು ಗಮನಿಸಬಹುದು. (ಹಿಂದಿನ ಪುಟದಲ್ಲಿರುವ ಕೋಷ್ಟಕವನ್ನು ನೋಡಿ)

ಇದಲ್ಲದೆ ಕರ್ನಾಟಕದ ಮುಖ್ಯಮಂತ್ರಿಗಳ ಯಾದಿಯನ್ನು ಗಮನಿಸಿದರೂ ಇದೇ ಸತ್ಯವು ತಿಳಿಯುತ್ತದೆ. ೨೦ ಜನ ಮುಖ್ಯಮಂತ್ರಿಗಳಲ್ಲಿ ೭ ಬಾರಿ ಲಿಂಗಾಯಿತರು, ೬ ಬಾರಿ ಒಕ್ಕಲಿಗರು, ೩ ಬಾರಿ ಬ್ರಾಹ್ಮಣರು, ೩ ಬಾರಿ ಹಿಂ. ವರ್ಗದವರು, ೧ ಬಾರಿ ಕ್ಷತ್ರಿಯ. ಹಾಗಾದರೆ ನಾಡಿನಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗದ ರಾಜಕಾರಣಿಗಳು ಏನಾದರು ? ಮೀಸಲು ಕ್ಷೇತ್ರದಿಂದ ಆರಿಸಿ ಬಂದರೂ ಮೇಲ್ಜಾತಿಯ ಓಟಿನ ಮರ್ಜಿಗೆ ಒಳಗಾಗಿ ಹಲ್ಲು ಕಿತ್ತ ಹಾವಾಗಿ ದೈನೇಸಿ ಸ್ಥಿತಿಯನ್ನು ತಲುಪಿದ್ದಾರೆ. ಉತ್ತರ ಪ್ರದೇಶದ ಮಾಯಾವತಿಯವರ ರಾಜಕೀಯ ಹೆಜ್ಜೆ ಕೂಡ ಇದಕ್ಕಿಂತ ಭಿನ್ನವಾಗಿಲ್ಲ. ಅದಕ್ಕಾಗಿಯೇ ಅಂಬೇಡ್ಕರ್ ಅಂದು ಪೂನ ಒಪ್ಪಂದಕ್ಕೆ ಸಹಿ ಹಾಕುವಾಗ ಹೇಳಿದ್ದು ''ನಾನು ಪ್ರತ್ಯೇಕ ಮತಗಟ್ಟೆಗಳ ಮೂಲಕ ೭೮ ಹುಲಿಗಳನ್ನು ತರಲು ಯೋಚಿಸಿದ್ದೆ. ಆದರೆ ಈ ಒಪ್ಪಂದದಿಂದ ೧೪೮ ಕುರಿಗಳು ಲಭ್ಯವಾಗಿವೆ. ಈ ಮೂಲಕ ಕಾಂಗ್ರೆಸ್ ಹಣ್ಣಿನ ರಸವನ್ನು ಹೀರಿ ಅಸ್ಪೃಶ್ಯರ ಮೇಲೆ ರಸವಿಲ್ಲದ ಸಿಪ್ಪೆಯನ್ನು ಎಸೆದಿದೆ'' ಎಂದು.

ಅಂದಿನಿಂದಲೂ ದಲಿತರ ಮೇಲಿನ ದೌರ್ಜನ್ಯಗಳು ನಡೆಯುತ್ತಲೇ ಇವೆ. ರಾಜಕಾರಣಿಗಳು ಬೇರೆಬೇರೆ ಸ್ವರೂಪಗಳಲ್ಲಿ ಅವುಗಳಿಗೆ ಪ್ರತಿಕ್ರಿಯಿಸಿದರೂ ಇದು ನಮ್ಮ ಸಮಾಜದ ಸಂದರ್ಭದಲ್ಲಿ ಕೇವಲ ಕಾನೂನು ಸುವ್ಯವಸ್ಥೆಯ ಸಮಸ್ಯೆಯಲ್ಲ. ಇದಕ್ಕೆ ಬಹುದೊಡ್ಡ ಇತಿಹಾಸವೇ ಇದೆ. ಸ್ವಾತಂತ್ರ್ಯಾನಂತರ ಭುಗಿಲೆದ್ದ ಸಂಗತಿಯೂ ಇದಲ್ಲ. ಅಂಬೇಡ್ಕರ್ ಸಾವಿನ ನಂತರ ಹುಟ್ಟಿಕೊಂಡದ್ದೂ ಅಲ್ಲ. ಚಾರಿತ್ರಿಕವಾಗಿ ನಮ್ಮ ಸಮಾಜದಲ್ಲಿ ದಲಿತರು ಹಿಂಸೆ ಮತ್ತು ಶೋಷಣೆಗೆ ಒಳಗಾಗಿದ್ದಾರೆ, ಆಗುತ್ತಿದ್ದಾರೆ. ಹೀಗಾಗದಂತೆ ತಡೆಯಲು ಬಹು ದೊಡ್ಡ ಶಕ್ತಿಯಾಗುತ್ತಿದ್ದ ಪ್ರತ್ಯೇಕ ಚುನಾವಣಾ ಪದ್ಧತಿಯನ್ನು ಆರಂಭದಲ್ಲಿಯೇ ಕಮರಿಸುವುದರ ಮೂಲಕ ದಲಿತರ ಶಕ್ತಿಯನ್ನು ಅಂತರ್ಯದಲ್ಲೇ ಚಿವುಟಿಹಾಕಿದ ಈ ಒಪ್ಪಂದದಿಂದ ಈ ನಾಡನ್ನು ಕಟ್ಟಿದವರು, ಕತ್ತಲಲ್ಲಿದ್ದು ಬೆಳಕಾದವರು, ಊರಾಚೆಯಿದ್ದೂ ಊರನ್ನು ಚೆಂದಗಾಣಿಸದವರು ಶಾಸನಸಭೆಗೇರಿಯೂ ಬಾಯಿಲ್ಲದವರು – ಅಲ್ಲೇ ಕುಂತವರೇ !

**ಡಾ|| ಕುಂಸಿ ಉಮೇಶ್**
ಕನ್ನಡ ಅಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಳೆಹೊನ್ನೂರು, ಶಿವಮೊಗ್ಗ ಜಿಲ್ಲೆ

## ಜಾತಿ

ಆಸ್ಪತ್ರೆಯಲ್ಲಿಲ್ಲದ ಜಾತಿ
ದೇವಾಲಯಗಳಲ್ಲಿದೆ...
ಪ್ರೇಮದಲ್ಲಿಲ್ಲದ ಜಾತಿ
ಮದುವೆಗಳಲ್ಲಿದೆ...
ಸಾವಿಗಿಲ್ಲದ ಜಾತಿ
ಸ್ಮಶಾನಗಳಲ್ಲಿದೆ...
ಬೆಳಕಿಗಿಲ್ಲದ ಜಾತಿ
ಬದುಕಿನಲ್ಲಿದೆ...
ಬಾರುಗಳಲ್ಲಿಲ್ಲದ ಜಾತಿ
ಭಾರತದೆಲ್ಲೆಡೆಯಲ್ಲಿದೆ



**ಡಿ. ಎಂ. ಹೆಗಡೆ**
ವಕೀಲರು, ನಂ. ೨೫, ನವ್ಯನಗರ, ಜಕ್ಕೂರ್ ಲೇಔಟ್, ಬೆಂಗಳೂರು - ೫೬೦ ೦೬೪

ವಿಶ್ವವೀಕ್ಷಣ

# ಭಾರತ-ಚೀಣಾ ಸಂಬಂಧಗಳ ವರ್ಧನೆ

ಇನ್ನೂ ಬಗೆಹರಿಯದ ವಿವಾದಗಳಿದ್ದರೂ ಇತರ ಕ್ಷೇತ್ರಗಳಲ್ಲಿ ಸಂಬಂಧ ವರ್ಧನೆಗೆ ಬಾಧಕವಿಲ್ಲ ಎನ್ನುವುದಕ್ಕೆ ಭಾರತ-ಚೀಣಾ ಸಂಬಂಧ ಉದಾಹರಣೆ. ಇದೇ ಸೂತ್ರವನ್ನು ಭಾರತವು ಪಾಕಿಸ್ತಾನದೊಂದಿಗೆ ವ್ಯವಹಾರಗಳಲ್ಲೂ ಅನುಸರಿಸುತ್ತಿದೆ. ವಿವಾದಗಳು ಜಟಿಲವಾಗಿದ್ದು ಬಗೆಹರಿಯುವುದು ವರ್ಷಗಟ್ಟಳೆ ಹಿಡಿದೀತು. ಆದರೆ ಪರಸ್ಪರ ಅನುಕೂಲಕರವಾದ ವ್ಯವಹಾರಗಳು ಇತರ ಕ್ಷೇತ್ರಗಳಲ್ಲಿ ವರ್ಧನೆಯಾಗುತ್ತಿದ್ದರೆ ಅದು ದೇಶಗಳ ನಡುವೆ, ಜನತೆಯ ನಡುವೆ ವಿಶ್ವಾಸ ಮೂಡಿಸಿ, ವಿವಾದದ ಇತ್ಯರ್ಥಕ್ಕೆ ಅನುವಾಗುತ್ತದೆ. ಭಾರತ-ಚೀಣಾಗಳು ಅರ್ಧ ಶತಮಾನಕ್ಕೂ ಹಿಂದೆ ರೂಪಿಸಿದ್ದ ಪಂಚಶೀಲ ಸೂತ್ರಗಳ ಸಾರಾಂಶವೇ ಇದು. ಎಲ್ಲ ವಿವಾದಗಳನ್ನು ಪರಸ್ಪರ ಮಾತುಕತೆಗಳ ಮೂಲಕ ಇತ್ಯರ್ಥಗೊಳಿಸಬೇಕು ಎನ್ನುವುದು ಅದರ ಮೂಲ ಮಂತ್ರ. ಇದು ಬಿಟ್ಟರೆ ಅನ್ಯಮಾರ್ಗವಿಲ್ಲ ಎನ್ನುವುದು ಸಂಭವಿಸಿರುವ ಘಟನೆಗಳಿಂದ ರುಜುವಾತುಗೊಂಡಿದೆ.

ಭಾರತ-ಚೀಣಾ ಸಂಬಂಧಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಅವನತಿ ಕಂಡದ್ದು ಐವತ್ತರ ದಶಕದ ಕೊನೆಯಲ್ಲಿ. ದಿಢೀರ್ ಎಂದು ಭುಗಿಲೆದ್ದ ಗಡಿವಿವಾದ ೧೯೬೨ರಲ್ಲಿ ಸಶಸ್ತ್ರ ಘರ್ಷಣೆಗಳಿಗೆ ಎಡೆಕೊಟ್ಟು ಎರಡೂ ದೇಶಗಳ ನಡುವೆ ಸಂಬಂಧಗಳು ಸ್ಥಗಿತಗೊಂಡುವು. ಇಂದಿಗೂ ಈಶಾನ್ಯ ಗಡಿಯಲ್ಲಿ ಭಾರತಕ್ಕೆ ಸೇರಿದ ಸಾವಿರಾರು ಚದುರ ಕಿಲೋಮೀಟರು ನೆಲ ಚೀಣಾದ ಆಕ್ರಮಣದಲ್ಲಿದೆ. ಗಡಿಸಮಸ್ಯೆ ಇತ್ಯರ್ಥವಾಗದೆ ಉಳಿದುಕೊಂಡಿದೆ. ಮತ್ತೆ ಎರಡೂ ದೇಶಗಳ ಮಧ್ಯೆ ಸಂಬಂಧಗಳ ಸುಧಾರಣೆಗೆ ಚಾಲನೆ ದೊರೆತದ್ದು ಮೂವತ್ತು ವರ್ಷಗಳು ಕಳೆದ ಮೇಲೆ. ಕಳೆದ ಹದಿನೈದು ವರ್ಷಗಳಲ್ಲಿ ಗಡಿವಿವಾದಕ್ಕೆ ಸಂಬಂಧಪಟ್ಟಂತೆ ಮಾತುಕತೆಗಳು ಆಮೆ ನಡುಗೆಯಲ್ಲಿ ಸಾಗುತ್ತಿದೆಯಾದರೂ ವಾಣಿಜ್ಯ, ಸಾಂಸ್ಕೃತಿಕ, ರಾಜಕೀಯ ಕ್ಷೇತ್ರಗಳಲ್ಲಿ ಸಂಬಂಧಗಳು ವರ್ಧಿಸಿವೆ. ಇತ್ತೀಚೆಗೆ ಭಾರತದ ಪ್ರಧಾನಿ ಮನಮೋಹನ್ ಸಿಂಗ್ ಚೀಣಾ ಪ್ರವಾಸದ ಫಲಶ್ರುತಿ ಅದಕ್ಕೆ ನಿದರ್ಶನ. ಎರಡೂ ದೇಶಗಳ ನಡುವೆ ಹೆಚ್ಚುತ್ತಿರುವ ವಾಣಿಜ್ಯ ವ್ಯವಹಾರಗಳು ಆರ್ಥಿಕ ಕ್ಷೇತ್ರದಲ್ಲಿ ಸಹಕಾರಕ್ಕೆ ಬುನಾದಿ ನಿರ್ಮಿಸಿದೆ. ೨೦೦೭ರಲ್ಲಿ ಭಾರತ-ಚೀಣಾಗಳ ನಡುವಣ ವ್ಯಾಪಾರ ವಹಿವಾಟು ಸುಮಾರು ೩೯ ಬಿಲಿಯ ಡಾಲರುಗಳಾಗಿದ್ದುವು. ಇದು ಇನ್ನೂ ಹೆಚ್ಚುವ ಭರವಸೆಯಿದೆ. ಪ್ರಧಾನಿಗಳಿಬ್ಬರೂ ಅಂಕಿತ ಹಾಕಿರುವ 'ಇಪ್ಪತ್ತೊಂದನೇ ಶತಮಾನದ ಸಮಾನ ದೃಷ್ಟಿ' ದಸ್ತಾವೇಜು ಸಂಬಂಧಗಳ ವರ್ಧನೆಗೆ ಹೊಸ ಆಶಾಭಾವನೆ ಉಂಟುಮಾಡುವುದಾಗಿದೆ. ಎರಡೂ ದೇಶಗಳ ನಾಯಕರುಗಳ ಉನ್ನತಮಟ್ಟದ ಸಂಪರ್ಕಗಳು ಮುಂದುವರಿಯಲಿವೆ. ಪ್ರಧಾನಿಯವರ ಭೇಟಿಯ ಸಮಯದಲ್ಲಿ ಉಭಯ ರಾಷ್ಟ್ರಗಳೂ ಹಲವಾರು ದ್ವಿಪಕ್ಷೀಯ ಒಪ್ಪಂದಗಳಿಗೆ ಸಹಿ ಹಾಕಿವೆ, ರಾಜಕೀಯ ಕ್ಷೇತ್ರದಲ್ಲಿ ಸಂಪರ್ಕವನ್ನು ಹೆಚ್ಚಿಸಲು ನಿರ್ಧರಿಸಿವೆ. ಈ ಸ್ವಾಗತಾರ್ಹ ಅಂಶಗಳು ಎರಡೂ ದೇಶಗಳ ಮಧ್ಯೆ ಮೈತ್ರಿಸಂಬಂಧಗಳನ್ನು ಮತ್ತಷ್ಟು ಹೆಚ್ಚಿಸುವುದೆಂದು ಆಶಿಸೋಣ.

ಪ್ರಪಂಚದ ಮೂರನೇ ಒಂದು ಭಾಗ ಜನಸಂಖ್ಯೆಯನ್ನು ಪ್ರತಿನಿಧಿಸುವ ಭಾರತ-ಚೀಣಾಗಳು ಪರಸ್ಪರ ಕಲೆತು ವ್ಯವಹರಿಸಿದರೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಬಲ್ಲವಾಗಿವೆ. ಅಲಿಪ್ತ ಚಳವಳಿಯ ಸದಸ್ಯರಾಷ್ಟ್ರಗಳಾಗಿರುವ ಈ ಎರಡು ದೇಶಗಳೂ ಚಳವಳಿಯ ಪುನಶ್ಚೇತನಕ್ಕೆ ಅಮೂಲ್ಯ ಕೊಡುಗೆ ನೀಡಬಲ್ಲವಾಗಿವೆ. ಪ್ರಚಲಿತ ಸನ್ನಿವೇಶದಲ್ಲಿ ಇದು ಅವಶ್ಯ ಕೂಡ. ಏಕಶಕ್ತಿಕೇಂದ್ರೀಯ ಜಗತ್ತಿನಲ್ಲಿ ಅಮೆರಿಕಾದ ಅಟ್ಟಹಾಸವನ್ನು ತಡೆಯಲು ಭಾರತ-ಚೀಣಾಗಳು ಒಂದುಗೂಡಿದರೆ ಸಾಧ್ಯ ಎನ್ನುವುದರಲ್ಲಿ ಸಂದೇಹವಿಲ್ಲ. ಇವೆರಡು ದೇಶಗಳ ಜೊತೆಗೆ ರಷ್ಯವೂ ಸೇರಿದರೆ ಅಂತರರಾಷ್ಟ್ರೀಯ ಬೆಳವಣಿಗೆಗಳ ದಿಶೆಯನ್ನೇ ಬದಲಿಸಬಹುದಾಗಿದೆ. ಈ ಮೂರೂ ರಾಷ್ಟ್ರಗಳು – ರಷ್ಯಾ, ಚೀಣಾ, ಭಾರತ – ಚೀಣಾದ ಶಾಂಘಾಯ್ ನಗರದಲ್ಲಿ ಸಭೆ ಸೇರಿದ್ದು 'ಶಾಂಘಾಯ್- ತಂಡ' ಎಂದು ಗುರ್ತಿಸಲ್ಪಟ್ಟಿವೆ. ಇದು ಇನ್ನೂ ಶೈಶವಾವಸ್ಥೆಯಲ್ಲಿದೆ. ಅಮೆರಿಕಾಗೆ ಈ ಕಿಂಚಿತ್ ಬೆಳವಣಿಗೆಯೂ ಗಾಬರಿ ಉಂಟುಮಾಡಿದೆ. ಈ ದೇಶಗಳು ಒಂದುಗೂಡುವುದನ್ನು ತಡೆಯಲು ಅದು ಚಿತಾವಣೆ ನಡೆಸಿದೆ. ಚೀಣಾದಲ್ಲಿ ಅಮೆರಿಕಾದ ಬಂಡವಾಳ ಹೇರಳವಾಗಿ ಹೂಡಲ್ಪಟ್ಟಿದ್ದರೂ, ಅಮೆರಿಕಾ ಚೀಣಾವನ್ನು ಪೂರ್ಣವಾಗಿ ನಂಬುವುದಿಲ್ಲ. ಅದನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತದೆ. ಹಾಗಾಗಿ ಭಾರತ-ಚೀಣಾ ಸಂಬಂಧಗಳ ಅಭಿವರ್ಧನೆ ಅಮೆರಿಕಾದ ಮಟ್ಟಿಗೆ ಅಪಥ್ಯ. ಅದರಿಂದಲೇ ಭಾರತವನ್ನು ತನ್ನೆಡೆ ಸೆಳೆದುಕೊಳ್ಳಲು ಅಮೆರಿಕಾ ಭಾರತಕ್ಕೆ ನಾನಾ ಬಗೆಯ ಆಮಿಷಗಳನ್ನು ಒಡ್ಡುತ್ತಿದೆ. ಭಾರತವನ್ನು ಚೀಣಾದ ವಿರುದ್ಧವಾಗಿ ಎತ್ತಿಕಟ್ಟಲು ಬಳಸಿಕೊಳ್ಳಲೂ ನೋಡುತ್ತಿದೆ.

ಏಶಿಯಾ ಖಂಡದ ಎರಡು ಬೃಹತ್ ರಾಷ್ಟ್ರಗಳಾದ ಭಾರತ-ಚೀಣಾಗಳು ಏಕಕಾಲದಲ್ಲಿ ಆರ್ಥಿಕಾಭಿವೃದ್ಧಿಯ ಪಥದಲ್ಲಿ ಅಡಿ ಇರಿಸಿದ ದೇಶಗಳು. ಹೆಚ್ಚು ಕಡಿಮೆ ಎರಡೂ ದೇಶಗಳಲ್ಲಿನ ಪರಿಸ್ಥಿತಿಯೂ ಒಂದೇ ತೆರನಾಗಿತ್ತು ಎನ್ನಬಹುದು. ಈಚಿನ ವರ್ಷಗಳಲ್ಲಿ ಚೀಣಾ ಕೈಗಾರಿಕಾಭಿವೃದ್ಧಿಯಲ್ಲಿ, ವಿದೇಶೀ ಬಂಡವಾಳದ ಆಕರ್ಷಣೆಯಲ್ಲಿ ದಾಪುಗಾಲು ಹಾಕಿದೆ. ಈ ಎರಡೂ ದೇಶಗಳು ಪರಸ್ಪರರ ಅನುಭವದಿಂದ ಉಪಯುಕ್ತವಾದ ಪಾಠ ಕಲಿಯಬಹುದಾಗಿದೆ. ಆದರೆ ಬಗೆಹರಿಯದಿರುವ ಗಡಿಸಮಸ್ಯೆ ಸಂಬಂಧಗಳಲ್ಲಿ ಕಪ್ಪುಚುಕ್ಕೆಯಾಗಿಯೇ ಉಳಿದಿದೆ. ಗಡಿಯಲ್ಲಿ ಸಂಭವಿಸುವ ಸಣ್ಣಪುಟ್ಟ ಘಟನೆಗಳೂ ಕೂಡ ಸಂಶಯಕ್ಕೆಡೆಕೊಡುವ ಸಂಭವ ಅಧಿಕಗೊಂಡಿದೆ. ಇಂಥ ಘಟನೆಗಳನ್ನು ಉಪಯೋಗಿಸಿಕೊಳ್ಳುವ ಶಕ್ತಿಗಳೂ ಇವೆ. ಸಹಸ್ರಾರು ಮೈಲಿಗಳು ಉದ್ದವಿರುವ ಇನ್ನೂ ನಿಗದಿಯಾಗಿರುವ ಗಡಿಯಲ್ಲಿ ಯಥಾಸ್ಥಿತಿ ಕಾಯ್ದುಕೊಂಡು ಬರುವುದು ಸುಲಭವೇನಲ್ಲ. ಗಡಿಸಮಸ್ಯೆಯಂಥ ಭಾವನಾತ್ಮಕ ವಿಷಯದ ಇತ್ಯರ್ಥ ಸಾಕಷ್ಟು ದೀರ್ಘಕಾಲ ಹಿಡಿಯುತ್ತದೆ. ಚೀಣಾ-ರಷ್ಯಾಗಳ ನಡುವೆ ಗಡಿವಿವಾದ ಇತ್ಯರ್ಥಗೊಂಡು, ಎರಡೂ ದೇಶಗಳಿಗೆ ಸಮರ್ಪಕವಾಗಿರುವ ಸೂತ್ರ ರೂಪಿಸಲು ಏಳು ದಶಕಗಳೇ ಹಿಡಿಯಿತು. ಹಾಗಿರುವಾಗ ಭಾರತ-ಚೀಣಾ ಗಡಿವಿವಾದ ಇತ್ಯರ್ಥಗೊಳ್ಳುವುದಕ್ಕೆ ಸಾಕಷ್ಟು ಸಮಯ ಹಿಡಿದೀತು. ಹದಿನೈದು ವರ್ಷಗಳಿಂದ ಎರಡೂ ದೇಶಗಳು ನೇಮಕ ಮಾಡಿರುವ ಪ್ರತಿನಿಧಿಗಳು ತಮ್ಮ ಕಾರ್ಯ ಮುಂದುವರಿಸಿದ್ದಾರೆನ್ನುವುದು ಸಮಾಧಾನದ ಸಂಗತಿ. ಚೀಣಾ ತನ್ನ ವಶದಲ್ಲಿರುವ ಭೂಭಾಗದಲ್ಲಿ ವ್ಯವಸ್ಥಿತವಾದ ಪಕ್ಕಾ ರಸ್ತೆ ನಿರ್ಮಿಸಿಕೊಂಡಿದೆ ಎಂದು ವರದಿಯಾಗಿದೆ. ಭಾರತದ ಕಡೆ ಇನ್ನೂ ಅಷ್ಟಾಗಿಲ್ಲ. ಉದ್ದದ ಈ ಗಡಿಪ್ರದೇಶದಲ್ಲಿ ಬಂಕರುಗಳು ಹಿಂದೆ ಮುಂದಾಗುತ್ತಿರುವ ವರದಿಗಳು ಆಗಾಗ ಬರುತ್ತಿರುತ್ತವೆ. ಸ್ಥಳೀಯ ಮಟ್ಟದಲ್ಲೇ ಅವು ಪರಿಹಾರಗೊಳ್ಳುತ್ತವೆ. ಆದರೆ ಮಾಧ್ಯಮಗಳಲ್ಲಿ ಒಮ್ಮೊಮ್ಮೆ ಇದನ್ನೇ ದೊಡ್ಡದು ಮಾಡಲಾಗುತ್ತಿದೆ. ಉತ್ಪ್ರೇಕ್ಷೆಯಿಂದ ಕೂಡಿದ ವರದಿಗಳು ಪ್ರಕಟವಾಗುತ್ತವೆ. ಇಂಥವು ವಾತಾವರಣವನ್ನು ಕಲುಷಿತಗೊಳಿಸುತ್ತವೆ. ಸಂಬಂಧಗಳ ಸುಧಾರಣೆಗೆ ಅವು ಅಡ್ಡಿಯಾಗುತ್ತವೆ. ಅಂಥವುಗಳ ಬಗ್ಗೆ ಎಚ್ಚರವಹಿಸುವುದು ಅಗತ್ಯ.

ಭಾರತ-ಚೀಣಾಗಳ ನಡುವೆ ವ್ಯಾಪಾರ ವಹಿವಾಟಿನ ಬೆಳವಣಿಗೆ, ಪರಸ್ಪರ ವಿಶ್ವಾಸ ಹೆಚ್ಚಿಸುವ ಸಂಬಂಧಗಳು ಎರಡೂ ದೇಶಗಳಿಗೆ ಅನುಕೂಲಕರ. ಅದು ಇತರ ದೇಶ, ಮುಖ್ಯವಾಗಿ ಏಶಿಯಾ, ಆಫ್ರಿಕಾದ ಅಭಿವೃದ್ಧಿಶೀಲ ದೇಶಗಳಂತೆಯೇ ಪ್ರಭಾವ ಬೀರಬಲ್ಲದಾಗಿರುತ್ತದೆ. ಇಪ್ಪತ್ತೊಂದನೇ ಶತಮಾನದಲ್ಲಿ ಇದು ಏಶಿಯಾ ಕೇಂದ್ರಿತವಾಗಿ ಬೆಳೆಯುವಂತಾದಲ್ಲಿ ಸ್ವಾಗತಾರ್ಹ.

ಸೀಯಾರ್ಕೆ
'ಚೌಬೀನ', ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

## ಬಿಸಿಲ ಹನಿಗಳು

ಹೆರಳೇ...
ನೀ ಬೀಸಣಿಕೆಯಾಗುವ ಮಾತು
ಕೊಟ್ಟರೆ,
ನಾ ಬಿಸಿಲನ್ನೇ
ಕಟ್ಟಿಕೊಳ್ಳುವೆ...!

ವಿಜಯಕಾಂತ ಪಾಟೀಲ
ಚಿಕ್ಕಾಂಶಿ-ಹೊಸೂರು - ೫೮೧ ೧೦೪
ಹಾನಗಲ್/ಹಾವೇರಿ



# ಶನಿಯ ಆಗಮನ

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

ಫೆಬ್ರವರಿ ತಿಂಗಳ ಆಕಾಶದಲ್ಲಿ ಫಳಗುಟ್ಟುವ ಮಂಗಳವೇ ರಾಜನ ಹಾಗೆ ಪ್ರಕಾಶಿಸಿದರೂ, ಆಗ್ನೇಯ ದಿಕ್ಕಿನಲ್ಲಿ ಕಾಣುವ ಸಿರಿಯಸ್ (ಲುಬ್ಧಕ) ಅದನ್ನೂ ಮೀರಿಸುವಂತೆ ಬೆಳಗುತ್ತದೆ. ಮಂಗಳದ ಪ್ರಕಾಶ ಕ್ರಮೇಣ ಕಡಿಮೆಯಾಗುತ್ತಿರುವುದರಿಂದ ಸಿರಿಯಸ್ ಮೇಲುಗೈ ಸಾಧಿಸುವುದೇನೋ ನಿಜ. ತಿಂಗಳ ಕೊನೆಗೆ ಪ್ರಕಾಶಮಾನವಾದ ಶನಿಗ್ರಹ ಸ್ಪರ್ಧೆ ಹೂಡುವಂತೆ ಕಾಣುತ್ತದೆ.

ಶುಭ್ರವಾದ ಆಕಾಶದಲ್ಲಿ ಕಣ್ಸೆಳೆಯುವ ಒರೈಯನ್ (ಮಹಾವ್ಯಾಧ) ಮತ್ತು ಕ್ಯಾನಿಸ್ ಮೇಜರ್ (ಮಹಾಶ್ವಾನ)ಗಳತ್ತ ಸೂಕ್ಷ್ಮವಾಗಿ ಗಮನಹರಿಸಿ. ಹಾಗೇ ಉತ್ತರದ ಪಾರ್ಥ ಮತ್ತು ಕುಂತಿಗಳವರೆಗೂ ದೃಷ್ಟಿಯನ್ನು ಹರಿಸಿ. ಇದು ಆಕಾಶಗಂಗೆಯ ಒಂದು ಭಾಗ. ನೆಬ್ಯುಲಗಳು, ನಕ್ಷತ್ರಗುಚ್ಛಗಳು ಮಾತ್ರವಲ್ಲದೆ ನಕ್ಷತ್ರಗಳ ದಟ್ಟಣೆಯೂ ಹೆಚ್ಚು ಎಂದು ಸುಲಭವಾಗಿ ತಿಳಿಯುತ್ತದೆ. ಮಹಾವ್ಯಾಧನ ಸೊಂಟ ಪಟ್ಟಿಯ ಭಾಗದಲ್ಲಿರುವ ಒರೈಯನ್ ನೆಬ್ಯುಲವನ್ನು ಗುರುತಿಸಲು ಪ್ರಯತ್ನಿಸಿ. ಒಮ್ಮೆ ದುರ್ಬೀನಿನಲ್ಲಿ ನೋಡಿ ಗುರುತಿಸಿಕೊಂಡ ಮೇಲೆ ಬರಿಗಣ್ಣಿನಿಂದಲೇ ಪತ್ತೆ ಮಾಡುವುದು ಸಾಧ್ಯವಾಗಬಹುದು.

ಸಂಜೆ ಕಾಣುವ ಗ್ರಹಗಳೆಂದರೆ ಮಂಗಳ ಮತ್ತು ಶನಿ. ವೃಷಭ ಮತ್ತು ಮಿಥುನಗಳ ನಡುವೆ ಮಂಗಳ ಗ್ರಹ ಇದೆ. ಸಿಂಹದ ಮಘ ನಕ್ಷತ್ರದ ಬಳಿ ಇರುವ ಶನಿಗ್ರಹದ ವಿಯುತಿ ೨೪ರಂದು. ಅಂದರೆ ಅದರ ಪ್ರಕಾಶ ಗರಿಷ್ಠ; ಅಷ್ಟೇ ಅಲ್ಲ; ಸಂಜೆ ಉದಯಿಸಿ, ಬೆಳಗಿನವರೆಗೂ ನೋಡಲು ಸಿಗುತ್ತದೆ. ದುರ್ಬೀನು, ದೂರದರ್ಶಕ ಇರುವವರು ವಿಶೇಷವಾಗಿ ಗಮನಿಸಬಹುದು. ೨೧ರ ಹುಣ್ಣಿಮೆಯ ಚಂದ್ರನನ್ನು ಸಂಜೆ ಗಮನಿಸಿ. ಅದು ಆ ದಿನ ಮಘ ನಕ್ಷತ್ರವನ್ನು ಮುಚ್ಚುತ್ತದೆ; ಆದರೆ ಆ ಆಚ್ಛಾದನೆಯ ನೋಟ ನಮಗಿಲ್ಲ. ಎರಡೂ ಅತಿ ಸಮೀಪದಲ್ಲಿ ಇರುವಂತೆ ಮಾತ್ರ ನಮಗೆ ಕಾಣುತ್ತದೆ. ೭೭ರ ಬೆಳಗಿನ ಜಾವ ಪುನಃ ಚಂದ್ರನನ್ನು (ಪಶ್ಚಿಮದಲ್ಲಿ) ನೋಡಿ. ಮಘದಿಂದ ದೂರಸರಿದು ಶನಿಗ್ರಹವನ್ನು ಸಮೀಪಿಸಿದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

ಈ ತಿಂಗಳಲ್ಲಿ ಚಂದ್ರ ಜ್ಯೇಷ್ಠಾ ನಕ್ಷತ್ರವನ್ನು ಒಂದರಂದು ಮತ್ತು ೨೯ರಂದು ಮುಚ್ಚುತ್ತದೆಯಾದರೂ ಎರಡೂ ಆಚ್ಛಾದನೆಗಳು ನಮಗೆ ನೋಡಲು ಸಿಗುವುದಿಲ್ಲ. ಅವೆರಡೂ ಬಹಳ ಹತ್ತಿರ ಇರುವಂತೆ (ಅಂದರೆ ಅವುಗಳ ನಡುವಿನ ಕೋನ ಕಡಿಮೆ ಇರುವಂತೆ) ಕಾಣುತ್ತವೆ.

ಚಂದ್ರ ಈ ತಿಂಗಳಲ್ಲಿ ಸೂರ್ಯನನ್ನು ಮರೆಮಾಡುತ್ತದೆ. ೭ರ ಈ ಸೂರ್ಯ ಗ್ರಹಣ ಅಂಟಾರ್ಕ್ಟಿಕಾದವರಿಗೆ ಕಾಣುತ್ತದೆ. ನಮಗಿಲ್ಲ. ಬೆಳಿಗ್ಗೆ ೭ ಗಂಟೆ ೮ ನಿಮಿಷಕ್ಕೆ ಆರಂಭವಾಗುತ್ತದೆ. ಸುಮಾರು ೯ ಗಂಟೆ ೨೫ ನಿಮಿಷಕ್ಕೆ ಕಂಕಣಗ್ರಹಣ; ೧೧ ಗಂಟೆ ೪೬ ನಿಮಿಷಕ್ಕೆ ಮುಗಿಯುತ್ತದೆ.

ಈ ತಿಂಗಳಲ್ಲಿ ಚಂದ್ರಗ್ರಹಣವೂ ಇದೆ. ೨೧ರ ಬೆಳಗಿನ ಜಾವ ೬ ಗಂ. ೫ ನಿಮಿಷಕ್ಕೆ ಚಂದ್ರ ಭೂಮಿಯ ನೆರಳನ್ನು ಪ್ರವೇಶಿಸುತ್ತದೆ. ಅದಾದ ಸ್ವಲ್ಪ ಹೊತ್ತಿಗೆ ಕಂತುತ್ತದೆ. ಆದರೆ ನೆರಳಿನ ತೀರಾ ಮಂಕಾದ ಭಾಗವನ್ನು ಪ್ರವೇಶಿಸುವುದರಿಂದ, ಅದರಲ್ಲೂ ದಿಗಂತದ ಅಂಚಿನಲ್ಲಿ ಇದು ನಡೆಯುವುದರಿಂದ, ಗ್ರಹಣ ಆಗುತ್ತಿದೆ ಎಂಬ ಅಂಶವೇ ನಮ್ಮ ಗಮನಕ್ಕೆ ಬರುವುದಿಲ್ಲ. ಒಟ್ಟಿನಲ್ಲಿ ನಮಗೆ ಗ್ರಹಣದ ನೋಟ ಇಲ್ಲ.

ಈ ತಿಂಗಳಲ್ಲಿ ಅತಿ ಅವಶ್ಯಕವಾಗಿ ನೋಡಲೇಬೇಕಾದ ಗ್ರಹ ಶುಕ್ರ. ಬೆಳಗಿನ ಜಾವ ತಿಂಗಳ ಮೊದಲ ದಿನ ಶುಕ್ರ ಮತ್ತು ಗುರು ಒಂದುಗೂಡಿರುತ್ತವೆ. ಬಹಳ ಸಮೀಪ ಇರುತ್ತವೆ. ಅಂದರೆ ಅವುಗಳ ನಡುವಿನ ಕೋನ ಕೇವಲ ೦.೧ ಡಿಗ್ರಿ ಮಾತ್ರ. ೪ರಂದು ಇವುಗಳ ಜೊತೆ ಬಾಲಚಂದ್ರನೂ ಸೇರುತ್ತಾನೆ. ಏಸುಕ್ರಿಸ್ತ ಹುಟ್ಟಿದಾಗ ಹೀಗೆ ಅತಿ ಕಡಿಮೆ ಕೋನದಲ್ಲಿ ಇದ್ದಿರಬೇಕು; ಅದನ್ನೇ ಬೆತ್ಲೆಹೆಮ್‌ನ ನಕ್ಷತ್ರ ಎಂದು ಕರೆದಿರಬಹುದು ಎಂದು ಊಹಿಸುವವರೂ ಇದ್ದಾರೆ. ಕ್ರಮೇಣ ಎರಡೂ ದೂರ ದೂರವಾಗುತ್ತವೆ. ತಿಂಗಳ ಕೊನೆಗೆ ಬುಧಗ್ರಹ ಶುಕ್ರದ ಜೊತೆಗೂಡುತ್ತದೆ.

ಮಾರ್ಚ್ ೫ರಂದು ಚಂದ್ರ, ಬುಧ ಮತ್ತು ಶುಕ್ರಗಳೆರಡನ್ನೂ ಮುಚ್ಚುವ ಆಚ್ಛಾದನೆಗಳಿವೆ. ಬಾಲಚಂದ್ರನ ಆಚೀಚೆ ಕಾಣುವ ಈ ಚುಕ್ಕೆಗಳನ್ನು ಚಿತ್ರೀಕರಿಸಲು ಈಗಲೇ ಸಿದ್ಧತೆ ನಡೆಸಿ.

### ಖಗೋಳ ದಿನಚರಿ

ಫೆಬ್ರವರಿ ೧ ಶುಕ್ರ-ಗುರು ಜೋಡಿ*; ಜ್ಯೇಷ್ಠಾ-ಚಂದ್ರ ಜೋಡಿ*
೪ ಶುಕ್ರ-ಗುರು-ಚಂದ್ರ – ಇವುಗಳ ಸಮಾಗಮ*
೬ ಬುಧ-ಚಂದ್ರ ಜೋಡಿ
೭ ಅಮಾವಾಸ್ಯೆ ೦೯:೧೪ಕ್ಕೆ
ಕಂಕಣ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)
ಚಂದ್ರ ರಾಹು ಬಿಂದುವಿನಲ್ಲಿ
೧೪ ಚಂದ್ರ-ಭೂಮಿ ಅಂತರ ಕನಿಷ್ಠ
ಚಾಂದ್ರಮಾಸದ ಮೊದಲ ಪಾದ
೧೬ ಮಂಗಳ-ಚಂದ್ರ ಜೋಡಿ*
೧೮ ಬುಧ ತಟಸ್ಥ
೨೦ ಚಂದ್ರ ಕೇತು ಬಿಂದುವಿನಲ್ಲಿ
೨೧ ಹುಣ್ಣಿಮೆ ೦೯:೦೦
ಚಂದ್ರಗ್ರಹಣ (ಸಂಜೆ ೦೬:೦೫ಕ್ಕೆ ಆರಂಭ) ಚಂದ್ರ-ಶುಕ್ರ-ಮಘ ಜೋಡಿ
೨೪ ಶನಿಗ್ರಹದ ವಿಯುತಿ
೨೬ ಬುಧ-ಶುಕ್ರ ಜೋಡಿ*
೨೮ ಚಂದ್ರ-ಭೂಮಿ ಅಂತರ ಗರಿಷ್ಠ
೨೯ ಚಾಂದ್ರಮಾಸದ ಕೊನೆಯ ಪಾದ
ಮಾರ್ಚ್ ೩ ಬುಧಗ್ರಹದ ಗರಿಷ್ಠ ಕೋನೋನ್ನತಿ*
೫ ಬುಧ, ಶುಕ್ರ, ಚಂದ್ರಗಳ ಪುಟ್ಟ ತ್ರಿಕೋಣ*

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ



# 'ಕನ್ನಡಿಗನ ಕೊರಗು'

**ನೂ**ತನ ಕರ್ನಾಟಕ ರಾಜ್ಯ ಸ್ಥಾಪನೆಯಾಗಿ ಇದೀಗ ಐವತ್ತು ವರುಷಗಳಾಗಿವೆ. ಅದರ ಸವಿ ನೆನಪಿಗಾಗಿ ನಾವೀಗ ಸಂಭ್ರಮ ಸಡಗರದಿಂದ ಚಿನ್ನದ ಹಬ್ಬವನ್ನು ಆಚರಿಸುತ್ತಿದ್ದೇವೆ. ಅದೂ ಮುಗಿಯುವ ಕಾಲ. ಅದರ ಹಿನ್ನೆಲೆಯಲ್ಲಿ ಕನ್ನಡದ ಇತಿಹಾಸ, ನೆಲ, ಜಲ, ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ ಮುಂತಾದ ವಲಯಗಳಲ್ಲಿ ಆದ ಬದಲಾವಣೆಗಳನ್ನು ಕುರಿತು ಸ್ಥೂಲ ಅವಲೋಕನ ಮಾಡುವುದು ಉಚಿತವೆನಿಸುತ್ತದೆ.

ಕರ್ನಾಟಕದ (ಕರ್ಣಾಟ) ಹೆಸರು ಮಹಾಭಾರತ ಕಾವ್ಯದಲ್ಲಿ ಉಲ್ಲೇಖವಿದೆ ಎಂದು ಹೇಳುವುದುಂಟು. ಇತ್ತೀಚಿನ ಸಹಸ್ರಮಾನಗಳಲ್ಲಿ ಕನ್ನಡದ ಕವಿಚಕ್ರವರ್ತಿ ನೃಪತುಂಗ ತನ್ನ **ಕವಿರಾಜಮಾರ್ಗ**ದಲ್ಲಿ **'ಕಾವೇರಿಯಿಂದಮಾ ಗೋದಾವರಿವರ ಮಿರ್ದನಾಡು'** ಎಂದು ಸಾವಿರ ವರ್ಷಗಳ ಹಿಂದೆಯೆ ವರ್ಣಿಸಿದ್ದಾನೆ. ಮುಂದಿನ ಶತಮಾನಗಳಲ್ಲಿ ಇಲ್ಲಿಯ ನಾಡು, ನುಡಿ ಹಲವಾರು ಬದಲಾವಣೆಗಳನ್ನು ಕಂಡಿದೆ. ಕೇವಲ ಇತ್ತೀಚಿನ ಶತಮಾನಗಳ ಇತಿಹಾಸವನ್ನು ಗಮನಿಸಿದಲ್ಲಿ ಕನ್ನಡಿಗರ ಹೆಮ್ಮೆಯ ವಿಜಯನಗರ ಸಾಮ್ರಾಜ್ಯ (೧೩೩೬-೧೫೬೫) ಇಡೀ ದಕ್ಷಿಣ ಭಾರತವನ್ನು ಆವರಿಸಿಕೊಂಡಿತ್ತು. ಆದರಷ್ಟು ಸಂಪದ್ಭರಿತ ವೈಭವೋಪೇತ ವ್ಯವಸ್ಥಿತ ಸಾಮ್ರಾಜ್ಯ ಅಂದು ಪ್ರಪಂಚದಲ್ಲೆಲ್ಲೂ ಇರಲಿಲ್ಲವೆಂದು ಹೇಳಲಾಗುತ್ತಿತ್ತು. ತಾಳಿಕೋಟೆ ಯುದ್ಧದಲ್ಲಿ (೧೫೬೫) ಆ ಸಾಮ್ರಾಜ್ಯ ವಿನಾಶವಾಯಿತು. ಅದರ ರಾಜಧಾನಿ ಹಂಪಿ ಇಂದು **ವಿಶ್ವ ಪಂಪರೆಯ ತಾಣವೆಂದು ಯುನೆಸ್ಕೊ** ಸಂಸ್ಥೆ ಪರಿಗಣಿಸಿದೆ; ಅದನ್ನು ಶಾಶ್ವತವಾಗಿ ರಕ್ಷಿಸಲು ಮುಂದಾಗಿದೆ.

ಹದಿನೇಳನೇ ಶತಮಾನದಲ್ಲಿ ಕನ್ನಡ ಪ್ರದೇಶ (ಮೈಸೂರು) ವನ್ನು ಆಳುತ್ತಿದ್ದ ಹೈದರಾಲಿ, ಟಿಪ್ಪು ಸುಲ್ತಾನರು ದಕ್ಷಿಣ ಭಾರತದ ಬಹುಪಾಲು ಪ್ರದೇಶಗಳಿಗೆ ವಿಸ್ತರಿಸಿದ್ದರು. ಶ್ರೀರಂಗಪಟ್ಟಣದಲ್ಲಿ ಬ್ರಿಟಿಷರೊಡನೆ ಜರುಗಿದ ನಿರ್ಣಾಯಕ ಯುದ್ಧದಲ್ಲಿ (೧೭೯೯) ಅದರ ಪತನವಾಯಿತು. ವಿಸ್ತಾರವಾಗಿ ಪಸರಿಸಿಕೊಂಡಿದ್ದ ಮೈಸೂರಿನ ಕನ್ನಡ ಪ್ರದೇಶಗಳು ಕೊಡಗು, ಮದ್ರಾಸು, ಬಾಂಬೆ, ಹೈದರಾಬಾದು ಮುಂತಾದ ಬ್ರಿಟಿಷರ ಪ್ರಾಂತ್ಯಗಳಲ್ಲಿ ಹಂಚಿಹೋದವು. ಕೇವಲ ಅಂಗೈ ಅಗಲದ ಮೈಸೂರು ಮಾತ್ರ ಕನ್ನಡ ರಾಜ್ಯವಾಗಿ ಉಳಿಯಿತು.

ಹಾಗೆ ಪರಭಾಷಾ ರಾಜ್ಯಗಳಲ್ಲಿ ಹಂಚಿಹೋದ ಕನ್ನಡ ಮಾತಾಡುವವರು ಅಲ್ಪಸಂಖ್ಯಾತರಾದರು. ಗೌರವಯುತ ಬಾಳ್ವೆ ನಡೆಸುವ ಅವಕಾಶಗಳಿಂದ ವಂಚಿತರಾದರು. ಅವರ ಭಾಷೆ, ಸಂಸ್ಕೃತಿಯ ಮೇಲೂ ಗದಾಪ್ರಹಾರವಾಯಿತು; ಅವರೆಲ್ಲಾ ಎರಡನೇ ದರ್ಜೆಯ ಪ್ರಜೆಗಳಾದರು. ಆ ಕಾಲಮಾನದ ಕನ್ನಡಿಗರ ಹೀನಾಯ ಪರಿಸ್ಥಿತಿಯನ್ನು ಆಚಾರ್ಯ ತೀ. ನಂ. ಶ್ರೀಕಂಠಯ್ಯನವರ ಕವಿತೆ **'ಕನ್ನಡಿಗನ ಕೊರಗು'** (೧೯೨೮) ಸಾಕ್ಷೀಕರಿಸುತ್ತದೆ:

**ಕನ್ನಡಿಗನ ಕೊರಗು**

*ಸೊಕ್ಕಿನಲಿ ತಲೆಯೆತ್ತಿ ಜೊತೆಯವರ ಕೂಟದಲಿ,*
*ನಾವು ಸಮ ನಿಮಗೆಂದು ನುಡಿವ ಬಲವಿಲ್ಲ!*
*ಮಿಕ್ಕವರು ಕಡೆಗಣಿಸಿ ನೂಕಿದಾಕಡೆ ಬಿದ್ದು,*
*ಯಾವ ಮಂಕೋ ಕವಿದು, ಹುದುಗಿರುವೆವಲ್ಲ!*
*ರೊಕ್ಕ ಕೈಯೊಳಗಿಲ್ಲ, ಹುರುಡು ಮೈಯೊಳಗಿಲ್ಲ,*
*ಹೆಮ್ಮೆಯೊಂದನು ನೆಚ್ಚಿ ಬೆಸೆಗೆಟ್ಟೆವಲ್ಲ!*
*ಅಕ್ಕತಂಗಿಯರೆಲ್ಲ ಮುಂದುಮುಂದಾಗಿರಲು*
*ನಮ್ಮ ತಾಯೊಬ್ಬಳೇ ಸೊರಗಿರುವಳಲ್ಲ!*
*ಅಮ್ಮನನು ಕೈಬಿಡದೆ ಇನ್ನು ಮೆರೆಸುವೆವೆ?*
*ಹಿರಿಯ ಹೆಸರನು ತಿರುಗಿ ಗಳಿಸಿಕೊಳ್ಳುವೆವೆ?*
*ಸರಿಯವರ ತಲೆಮಟ್ಟ ಮುಂದೆ ನಿಲ್ಲುವೆವೆ?*
*ನೆಮ್ಮದಿಯ ಬೆಳಕಿನಲ್ಲಿ ನಾವು ಬಾಳುವೆವೆ?*

– ತೀ.ನಂ.ಶ್ರೀ.

'ಕಿರಿಯ ಕಾಣಿಕೆ' ಸಂಗ್ರಹದಿಂದ (೧೯೨೮).

ಭಾರತದಾದ್ಯಂತ ನಾನಾ ಭಾಷಿಕರ ಪರಿಸ್ಥಿತಿಯನ್ನು ಸರಿ

**ಪ್ರತಿಯೊಬ್ಬರೂ ತಮ್ಮ ತಮ್ಮ ಹಿತಾಸಕ್ತಿಗಳಿಗೆ ಪ್ರಾಶಸ್ತ್ಯನೀಡುವುದೇ ಹೆಚ್ಚೆನ್ನಬಹುದು. ಹಾಗಾಗಿ ಅಖಂಡ ಕರ್ನಾಟಕದ ಬೆಳವಣಿಗೆ ಇಳಿಮುಖವಾಗ ತೊಡಗಿದೆಯೆಂದರೆ ಅತ್ಯುಕ್ತಿಯಲ್ಲ. ಶಿಕ್ಷಣ, ವಿಜ್ಞಾನ, ಮಾಹಿತಿ ತಂತ್ರಜ್ಞಾನ ಮುಂತಾದ ಕೆಲವು ವಿಚಾರಗಳಲ್ಲಿ ಕರ್ನಾಟಕ ಸಾಕಷ್ಟು ಮುನ್ನಡೆಯಲ್ಲಿದೆ. ಆದರೆ ನೆರೆಯ ಪರಭಾಷಾ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ಪ್ರಗತಿ ಪೇಲವವಾಗಿ ಕಾಣಿಸುತ್ತಿದೆ. ತೀ.ನಂ.ಶ್ರೀ.ಯವರ 'ಕನ್ನಡಿಗನ ಕೊರಗು'ಅನ್ನು ನೆನಪಿಸಿಕೊಂಡರೆ ಅಂದಿನ ಆಶಯಗಳು ಅಷ್ಟೇನೂ ಈಡೇರಿವೆ ಎಂದು ಹೇಳಿಕೊಳ್ಳಲಾಗದು.**

**ಡಾ|| ಎಚ್. ಡಿ. ಚಂದ್ರಪ್ಪಗೌಡ**



ಪಡಿಸಲು ಒಂದೊಂದು ಭಾಷೆಯವರನ್ನು ಒಂದೇ ಪ್ರಾಂತ್ಯದ ಆಡಳಿತಕ್ಕೊಳಪಡಿಸಬೇಕೆಂಬ ಜನ ಸಾಮಾನ್ಯರ ಅಭಿಲಾಷೆಯಾಗಿದ್ದಲ್ಲದೆ, ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರ ಆಶಯವೂ ಆಗಿತ್ತು. ಅಂದಿನ ಕೇಂದ್ರದ ಆಡಳಿತದ ಚುಕ್ಕಾಣಿ ಹಿಡಿದವರು ಅದಕ್ಕೆ ಸಹಮತವಿದ್ದವರಾಗಿರಲಿಲ್ಲ. ಆಂಧ್ರದ ಪೊಟ್ಟಿ ಶ್ರೀರಾಮುಲು ಆ ಸಲುವಾಗಿ ಆಮರಣಾಂತ ಉಪವಾಸ ಗೈದು ಆತ್ಮಾಹುತಿ ಗೈದರು. ಆಗ ಕೇಂದ್ರ ದವರು ಮಣಿಯಲೇಬೇಕಾಯಿತು. ಭಾಷಾವಾರು ಪ್ರಾಂತ್ಯಗಳ ರಚನೆಗಾಗಿ ಜಸ್ಟಿಸ್ ಫಜ಼ಲ್ ಆಲಿಯವರ ನೇತೃತ್ವದಲ್ಲಿ ಸಮಿತಿ ರಚಿಸಿತು (೧೯೫೫). ಆ ಸಮಿತಿಯ ಶಿಫಾರಸಿನಂತೆ ಭಾರತಾದ್ಯಂತ ಹಲವು ಭಾಷಾವಾರು ಪ್ರಾಂತ್ಯಗಳು ನಿರ್ಮಾಣವಾದವು. ೧೯೫೬ರ ನವೆಂಬರ್ ೧ರಂದು **ವಿಶಾಲ ಮೈಸೂರು** ಅಭಿನಾಮದಲ್ಲಿ **ಉದಯವಾಯಿತು ನಮ್ಮ ಚೆಲುವ ಕನ್ನಡನಾಡು !**



ಕೈಮುಗಿಯೋದು.. ಕೈಜೋಡಿಸೋದು.. ಕೈಕೊಡೋದು.. ಕೈತುಂಬಾ ಗಳಸೋದು..! ಒಟ್ಟಾರೆ ರಾಜಕೀಯದಲ್ಲಿ ನಿಮಗೆ ಎರಡು ಕೈಗಳು ಏನೇನೂ ಸಾಲೊಲ್ಲಾ ಅನ್ಸುತ್ತೆ ಕಣ್ರೀ..!!

ಹಾಗೆ ಉದಯಿಸಿದ ನಮ್ಮ ಕರ್ನಾಟಕಕ್ಕೆ ಅರ್ಧ ಶತಮಾನವೇನೋ ಸಂದಿದೆ. ಆದರೆ ಎಂಟು ದಶಕಗಳ ಹಿಂದೆ ನಮ್ಮ ಹಿರಿಯ ಆಚಾರ್ಯ ಪುರುಷರೊಬ್ಬರು (ತೀ.ನಂ.ಶ್ರೀ.) ಕೊರಗಿದ್ದ ವಿಚಾರಗಳೇನಾದರೂ ನಿವಾರಣೆಯತ್ತ ಸಾಗಿವೆಯೇ ಎಂದು ಹಿಂದಿರುಗಿ ನೋಡೋಣ. **ಇಂದು ಕನ್ನಡದ ಸ್ಥಿತಿಗತಿ:** ಅರ್ಧಶತಮಾನದ ಹಿಂದೆ ಕನ್ನಡ ರಾಜ್ಯ ನಿರ್ಮಾಣವಾದಾಗ ಇಲ್ಲಿ ಕನ್ನಡವೇ ಪ್ರಥಮ ಹಾಗೂ ಪ್ರಧಾನ ಭಾಷೆಯಾಗುತ್ತದೆಂದು ಭಾವಿಸಿದ್ದೆವು; ನಮ್ಮ ಮಕ್ಕಳ ವಿದ್ಯಾಭ್ಯಾಸ ಮಾತೃಭಾಷೆ ಕನ್ನಡದ ಮೂಲಕವೇ ಆಗುತ್ತದೆಂದು ಆಶಿಸಿದ್ದೆವು. ಆಡಳಿತದ ಪ್ರಕ್ರಿಯೆಗಳೆಲ್ಲ ಕನ್ನಡದಲ್ಲೇ ಜರುಗುತ್ತವೆಂದು ಹಾತೊರೆಯುತ್ತಿದ್ದೆವು. ಆದರೆ ಹಿಂದಿನ ಐವತ್ತು ವರುಷಗಳಲ್ಲಿ ಆದ 'ಬದಲಾವಣೆ' ಯೆಂದರೆ ನಮ್ಮ ಪ್ರಾಥಮಿಕ ಶಾಲೆಗಳಲ್ಲೇ ಕನ್ನಡವನ್ನು ಉಳಿಸಿಕೊಳ್ಳಲು ವಿಫಲವಾದೆವು. ಆಡಳಿತದ ಕೇಂದ್ರ ಬಿಂದು ವಿಧಾನಸೌಧದಲ್ಲೇ ಕನ್ನಡ ಇನ್ನೂ ಜಿಗುಪ್ಸೆಪಡುವಂತಹ ಭಾಷೆಯಾಗಿ ಮುಂದುವರಿಯುತ್ತಿದೆ !

ದಕ್ಷಿಣ ಭಾರತದಲ್ಲಿ ತಮಿಳನ್ನು ಹೊರತುಪಡಿಸಿದರೆ ಕನ್ನಡವೇ ಅತಿ ಪ್ರಾಚೀನ ಭಾಷೆ ಎಂದು ಸಾಬೀತಾದ ವಿಚಾರ. ಕನ್ನಡ ಭಾಷೆಗೆ ಎರಡು ಸಾವಿರ ವರ್ಷಗಳ ಇತಿಹಾಸವಿದೆ ಎಂದು ಹೇಳಲಾಗುತ್ತಿತ್ತು. ಆದರೂ ಇತ್ತೀಚಿನ ಕೆಲವು ಆವಿಷ್ಕರಣಗಳಿಂದ ಜೈನ ಕವಿ ಕುಂದ ಕುಂದಾಚಾರ್ಯರ ಐದುಸಾವಿರ ವರ್ಷಗಳ ಹಿಂದಿನ ಅಪ್ರಕಟಿತ ಗ್ರಂಥ ವೊಂದರಲ್ಲಿ **'ಸರ್ವಭಾಷಾ ಮಹಿ ಕನ್ನಡ'** ಎಂಬ ಉಲ್ಲೇಖವಿದೆಯಂತೆ; ಹರಪ್ಪಾ ಮೊಹೆಂಜೋದಾರೋ ಕಾಲದ ನಾಣ್ಯಗಳ ಮೇಲೆ ಕನ್ನಡಭಾಷೆಯ ಅಕ್ಷರಗಳನ್ನು ಗುರುತಿಸಲಾಗಿದೆ. ಕನ್ನಡಭಾಷೆಯ ಪ್ರಾಚೀನತೆಗೆ ಇವೆಲ್ಲಾ ಆಧಾರವಾಗಬಲ್ಲವು. ಹಾಗೆ ನೋಡಿದರೆ ಇಂದು ಪ್ರಪಂಚದೆಲ್ಲೆಡೆ ಆವರಿಸಿಕೊಂಡಿರುವ ಇಂಗ್ಲಿಷ್ ಭಾಷೆ ತೀರಾ ಇತ್ತೀಚಿನದು. 'ಷೇಕ್ಸ್‌ಪಿಯರ್ ಮಹಾಕವಿ ಜನಿಸುವುದಕ್ಕೆ ಆರುನೂರು ವರ್ಷಗಳ ಮೊದಲೆ ನಮ್ಮ ಆದಿಕವಿ **ಪಂಪ** ಜನಿಸಿದ್ದ; ಪಂಪನ ಮಹಾಕಾವ್ಯ ಕ್ರಿ.ಶ. ೯೪೧ರಲ್ಲಿ ಹುಟ್ಟಿದರೆ ಷೇಕ್ಸ್‌ಪಿಯರನ ಮೊದಲ ಕೃತಿ ಹುಟ್ಟಿದ್ದು ಕ್ರಿ.ಶ.೧೫೯೩ರಲ್ಲಿ' (ಕುವೆಂಪು). ಕೇವಲ ಅಂಗೈ ಅಗಲದ ಬ್ರಿಟಿಷ್ ದ್ವೀಪವಾಸಿಗಳ ಭಾಷೆ ಆ ದಿನಗಳಲ್ಲಿ ಒಂದು ಉಪಭಾಷೆ ಆಗಿತ್ತು. ನಮ್ಮ ಸಂಸ್ಕೃತದಂತೆ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳು ಕಲಿಕೆ ಮತ್ತು ಅಧಿಕೃತಭಾಷೆಗಳಾಗಿದ್ದವು. ಆ ಪುಟ್ಟ ದ್ವೀಪದ ಜನರ ಅವಶ್ಯಕತೆಗಳನ್ನು ಒದಗಿಸಿಕೊಳ್ಳುವುದು ಅಂದು ದುಸ್ತರವಾಗಿರಬೇಕು. ಅವರಲ್ಲನೇಕರು 'ಹಸಿರು ಮೇವು', ಹುಡುಕುತ್ತಾ ಅಪಾಯ ಹಾಗೂ ಕಷ್ಟಕರ ಸಮುದ್ರಯಾನ ಮಾಡಲಾರಂಭಿಸಿದರು. ಅಂತಹ ಸಮುದ್ರಯಾನದ ಸಮಯದಲ್ಲೇ ಸಂಪದ್ಭರಿತ ಇಂಡಿಯಾದಂತಹ ಪ್ರದೇಶ ಅವರಿಗೆ ದೊರೆತದ್ದು. ಅವರು ಹೋದೆಡೆಗಳಲ್ಲೆಲ್ಲ ಆ ಪ್ರದೇಶಗಳನ್ನು ತಮ್ಮ ಶಕ್ತಿ ಸಾಮರ್ಥ್ಯ, ಕುಟಿಲತೆಗಳಿಂದ ವಶಪಡಿಸಿಕೊಂಡರು. ಅದರಿಂದಾಗಿಯೆ ಅವರ ಭಾಷೆ ಇಂಗ್ಲಿಷ್ ಅಲ್ಲೆಲ್ಲಾ ವ್ಯಾಪಕವಾಗಿ ಪ್ರಸಾರವಾಯಿತು. ಅದೀಗ ವಿಶ್ವವ್ಯಾಪಿಯಾಗಿರುವುದು ಆ ಭಾಷೆಯ ಶ್ರೇಷ್ಠತೆಯಿಂದ ಮಾತ್ರವಲ್ಲ; ಇಂಗ್ಲಿಷ್ ಮಾತಾಡುವ ಜನರ ಶಕ್ತಿ ಸಾಮರ್ಥ್ಯ ಹಾಗೂ ಸಾಹಸಪ್ರವೃತ್ತಿಗಳಿಂದ ಎಂದರೆ ಅತಿಶಯೋಕ್ತಿಯಲ್ಲ.

ಕನ್ನಡವೂ ಸೇರಿದಂತೆ ಇತರ ಭಾರತೀಯ ಭಾಷೆಗಳು ಶ್ರೇಷ್ಠ ಹಾಗೂ ಸಮೃದ್ಧವಾಗಿ ಬೆಳೆದಿದ್ದರೂ, ಅಂತಹ ಸಾಹಸ ಪ್ರವೃತ್ತಿ ಇಲ್ಲದಿದ್ದುದರಿಂದ ಅವು ಹೊರಗಡೆ ಅಷ್ಟಾಗಿ ಪ್ರಸಾರವಾಗಲಿಲ್ಲ. ಆಧುನಿಕ ಕನ್ನಡಭಾಷೆ ಮತ್ತು ಸಾಹಿತ್ಯ ಪ್ರಕಾರಗಳು ಈಗ ಒಂದು ಶತಮಾನದಿಂದ ಅತ್ಯುಚ್ಛ್ರಾಯ ಸ್ಥಿತಿ ತಲುಪಿವೆ. 'ಕನ್ನಡ ಸಾಹಿತ್ಯ ಸಾಧಿಸಿರುವ ಸಂಪತ್ತು, ಸಕಾರಣವಾಗಿ ನಿಸ್ಸಂಕೋಚವಾಗಿ ಹೆಮ್ಮೆಪಟ್ಟುಕೊಳ್ಳುವಂತಹ ಕೃತಿಗಳೂ ಮೈದೋರಿವೆ. ಅಷ್ಟೇ ಅಲ್ಲ; ಪೂರ್ಣ ಪರಿಣತ ಸ್ಥಿತಿಗೇರಿರುವ ಯಾವ ಭಾಷೆಯ ಸಾಹಿತ್ಯಕ್ಕಾದರೂ ಕೋಡು ಮೂಡಿಸುವ ಕೃತಿಗಳೂ, ಕವನ, ಕಾದಂಬರಿ, ಸಣ್ಣಕತೆ, ನಾಟಕ, ಕಾವ್ಯ ಮಹಾಕಾವ್ಯಾದಿ ಪ್ರಕಾರಗಳಲ್ಲಿ ಹೊರಹೊಮ್ಮಿವೆ' (ಕುವೆಂಪು). ಭಾರತೀಯ ಸಾಹಿತ್ಯದ ಮೌಲ್ಯಮಾಪಕವೆನ್ನಬಹುದಾದ ಏಳು **ಜ್ಞಾನಪೀಠ** ಪ್ರಶಸ್ತಿಗಳನ್ನು ತನ್ನ ಮುಡಿಗೇರಿಸಿಕೊಂಡಿದೆ. (ಹಿಂದಿ ಭಾಷೆ ಮಾತ್ರ ಒಂದೆರಡು ಪ್ರಶಸ್ತಿಗಳನ್ನು ಹೆಚ್ಚಾಗಿ ಪಡೆದುಕೊಂಡಿರಬಹುದು.) ಕನ್ನಡದ ಸಾಧನೆ ಇಷ್ಟಿದ್ದರೂ ಒಂದೆರಡು ವರ್ಷಗಳ ಹಿಂದೆ ಭಾರತ ಸರ್ಕಾರವು ರಾಜಕೀಯ ಪ್ರೇರಿತವಾಗಿ ತಮಿಳಿಗೆ ಮಾತ್ರ **ಅಭಿಜಾತ ಭಾಷೆ/ಪ್ರಾಚೀನ ಭಾಷೆ** ಎಂಬ ಸ್ಥಾನ ಮಾನವನ್ನು ನೀಡಿದೆ. ಆದರೆ ನಮ್ಮವರ ಮೆದು ಧೋರಣೆಗಳಿಂದಾಗಿ ಆ ದಿಸೆಯಲ್ಲಿ ಏನೂ ಮಾಡಲಾಗಿಲ್ಲ.

ಇಷ್ಟು ಮಾತ್ರವಲ್ಲ, ಪ್ರಪಂಚದೆಲ್ಲೆಡೆ ಪ್ರಚಲಿತವಿರುವ ೬೭೫೦ ಭಾಷೆಗಳ ಸಮೂಹದಲ್ಲಿ ಕನ್ನಡವು ೨೭ನೇ ಪ್ರಮುಖ ಭಾಷೆಯೆಂದು ಪರಿಗಣಿತವಾಗಿದೆ. ಆದರೆ ಇತ್ತೀಚಿನ ವರದಿಗಳಂತೆ ಪ್ರಪಂಚದೆಲ್ಲೆಡೆ ಅಳುವಿನ ಅಂಚಿನಲ್ಲಿರುವ ಭಾಷೆಗಳಲ್ಲಿ ಕನ್ನಡವೂ ಒಂದಾಗಿದೆಯೆಂದರೆ ನಂಬಲು ಸಾಧ್ಯ! ಬಹುಶಃ ಕನ್ನಡಕ್ಕೆ ಮುಂದೊದಗಬಹುದಾದ ಇಂತಹ ಪರಿಸ್ಥಿತಿಯನ್ನು ೧೯೩೫ರಷ್ಟು ಹಿಂದೆಯೆ ಭವಿಷ್ಯವಾಣಿಯನ್ನು ದಾಖಲಿಸಿದ್ದರು, ಮುಂದೆ ರಾಷ್ಟ್ರಕವಿಯಾದ ಕುವೆಂಪು ಅವರು.

*ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ*
*ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ!*
*ರಾಜನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು,*
*ದೇವನುಡಿಯೆಂದೊಂದು ಹತ್ತಿ ಜಗ್ಗಿ*
*ನಿರಿ ನಿಟಿಲು ನಿಟಿಲೆಂದು ಮುದಿ ಮೂಳೆ ಮುರಿಯುತ್ತಿದೆ,*
*ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ!*
*ಕೂಗಿಕೊಳ್ಳಲು ಕೂಡ ಬಲವಿಲ್ಲ: ಮಕ್ಕಳೇ*
*ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ!*

– **ಕುವೆಂಪು** (ಸಮಗ್ರ ಕಾವ್ಯ ಸಂಪುಟ ೧, ಪು. ೩೮೫.)

ಇಂತಹ ಪರಿಸ್ಥಿತಿಗೆ ಕಾರಣಗಳೇನಿರಬಹುದು ? ವಿಪರೀತ ಹಾಗೂ ಅನಗತ್ಯವಾಗಿ ಇಂಗ್ಲಿಷಿನತ್ತ ನಮಗಿರುವ ಒಲವು ಪ್ರಮುಖವಾದುದು. ಇಂದಿನ ಶಿಶುವಿಹಾರ ಪ್ರಾಥಮಿಕ ಶಾಲಾಹಂತದಿಂದ ಪದವಿ (ಡಿಗ್ರಿ)ಹಂತಗಳವರೆಗೂ ಇಂಗ್ಲಿಷಿನಲ್ಲೇ ಬೋಧನೆಯಾಗುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಮೊದಲಿಗೆ ಕಾನ್ವೆಂಟ್ ಶಾಲೆಗಳಲ್ಲಿ ಮಾತ್ರ ಇಂಗ್ಲಿಷ್ ಮಾಧ್ಯಮವಾಗಿದ್ದು ಈಗ ಎಲ್ಲಾ ಶಿಶುವಿಹಾರಗಳಲ್ಲೂ ಅದೇ ಪರಿಪಾಠ ಶುರುವಾಗಿದೆ. ತಾಯ್ನುಡಿಯಲ್ಲಿ ತೊದಲಲಾರಂಭಿಸಿದ ಕಂದಮ್ಮಗಳಿಗೆ ನೀರಿಳಿಯದ ಗಂಟಲಲ್ಲಿ **ABCD, One Two Three, Cat Mat Goat**ಗಳೆಂಬ ಕಡುಬು ತುರುಕುತ್ತಿದ್ದಾರೆ. ಅದರಿಂದಾಗಿ ಇಂದಿನ ಬಹುಪಾಲು ಮಕ್ಕಳು ಅರ್ಧಂಬರ್ಧ ಇಂಗ್ಲಿಷಿನಲ್ಲೆ ಮಾತಾಡುವುದು ರೂಢಿಯಾಗುತ್ತಿದೆ. ಈ ಶಾಲೆಗಳ ವ್ಯವಸ್ಥಾಪಕರೇ ಅಲ್ಲದೆ ಪೋಷಕರೂ ಸಹ ಅದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿರುವುದು ದುರದೃಷ್ಟಕರ.

ಪ್ರಸ್ತುತ ಸಾಲಿನಲ್ಲಿ ಪ್ರಾಥಮಿಕ ಶಾಲೆಗಳವರು ಕಳೆದ ಐದಾರು ವರ್ಷಗಳಿಂದ ಕನ್ನಡ ಮಾಧ್ಯಮದಲ್ಲೇ ಕಲಿಸುವುದಾಗಿ ಸರ್ಕಾರಕ್ಕೆ ಮುಚ್ಚಳಿಕೆ ಬರೆದುಕೊಟ್ಟು, ಗೋಪ್ಯವಾಗಿ ಇಂಗ್ಲಿಷ್‌ನಲ್ಲೆ ಕಲಿಸುತ್ತಿದ್ದುದು ಬಹಿರಂಗವಾಗಿಬಿಟ್ಟಿತು! ಅಂತಹ ೨೯೧೧ ಶಾಲೆಗಳು

ಅಕ್ರಮ ನಡೆಸುತ್ತಿದ್ದವೆಂದರೆ ಆ ಮೋಸದ ಕೃತ್ಯದಲ್ಲಿ ಯಾರ್‍ಯಾರೋ ಸಹಕರಿಸುತ್ತಿದ್ದರೆಂಬುದು ನಿಗೂಢವಾಗೇನೂ ಇರಲಿಲ್ಲ. ಇಡೀ ವ್ಯವಸ್ಥೆಯೇ ಜಾಣಕುರುಡನಂತೆ ನಟಿಸಿರಬೇಕು!

ಮೇಲ್ನೋಟಕ್ಕೆ **ಜಾಗತೀಕರಣ** ಕನ್ನಡದಂತಹ ಪ್ರಾಚೀನ ಹಾಗೂ ಸಮೃದ್ಧ ಭಾಷೆಗೆ ಧಕ್ಕೆ ತರುವುದೆಂದು ಭಾವಿಸಲಾಗದು. ಇದೀಗ ಸರ್ವಾಂತರ್ಯಾಮಿಯಾಗುತ್ತಿರುವ **ಮಾಹಿತಿ ತಂತ್ರಜ್ಞಾನ** (ಐಟಿ)ದ ಪ್ರಸರಣ ವಾಹಕ ಇಂಗ್ಲಿಷೇ ಆಗಿದೆಯಷ್ಟೆ. ಕರ್ನಾಟಕ, ಅದರಲ್ಲೂ ಬೆಂಗಳೂರು ಅದರ ಪ್ರಮುಖ ಕೇಂದ್ರವಾಗಿದೆಯಷ್ಟೆ. ಅದೊಂದು ಅಪೇಕ್ಷಣೀಯ ಬೆಳವಣಿಗೆ ಎಂದುಕೊಳ್ಳಬಹುದಾದರೂ ದೇಶದೆಲ್ಲೆಡೆ ಜನ ಮಾತೃಭಾಷೆಯನ್ನು ಕಡೆಗಣಿಸಿ ಇಂಗ್ಲಿಷ್ ಕಲಿಕೆಗೆ ಮುಗಿಬೀಳುತ್ತಿರುವುದು ಅತಿಯಾಗತೊಡಗಿದೆ. ವಿಪರ್ಯಾಸದ ಸಂಗತಿಯೆಂದರೆ ಆ ಕ್ಷೇತ್ರದಲ್ಲಿ ಕನ್ನಡಿಗರೇ ಮುಂಚೂಯಣಿಯಲ್ಲಿ ಇರುವುದಾದರೂ ಕನ್ನಡಭಾಷೆಯಲ್ಲಿ ಆ ಕ್ಷೇತ್ರ ಅಭಿವೃದ್ಧಿಪಡಿಸಲು ಪ್ರಯತ್ನಗಳಾಗದಿರುವುದು. ನೆರೆಯ ತಮಿಳುನಾಡಿನವರು ಈ ದಿಸೆಯಲ್ಲಿ ಬಹಳಷ್ಟು ಮುಂದಾಗಿದ್ದಾರಂತೆ. ಇತ್ತೀಚೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಕನ್ನಡದಲ್ಲಿ ಐಟಿ ಕ್ಷೇತ್ರ ಅಭಿವೃದ್ಧಿಯಾಗಲು **ಕುವೆಂಪು ತಂತ್ರಾಂಶ**ವೆಂಬ ಪರಿಕರಣಗಳನ್ನು ಬಿಡುಗಡೆ ಮಾಡಿರುವುದೊಂದು ಆಶಾಕಿರಣವೆನ್ನಬಹುದು.

ಹಿಂದುಸ್ಥಾನಿ ಹಾಗೂ ಕರ್ನಾಟಿಕ್ ಸಂಗೀತ ಪದ್ಧತಿಗಳು ಭಾರತದಲ್ಲಿ ಪ್ರಚಲಿತವಿರುವ ಎರಡು ಪ್ರಕಾರಗಳು. ಕರ್ನಾಟಕ ಸಂಗೀತ ಪ್ರಕಾರ ಕನ್ನಡದವರು ಮಾತ್ರವಲ್ಲದೆ ತಮಿಳು, ತೆಲುಗು, ಮಲೆಯಾಳ ಭಾಷೆಗಳವರೂ ಹಾಡುವ ಪ್ರಕಾರಗಳೆ. ನಮ್ಮ ಪುರಂದರದಾಸರೇ ಅದರ ಆದ್ಯ ಪ್ರವರ್ತಕರು. ಆದರೂ ಇತ್ತೀಚಿನ ದಿನಗಳಲ್ಲಿ ಕರ್ನಾಟಕದವರಲ್ಲದ ಕೆಲವು ಸಂಗೀತಗಾರರು ಅವರು ಹಾಡುವುದು 'ದಾಕ್ಷಿಣಾತ್ಯ ಸಂಗೀತ' ಪದ್ಧತಿ, ಕರ್ನಾಟಕ ಸಂಗೀತವಲ್ಲ ಎಂದು ಅಪಸ್ವರವೆತ್ತುತ್ತಿದ್ದಾರೆ. ಅದು ಕೂಡ ರಾಜಕೀಯ ಪ್ರೇರಿತವಾದದ್ದೇ. ವಿಪರ್ಯಾಸದ ಸಂಗತಿಯೆಂದರೆ ಕರ್ನಾಟಕದಲ್ಲಿ ಜರುಗುವ ಪ್ರತಿಷ್ಠಿತ ಸಂಗೀತ ಕಛೇರಿ/ಸಮಾರಂಭಗಳಿಗೆ ಅಂತಹವರನ್ನು ಆಹ್ವಾನಿಸುವುದೇ ಹೆಚ್ಚು; ಕನ್ನಡದ ಕೃತಿಗಳನ್ನು ಕಡೆಗಣಿಸಿ ಇತರ ಭಾಷಾ ಕೃತಿಗಳಿಗೆ ಅವರು ಪ್ರಾಶಸ್ತ್ಯ ಕೊಟ್ಟು ಹಾಡುತ್ತಾರೆ; ನಮ್ಮವರು ಅವುಗಳನ್ನೇ ಮೆಚ್ಚಿ ತಲೆದೂಗಿ ತಾಳ ಹಾಕುತ್ತಿರುತ್ತಾರೆ. ಎಷ್ಟಾದರೂ ನಾವು ಅಂತಹ ಸ್ವಾಭಿಮಾನಿಗಳಲ್ಲವಲ್ಲ! ಬಹುಶಃ ಒಂಬತ್ತನೇ ಶತಮಾನದ ಕವಿ ಚಕ್ರವರ್ತಿ ಕನ್ನಡಿಗರ ವ್ಯಕ್ತಿತ್ವ ಕುರಿತು ಹೇಳಿದ '**ಅಭಿಜನರ್ಕಳ್, ಗುಣಿಗಳ್, ಅತ್ಯುಗ್ರರ್, ಗಂಭೀರ ಚಿತ್ತರ್, ವಿವೇಕಿಗಳ್**' (ಕವಿರಾಜಮಾರ್ಗ) ಮುಂದುವರಿಸಿಕೊಂಡು ಬರುತ್ತಿದ್ದೇವಷ್ಟೆ!

**ಆಡಳಿತದಲ್ಲಿ ಕನ್ನಡ:** ಯಾವುದೇ ಸರ್ಕಾರ ಅದೆಷ್ಟು ಜನೋಪಯೋಗಿ ಯೋಜನೆ ಇಲ್ಲವೆ ಕಾನೂನುಗಳನ್ನು ರೂಪಿಸಿದರೂ ಅವೆಲ್ಲಾ ಜನರಾಡುವ ಭಾಷೆಯಲ್ಲೆ ಸಂವಹನವಾಗಿರದಿದ್ದರೆ ಅವು ಫಲಾನುಭವಿಗಳಿಗೆ ತಲುಪುವುದು ಅಸಾಧ್ಯ. ಭಾಷಾವಾರು ಪ್ರಾಂತ್ಯಗಳ ರಚನೆಯಾದ ಮೇಲೆ ಬಹುಶಃ ಕರ್ನಾಟಕವನ್ನು ಬಿಟ್ಟರೆ, ಉಳಿದೆಲ್ಲಾ ರಾಜ್ಯಗಳಲ್ಲಿ ಅವರವರ ನುಡಿಗಳಲ್ಲೇ ಆಡಳಿತ ಪ್ರಕ್ರಿಯೆ ಜರುಗುತ್ತಿದೆ. ನಿಜ, ಅಂದು ಕರ್ನಾಟಕದ ಪರಿಸ್ಥಿತಿ ಸ್ವಲ್ಪ ವಿಭಿನ್ನವಾಗಿತ್ತು. ಹಳೇ ಮೈಸೂರು ಪ್ರದೇಶದಲ್ಲಿ ಕೆಳಹಂತದಲ್ಲಿ ಸ್ವಲ್ಪಮಟ್ಟಿಗೆ ಕನ್ನಡದಲ್ಲಿ ಜರುಗುತ್ತಿತ್ತು. ವಿಶಾಲ ಮೈಸೂರಿನೊಡನೆ ಸೇರ್ಪಡೆಯಾದ ತಮಿಳು, ತೆಲುಗು, ಮರಾಠಿ ಹಾಗೂ ಉರ್ದು ಭಾಷಿಕ ಅಧಿಕಾರಿ ವರ್ಗದವರು ಕನ್ನಡದಲ್ಲಿ ವ್ಯವಹರಿಸುವುದು ತೊಡಕಾಗುತ್ತಿತ್ತು. ಆದರೂ ಸರ್ಕಾರದವರೇ ಆಡಳಿತವನ್ನು ಕನ್ನಡದತ್ತ ತಿರುಗಿಸಲು ಕನ್ನಡದಲ್ಲಿ ಸೂಕ್ತ ಸಾಹಿತ್ಯ, ಮಾರ್ಗದರ್ಶಿ ಕೃತಿಗಳು, ತರಬೇತಿ ವ್ಯವಸ್ಥೆಗಳು, ಸಾವಿರಾರು ಸುತ್ತೋಲೆಗಳು, ಕನ್ನಡ ಕಾವಲು ಸಮಿತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಗೋಕಾಕ್ ಚಳುವಳಿಗಳಂತಹ ಉಗ್ರಹೋರಾಟಗಳೆಲ್ಲಾ ಜರುಗಿದವು. ಬಹುಶಃ ತಾಲ್ಲೂಕು, ಜಿಲ್ಲಾ ಮಟ್ಟದವರೆಗಿನ ಕಛೇರಿಗಳಲ್ಲಿ ಈ ದಿಸೆಯಲ್ಲಿ ಬಹಳಷ್ಟು ಯಶಸ್ಸು ದೊರೆತಿದೆಯೆನ್ನಬಹುದು. ಆದರೆ ನಾಡಿನ ಆಡಳಿತದ ನಿರ್ದೇಶನ ಕೇಂದ್ರ ಬಿಂದುವಾಗಿರುವ ವಿಧಾನಸೌಧದಲ್ಲಿ ಕನ್ನಡ ಅಷ್ಟಾಗಿ ಅನುಸರಣೆಯಾಗುತ್ತಿಲ್ಲವೆಂಬುದು ಗುಟ್ಟಾಗೇನೂ ಉಳಿದಿಲ್ಲ. ಅಲ್ಲಿ ಬಹುಪಾಲು ಹೊರರಾಜ್ಯಗಳಿಂದ ನೇಮಕವಾಗಿ ಬಂದಿರುವ ಅಖಿಲ ಭಾರತಸೇವಾ ವ್ಯವಸ್ಥೆಯ ಉನ್ನತ ಅಧಿಕಾರಿ ವರ್ಗದವರು ಈ ಬಗ್ಗೆ ಪೂರ್ಣ ಸಹಕಾರ ನೀಡುತ್ತಿಲ್ಲವೆಂಬ ಅಭಿಪ್ರಾಯವಿದೆ.

## ಹೆಣಿಗೆ

ಬಾಳು ನೂರಾರು ಸಂಗತಿಗಳ
ಸುಂದರ ಹೆಣಿಗೆ.

ಮನೆಯ ದಾರದ ಜತೆಗೆ
ಬೀದಿ ಗೆಳೆಯರ ನೂಲು
ಶಾಲೆ ಕಲಿಕೆಯ ಎಳೆ
ಒಂದರೊಳಗೊಂದು ಹೆಣೆದು
ಬಾಲ್ಯದ ಪಯಣ.

ಯವ್ವನದ ಕುಣಿತಕೆ
ಕಾಲೇಜು, ಸ್ನೇಹಿತರು, ಸಿನಿಮಾ
ಸಹವಾಸವ ಕೂಡಿ
ರೋಮಾಂಚನದ ನೂಲು
ಕನಸು–ಮನಸ್ಸಿನ ನೇಯ್ಗೆ.

ಪ್ರೀತಿ–ಪ್ರೇಮದ ಎಳೆ
ವಿದ್ಯೆ – ಉದ್ಯೋಗ – ಸಂಸಾರ
ನೋವು–ನಲಿವಿನ ಜತೆ ಸೇರಿ
ಸಿಕ್ಕುಸಿಕ್ಕಾಗಿ ಸಿಕ್ಕಿಕೊಳ್ಳುವ ಬಗೆ
ಅನುಭವದ ಪಾಕ.

ಆಕಸ್ಮಿಕಗಳ ನೂಲು
ಬದುಕ ಮೂಲ ಎಳೆಗೆ
ಡಿಕ್ಕಿ ಹೊಡೆದು, ಅಸ್ತವ್ಯಸ್ತ,
ಕೆಲಕಾಲ ಸಿಕ್ಕುಬಿಡಿಸಲು
ಹೆಣಗಾಟ
ಆದರೂ...
ಬಾಳು ಜೀವಕಳೆಯಿಂದ ಕೂಡಿದ
ಸುಂದರ ಮಾಂತ್ರಿಕ ಹೆಣಿಗೆ.



**ಡಾ|| ಸುಜಾತ ಲಕ್ಷ್ಮೀಪುರ**
ಸಂಖ್ಯೆ ೧೭೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರಂ
ಬೆಂಗಳೂರು - ೫೬೦ ೦೮೪

ಅಂತಹವರು ತಮಿಳುನಾಡು ಕೇರಳಗಳಂತಹ ರಾಜ್ಯಗಳಲ್ಲಿ ಅದ್ಹೇಗೆ ಅಲ್ಲಿಯ ಭಾಷೆಗಳನ್ನು ಅಧಿಕಾರಿಗಳಿಗೆ ಕಲಿಸುತ್ತಾರೆಂಬುದರ ಮರ್ಮ ನಮ್ಮವರಿಗಾಗದಿರುವುದು ನಿಗೂಢವೆ. ಹೊರಭಾಷಾ ಅಧಿಕಾರಿಗಳು ನಮ್ಮ ರಾಜ್ಯವನ್ನರಸಿ ಬರುವಾಗ ಮೊದಲೇ ಕನ್ನಡ ಕಲಿತಿರಬೇಕು. ಇಲ್ಲವೆ ಇಲ್ಲಿ ವರದಿ ಮಾಡಿಕೊಂಡ ನಂತರ ಒಂದು ನಿಗದಿತ ಅವಧಿಯಲ್ಲಿ ಅವರು ಕನ್ನಡ ಕಲಿಯದಿದ್ದರೆ ವಾಪಸು ಕಳಿಸುವಂತೆ ಕಾನೂನು ಮಾಡಲೇಬೇಕು.

ಇತರ ಭಾಷಾ ಜನಸಮುದಾಯದವರು ಹೊರಗಿನವರೊಡನೆ ಸಂವಹನ ಮಾಡುವಾಗ ಕನ್ನಡಿಗರು ಅವರಿಗೆ ಹೊರಗಿನವರ ಭಾಷೆಯ ಪರಿಚಯವಿದ್ದರೂ, ತಮ್ಮ ಭಾಷೆಯಲ್ಲೇ ಸಂವಾದ ಆರಂಭಿಸುವುದನ್ನು ನೋಡಬಹುದು. ಆದರೆ ಬಹುಪಾಲು ಕನ್ನಡಿಗರು ಅಂತಹ ಸಂದರ್ಭಗಳಲ್ಲಿ ಅರ್ಧಂಬರ್ಧ ಗೊತ್ತಿರಬಹುದಾದ ಹೊರಗಿನವರ ಇಲ್ಲವೇ ಇಂಗ್ಲಿಷ್‌ನಲ್ಲೇ ಸಂಭಾಷಣೆಗೆ ತೊಡಗುವುದು ಸರ್ವೇಸಾಮಾನ್ಯವಾಗಿರುತ್ತದೆ. ಅದೇಕೊ ನಮ್ಮವರಿಗೆ ಮಾತ್ರ ಭಾಷೆಯ ಬಳಕೆ ಒಂದು ರೀತಿಯ ಕೀಳರಿಮೆ ಹುಟ್ಟಿಸುತ್ತದೇನೋ ; ಅದು ನಮ್ಮ ನುಡಿಯ ಬಗೆಗೆ ಸ್ವಾಭಿಮಾನವಿಲ್ಲದಿರುವುದರ ಪ್ರತೀಕ.

ಇತ್ತೀಚಿಗೆ ಶಿಶುವಿಹಾರ ಪ್ರಾಥಮಿಕ ಶಾಲಾ ಹಂತಗಳಿಂದಲೇ ಇಂಗ್ಲಿಷ್ ಕಲಿಕೆ ಮುಂದುವರಿಯುತ್ತಿರುವುದರಿಂದ, ಪುಟ್ಟ ಮಕ್ಕಳು ಮನೆಯಲ್ಲೂ ಸಹ ಸರಿಯಾಗಿ ಅರ್ಥವಾಗದಿದ್ದರೂ ಇಂಗ್ಲಿಷಿನಲ್ಲೇ ಮಾತಾಡುವುದು ಸಾಮಾನ್ಯವಾಗಿದೆ. ಬಹುಪಾಲು ತಂದೆ ತಾಯಿಗಳೂ ಸಹ ಮಕ್ಕಳು ಇಂಗ್ಲಿಷಿನಲ್ಲಿ 'ಹಿ ಕೋರಿ ಡಿ ಕೋರಿ ಡಾಕ್'... ಓಲ್ಡ್ ಮದರ್ ಹಬ್ಬರ್ಡ್‌ಗಳನ್ನು ಗಿಣಿಪಾಠದಂತೆ ಉಲಿಯುವುದರಿಂದ ಹರ್ಷಿತರಾಗುತ್ತಾರೆ. ಕನ್ನಡದ 'ಬಣ್ಣದ ತಗಡಿನ ತುತ್ತೂರಿ...' 'ನಾಯಿಮರಿ ನಾಯಿಮರಿ ತಿಂಡಿಬೇಕೇ', 'ಕುಣಿಯೋಣು ಬಾರ,' 'ಬೊಮ್ಮನಹಳ್ಳಿಯ ಕಿಂದರಜೋಗಿ'ಯಂತಹ ಶಿಶುಗೀತೆಗಳೂ ಕರ್ಣಾನಂದಕರವಾಗುವುದಿಲ್ಲ; ಆಪ್ಯಾಯಮಾನವಾಗಿರುವುದು ಇಲ್ಲ! ಹಾಗೆ ನೋಡಿದರೆ ಕನ್ನಡದಲ್ಲಿ ಮಕ್ಕಳು ಅರ್ಥಮಾಡಿಕೊಂಡು ನಕ್ಕು ನಲಿಯಬಹುದಾದ ಶಿಶುಗೀತೆಗಳಿಗೇನೂ ಬರವಿಲ್ಲ. ಪ್ರಸ್ತುತ ಬಹುಪಾಲು ಶಿಶುವಿಹಾರ/ಕಿಂಡರ್ ಗಾರ್ಟನ್ನುಗಳನ್ನು ನಡೆಸುವವರು ಖಾಸಗಿಯವರು; ಸರ್ಕಾರ ಅವರ ಕಾರ್ಯವಿಧಾನಗಳ ಮೇಲೆ ಯಾವುದೇ ರೀತಿಯ ನಿಯಂತ್ರಣದ ಅಧಿಕಾರ ಹೊಂದಿಲ್ಲ. ಇಲ್ಲೊಂದು ವಿಪರ್ಯಾಸವೂ ಸೃಷ್ಟಿಯಾಗಿದೆ. ಇದೀಗ ಪ್ರಾಥಮಿಕ ಒಂದನೆಯ ತರಗತಿಯಿಂದಲೇ ಕನ್ನಡ ಮಾಧ್ಯಮದಲ್ಲಿ ಕಲಿಸುವುದನ್ನು ಕಡ್ಡಾಯ ಮಾಡಿದೆಯಷ್ಟೆ. ಹಾಗೆಯೇ ಇಂಗ್ಲಿಷನ್ನು ಅದೇ ಹಂತದಲ್ಲಿ ಒಂದು ಭಾಷೆಯಾಗಿ ಬೋಧಿಸುವುದನ್ನು ಕಡ್ಡಾಯ ಮಾಡಿದೆ. ಹೀಗೆ ಶಿಶುವಿಹಾರಗಳಲ್ಲಿ ಅಷ್ಟೋ ಇಷ್ಟೋ ಪ್ರಾಥಮಿಕ ಶಾಲೆಯಲ್ಲಿ ಇಂಗ್ಲಿಷ್ ಕಲಿತ ಮಕ್ಕಳು ಅದೇ ಮೊದಲ ಬಾರಿಗೆ ಕನ್ನಡದಲ್ಲಿ ಅಭ್ಯಾಸಕ್ಕಿಳಿಯುವ ವಿಚಿತ್ರ ಪ್ರಮೇಯ ಉಂಟಾಗುತ್ತದೆ. ವಾಸ್ತವವಾಗಿ ಅದು ತಿರುಗು-ಮುರುಗು ಆಗಬೇಕಿತ್ತಲ್ಲವೆ ? ಆದುದರಿಂದ ಈ ಪರಿಸ್ಥಿತಿಯನ್ನು ಬದಲಿಸಲು ಕೇವಲ ಸರ್ಕಾರವೇ ಅಲ್ಲದೆ ಕನ್ನಡದ ಸಾರಸ್ವತಲೋಕ ಪ್ರಯತ್ನಕ್ಕಿಳಿಯಬೇಕಿದೆ. ಹೀಗೆ ಕನ್ನಡ ನಾಡಿನಲ್ಲಿ ಕನ್ನಡ ಭಾಷೆ ಆಳವಾಗಿ, ವಿಸ್ತಾರವಾಗಿ, ಸರ್ವಾಂತರ್ಯಾಮಿಯಾಗಿ ಬೆಳೆಯಲು ಅವಕಾಶಗಳಿಲ್ಲದಿರುವಾಗ, ಕೇವಲ ಅನಕ್ಷರಸ್ಥ ಹಳ್ಳಿಗಾಡಿನ ಜನರ ಭಾಷೆಯಾಗಿ ಉಳಿದುಕೊಂಡಿದೆ. ಅದರ ಸಾಹಿತ್ಯ ಅದೆಷ್ಟು ಶ್ರೇಷ್ಠಮಟ್ಟದ್ದಾಗಿದ್ದರೂ ಅದು ಬಾಹ್ಯ ಜಗತ್ತಿಗೆ ಪರಿಚಯವಾಗುವುದಾದರೂ ಹೇಗೆ ? ಅಲ್ಲದೆ ಮುಂದಿನ ದಿನಗಳಲ್ಲಿ ವಿನಾಶವಾಗದೆ ಬೇರೇನು ದಾರಿ ಇದೆ ?

**ಕನ್ನಡದ ನೆಲ** : ಒಂಬತ್ತನೇ ಶತಮಾನದ **ಕವಿರಾಜಮಾರ್ಗ**ದಲ್ಲಿ ದಾಖಲಾದ ಕಾವೇರಿಯಿಂದ ಗೋದಾವರಿ...ವರೆಗೆ ವಿಸ್ತರಿಸಿದ್ದ ಕನ್ನಡ ಏನಾಯಿತೆಂದು ಈಗ ಕೊರಗುವುದರಲ್ಲಿ ಅರ್ಥವಿಲ್ಲ. ಆದರೆ ೧೯೫೬ರ ರಾಜ್ಯ ಪುನರ್ವಿಂಗಡನೆಯ ನಂತರ ನಮ್ಮ ಪಾಲಿಗೆ ಬಂದ ಹಾಗೂ ಬರಲೇಬೇಕಾಗಿದ್ದ ನೆಲದ ಬಗ್ಗೆ ಏನು ನಡೆಯುತ್ತಿದೆಯೆಂಬುದರತ್ತ ತುರ್ತಾಗಿ ಗಮನಹರಿಸಲೇಬೇಕೆನಿಸುತ್ತದೆ. ಪುನರ್ವಿಂಗಡನಾ ಸಮಿತಿಯವರು ಕರ್ನಾಟಕಕ್ಕೆ ಸೇರಿಸಿದ್ದ ಬೆಳಗಾವಿ ನಗರವನ್ನು ಮಹಾರಾಷ್ಟ್ರೀಯರು ಇಂದಿಗೂ ತಮಗೆ ಸೇರಬೇಕೆಂದು ಹೋರಾಟ ನಡೆಸುತ್ತಲೇ ಇದ್ದಾರೆ. ಆ ತಕರಾರನ್ನು ಇತ್ಯರ್ಥ ಮಾಡಲು ನೇಮಕವಾದ ಮಹಾಜನ್ ಆಯೋಗ, ಲೋಕಸಭೆ, ಮುಂತಾದವೆಲ್ಲಾ ಕರ್ನಾಟಕದ ವಾದಗಳಿಗೆ ಸಹಮತ ವ್ಯಕ್ತಪಡಿಸಿದ್ದವು ; ಆದರೆ ಕೇಂದ್ರದಲ್ಲಿ ಪ್ರಬಲ ವರ್ಚಸ್ಸು ಗಳಿಸಿಕೊಂಡಿರುವ ಮಹಾರಾಷ್ಟ್ರೀಯರ ಒತ್ತಡದ ತಂತ್ರಗಳಿಂದ ಅವೆಲ್ಲ ಸಫಲವಾಗದಂತಾಗಿವೆ. ನ್ಯಾಯಯುತವಾಗಿ ಕರ್ನಾಟಕದೊಳಗೆ ಸೇರ್ಪಡೆಯಾಗಬೇಕಾಗಿದ್ದ ಕಾಸರಗೋಡು ಪುನರ್‌ವಿಂಗಡನಾ ಸಮಿತಿಯಲ್ಲಿದ್ದ ಕೇರಳದ ಸದಸ್ಯರೊಬ್ಬರ ಪ್ರಭಾವದಿಂದ ನಮ್ಮ ಕೈ ತಪ್ಪಿಹೋಗಿದ್ದು ಗುಟ್ಟೇನಲ್ಲ. ಆದರೂ ನಾವೇನೂ ಮಾಡಲಾಗದ ಸ್ಥಿತಿಯಲ್ಲಿದ್ದೇವೆ. ಒಂದೆರಡು ವರ್ಷಗಳ ಹಿಂದೆ ನಮ್ಮ ಕೋಲಾರ ಜಿಲ್ಲೆಯ ಜಲಾನಯನ ಪ್ರದೇಶದೊಳಗೆ ಅಕ್ರಮವಾಗಿ ಕಾಲುವೆ ನಿರ್ಮಿಸಿ ಅವರ ಪ್ರದೇಶಕ್ಕೆ ನೀರು ಹರಿಸಿಕೊಂಡು ಹೋಗುತ್ತಿದ್ದರೂ ನಮ್ಮವರ ಗಮನಕ್ಕೆ ಬಂದಿರಲೇ ಇಲ್ಲ; ನಮ್ಮ ಗಡಿಯ ವ್ಯಾಪ್ತಿ ಕಾವೇರಿ ನದಿಯ ಹೊಗನೇಕಲ್ ಪ್ರದೇಶದ ನಡುಗಡ್ಡೆಯೊಂದರಲ್ಲಿ ತಮಿಳುನಾಡಿನವರು ಪ್ರವಾಸಿ ತಾಣವನ್ನು ನಿರ್ಮಿಸಿದರೂ ನಮ್ಮವರಿಗೆ ಗೊತ್ತಾಗಲೇ ಇಲ್ಲ!

**ನಮ್ಮ ಜಲ** : ನಮ್ಮ ಪಶ್ಚಿಮ ಘಟ್ಟಗಳಲ್ಲಿ ಉಗಮಿಸುವ ಕಾಳಿ, ತುಂಗಭದ್ರ, ಹೇಮಾವತಿ, ಕಾವೇರಿ, ಕಪಿಲಾ ಮುಂತಾದ ನದಿಗಳ ನೀರಿನ ನ್ಯಾಯಯುತವಾದ ಹಕ್ಕನ್ನು ಚಲಾಯಿಸುವಲ್ಲಿ ಪದೇ ಪದೇ ವಿಫಲರಾಗುತ್ತಿದ್ದೇವೆ. ಕಾವೇರಿ ನೀರಿನ ಹಂಚಿಕೆಯ ಪ್ರಕರಣದಲ್ಲಿ ಬ್ರಿಟಿಷರ ಆಳ್ವಿಕೆಯ ಸಮಯದಲ್ಲಿ (೧೯೨೪) ಅವರಿಗಿದ್ದ ಮೇಲಧಿಕಾರ ಚಲಾಯಿಸಿ ಮದ್ರಾಸು ಪ್ರಾಂತ್ಯಕ್ಕೆ ಹೆಚ್ಚಿನ ನೀರು ಹರಿಯುವಂತೆ ಮಾಡಿದ್ದೂ ಸಹ ಗುಟ್ಟಾಗೇನೂ ಇಲ್ಲ. ಇಂದಿಗೂ ಅದು ವಿವಾದದ ವಿಷಯವಾಗಿಯೇ ಮುಂದುವರಿಯುತ್ತಿದೆ. ವಿವಾದ ನಿವಾರಣೆಗಾಗಿ ನೇಮಿಸಿದ ಸಮಿತಿಗಳೂ ಇಂದೂ ಸಹ ಅವ್ಯಕ್ತ ಕಾರಣಗಳಿಂದಾಗಿ ನಮ್ಮ ವಿರುದ್ಧವಾಗಿಯೇ ವರ್ತಿಸುತ್ತಿವೆ. ಕೃಷ್ಣಾನದಿಯ ನೀರಿನ ಹಂಚಿಕೆಯಲ್ಲೂ ಇಂತಹದೇ ಪರಿಸ್ಥಿತಿ ಇದೆ.

ರಾಜಧಾನಿ ಬೆಂಗಳೂರಿನಲ್ಲಿ ನೆರೆರಾಜ್ಯಗಳವರ ಪ್ರಭಾವವೇ ಅತಿಯಾಗಿದೆ. ಅಲ್ಲಿಯ ಆಜುಬಾಜು ಪ್ರದೇಶಗಳಲ್ಲಿ ಬಹಳಷ್ಟು ಮನೆ ನಿವೇಶನಗಳನ್ನು ವಾಮಮಾರ್ಗಗಳಲ್ಲಿ ಕಬಳಿಸಿರುವ ವರದಿಗಳು ಬರುತ್ತಿವೆ. ಬೆಂಗಳೂರು ಈಗ ಜಗದ್ವ್ಯಾಪಕ ಅಂತಸ್ತು – ಕಾಸ್ಮೊಪಾಲಿಟನ್ – ತಲುಪಿರುವುದರಿಂದ, ಅದನ್ನು ನವದೆಹಲಿ ಚಂಡೀಘಡಗಳಂತೆ ಸ್ವಾಯತ್ತ ಕೇಂದ್ರಾಡಳಿತ ಪ್ರದೇಶವನ್ನಾಗಿ ಪರಿವರ್ತಿಸಬೇಕೆಂಬ ಒತ್ತಾಸೆಗಳೂ ಉಂಟಾಗುತ್ತಿವೆ !

ಇನ್ನು, ರಾಜಕೀಯವಾಗಿ ಹೇಳಬೇಕೆಂದರೆ ಹಲವು ದಶಕಗಳ ಹಿಂದೆ ಕರ್ನಾಟಕದಲ್ಲಿದ್ದ ಪಕ್ಷ ಪಂಗಡಗಳ ಪರಿಸ್ಥಿತಿ ಇಂದು ಉಳಿದುಕೊಂಡಿಲ್ಲ. ಹಲವು ರೀತಿಯ ತತ್ತ್ವ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತೇವೆಂದು ಹೇಳಿಕೊಳ್ಳುವ ಪಕ್ಷಗಳು ಹುಟ್ಟಿಕೊಂಡಿದ್ದರೂ, ಬಹುಪಾಲು ಜಾತಿ, ಮತ, ಪಂಗಡ, ಮಠ ಮಾನ್ಯಗಳತ್ತ ಗಮನಹರಿಸುವವರೇ ಜಾಸ್ತಿಯಾಗಿದ್ದಾರೆ. ಯಾರಲ್ಲೂ ಒಗ್ಗಟ್ಟಿಲ್ಲದೆ ಪ್ರತಿಯೊಬ್ಬರೂ ತಮ್ಮ ತಮ್ಮ ಹಿತಾಸಕ್ತಿಗಳಿಗೆ ಪ್ರಾಶಸ್ತ್ಯ ನೀಡುವುದೇ ಹೆಚ್ಚೆನ್ನಬಹುದು. ಹಾಗಾಗಿ ಅಖಂಡ ಕರ್ನಾಟಕದ ಬೆಳವಣಿಗೆ ಇಳಿಮುಖವಾಗತೊಡಗಿದೆಯೆಂದರೆ ಅತ್ಯುಕ್ತಿಯಲ್ಲ. ಶಿಕ್ಷಣ, ವಿಜ್ಞಾನ, ಮಾಹಿತಿ ತಂತ್ರಜ್ಞಾನ ಮುಂತಾದ ಕೆಲವು ವಿಚಾರಗಳಲ್ಲಿ ಕರ್ನಾಟಕ ಸಾಕಷ್ಟು ಮುನ್ನಡೆಯಲ್ಲಿದೆ. ಆದರೆ ನೆರೆಯ ಪರಭಾಷಾ ರಾಜ್ಯಗಳಿಗೆ ಹೋಲಿಸಿದರೆ ನಮ್ಮ ಪ್ರಗತಿ ಪೇಲವವಾಗಿ ಕಾಣಿಸುತ್ತಿದೆ. ಈ ಮೊದಲೇ ಉದ್ಧರಿಸಿದ ತೀ.ನಂ.ಶ್ರೀ.ಯವರ **ಕನ್ನಡಿಗನ ಕೊರಗು**ಅನ್ನು ನೆನಪಿಸಿಕೊಂಡರೆ ಅಂದಿನ ಆಶಯಗಳು ಅಷ್ಟೇನೂ ಈಡೇರಿವೆ ಎಂದು ಹೇಳಿಕೊಳ್ಳಲಾಗದು. ಇವಕ್ಕೆಲ್ಲಾ ನಮ್ಮಲ್ಲಿ ರಾಜಕೀಯ ಇಚ್ಛಾಶಕ್ತಿಯ ಜೊತೆಗೆ ಒಗ್ಗಟ್ಟು, ಸ್ವಾಭಿಮಾನಗಳ ಕೊರತೆ ಎದ್ದುಕಾಣಿಸುತ್ತದೆ. ಅವನ್ನೆಲ್ಲಾ ಎದುರಿಸುವ ಕಾಲ ಸನ್ನಿಹಿತವಾಗಿದೆ ಎನ್ನಬಹುದು. ಕುವೆಂಪು ಅವರು ಹಿಂದೆಯೇ ಹೇಳಿರುವಂತೆ '**ಕನ್ನಡಿಗರು ವಿನಯಕ್ಕಾಗಿ ಬಗ್ಗಿ ನಡೆಯಬಹುದು ; ರಿಕ್ತರಂತೆ ಕುಗ್ಗಿ ನಡೆಯಬೇಕಿಲ್ಲ**'. ಅವರೆ ಕನ್ನಡಿಗರ ಶಕ್ತಿ ಸಾಮರ್ಥ್ಯಗಳ ಬಗ್ಗೆ ಹೇಳಿಲ್ಲವೆ, **ಕನ್ನಡಕ್ಕಾಗಿ ಕೈಎತ್ತು... !**

*ವಿ.ಸೂ.: 'ಕನ್ನಡಿಗನ ಕೊರಗು' ಕವಿತೆ ಮುದ್ರಿತ ಪ್ರತಿಯನ್ನು ನೀಡಿ ಸಹಕರಿಸಿದ ಪ್ರೊ|| ತೀ. ನಂ. ಶಂಕರನಾರಾಯಣರಿಗೆ ಕೃತಜ್ಞನಾಗಿರುವೆ.*



ಡಾ|| ಎಚ್. ಡಿ. ಚಂದ್ರಪ್ಪಗೌಡ
೭೪, ಮಿಷನ್ ಕಾಂಪೌಂಡು
ಶಿವಮೊಗ್ಗ - ೫೭೭೨೦೧

# ಮೀಸಲಾತಿ ಸವಲತ್ತು : ಕಂಪಣ ಬೇಡರ ಸಂದಿಗ್ಧತೆಗಳು

ಡಾ|| ಎಸ್. ನರೇಂದ್ರಕುಮಾರ್

ಜಾಗತೀಕರಣ, ಖಾಸಗೀಕರಣ,. ಉದಾರೀಕರಣಗಳ ವಾರಸುದಾರರು ಹಾಗೂ ಸನಾತನವಾದಿಗಳು ಮೀಸಲಾತಿ ಎಂಬುದನ್ನೆ ನಿರಾಕರಿಸುತ್ತಿರುವ ಈ ಹೊತ್ತಿನಲ್ಲಿ ಮೀಸಲಾತಿಯ ಚರ್ಚೆಯು ಭಾರತದಲ್ಲಿ ವ್ಯಂಗ್ಯಕ್ಕೂ ಅದರೊಟ್ಟಿಗೆ, ಗಂಭೀರ ಚಿಂತನೆಗೂ ಒಟ್ಟೊಟ್ಟಿಗೇ ಗುರಿಯಾಗುತ್ತಿದೆ. ಇಂಡಿಯಾದ ಸಾಮಾಜಿಕ ವಾಸ್ತವವಾದ ಜಾತಿಶ್ರೇಣೀಕರಣ ವ್ಯವಸ್ಥೆಯಲ್ಲಿ ಒಂದೊಂದು ಜಾತಿಗೂ ಅದರ ಆರ್ಥಿಕ ಸ್ಥಿತಿಗೂ ವಿಚಿತ್ರವಾದ ಸಂಬಂಧವಿದೆ. ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕವಾಗಿ ಹಿಂದುಳಿದ ಮೇಲ್ಜಾತಿಯ ವ್ಯಕ್ತಿಯು ತನ್ನಷ್ಟೇ ಕಡುಬಡತನದ ಆದರೆ ತನಗಿಂತ ಕೆಳಜಾತಿಯ ವ್ಯಕ್ತಿಯೊಟ್ಟಗೆ ಸರಿಸಮನಾಗಿ ಗುರುತಿಸಿಕೊಳ್ಳಲಾರ. ಅಲ್ಲದೆ ಆರ್ಥಿಕವಾಗಿ ಮೇಲೆ ಬಂದ ಕೆಳಜಾತಿಯವನೊಟ್ಟಿಗೂ ಗ್ರಾಮಭಾರತದ ಬಹುಪಾಲು ಮೇಲ್ಜಾತಿಯ ಜನರಿಗೆ ವಿಚಿತ್ರ ತಾತ್ಸಾರ ಮತ್ತು ಜಾತಿ ಅಹಂ ಇರುತ್ತದೆ. ಇದರೊಟ್ಟಿಗೇ ಅಲ್ಲಲ್ಲಿ ಜಾತಿಮೀರಿ ತುಡಿಯುವ ಅಂತಃಕರಣದ ಮನಸ್ಸುಗಳೂ ಇವೆ ಎಂಬುದು ಸೂಕ್ಷ್ಮ ಮನಸ್ಕರೆಲ್ಲರಿಗೂ ಗೊತ್ತಿರುವ ಕಟುಸತ್ಯ. ಹಾಗಾಗೇ ಡಾ|| ಬಿ. ಆರ್. ಅಂಬೇಡ್ಕರ್ ಅವರು ಗುರುತಿಸುವಂತೆ 'ಭಾರತ ಒಂದು ಸಂಕೀರ್ಣ ಸಾಮಾಜಿಕ ವ್ಯವಸ್ಥೆ'. ಭಾರತದ ಪ್ರಜಾಪ್ರಭುತ್ವದ ಯಶಸ್ಸಿಗಾಗಿ, ಸಂವಿಧಾನಾತ್ಮಕವಾಗೇ ಸಮಾನತೆಯನ್ನು ಸಾಧಿಸಲು ಸಾಮಾಜಿಕ ನ್ಯಾಯದ ಮಹದಾಶಯದಲ್ಲಿ ರೂಪುಗೊಂಡ ಮೀಸಲಾತಿಯು ಯಾರಿಗೆ ತಲುಪಬೇಕೋ ಅವರಿಗೆ ಸರಿಯಾಗಿ ತಲುಪುತ್ತಿಲ್ಲ. ಇನ್ನು ಕೆಲವು ಜಾತಿಗಳಂತೂ ಮೀಸಲಾತಿ ವರ್ಗೀಕರಣದಲ್ಲೇ ವಂಚನೆಗೆ ಒಳಗಾಗಿವೆ. ಈ ಮೂಲಕ ಇಂತಹ ತಳಸಮುದಾಯಗಳು ಪ್ರಜಾಪ್ರಭುತ್ವದಲ್ಲಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ ಹಾಗೂ ರಾಜಕೀಯದಲ್ಲಿ ದಿವ್ಯನಿರ್ಲಕ್ಷ್ಯಕ್ಕೆ ಗುರಿಯಾಗಿವೆ. ಹೀಗೆ ದಿಕ್ಕೆಟ್ಟವರಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಮಾದೇಶ್ವರ ಬೆಟ್ಟದ ಸುತ್ತಮುತ್ತಲ ಗಿರಿಕಾನನಗಳಲ್ಲಿ ಗುಂಪುಗುಂಪಾಗಿ ವಾಸಿಸುವ ಕಂಪಣ ಬೇಡರು ಎಂಬ ಜನಸಮುದಾಯವೂ ಒಂದು.

ಬ್ಯಾಡಗಂಪಣರು, ಬೇಡಗಂಪಣರು, ಬ್ಯಾಡ ಕಂಪಣರು, ಬೇಡಕಂಪಣರು, ಕಂಪಣಬೇಡರು ಎಂಬ ಹೆಸರುಗಳಿಂದ ಕರೆಯಲ್ಪಡುವ ಈ ಸಮುದಾಯವು ಅವರ ಬದುಕಿನ ಸಾಂಸ್ಕೃತಿಕ ಆಚರಣೆಗಳಲ್ಲಿ, ಜೀವನ ಕ್ರಮದಲ್ಲಿ ಬುಡಕಟ್ಟು ಸಮುದಾಯದ ಎಲ್ಲಾ ಸಲ್ಲಕ್ಷಣಗಳನ್ನು ಹಾಗೂ ನಡವಳಿಕೆಗಳನ್ನು ಇಂದಿಗೂ ಉಳಿಸಿಕೊಂಡಿದ್ದಾರೆ. ಆದಿವಾಸಿಗಳ ಮೂಲಲಕ್ಷಣವಾದ ಮಾತೃಪ್ರಧಾನ ಸಂಸ್ಕೃತಿಯ ನಂಬಿಕೆಗಳು, ಮದುವೆಯ ಸಂದರ್ಭದಲ್ಲಿ ಗಂಡಿನ ಕಡೆಯವರು ಹೆಣ್ಣಿನ ಮನೆಯವರಿಗೆ ತೆರಕೊಟ್ಟು ಮದುವೆಯಾಗುವ ಪದ್ಧತಿ, ಗಂಡಹೆಂಡಿರ ನಡುವೆ ಬಗೆಹರಿಸಲಾಗದ ವೈಮನಸ್ಸು ಎದುರಾದರೆ ಹೆಣ್ಣಿನ ಕಡೆಯವರಿಗೆ ಮದುವೆಯ ಸಂದರ್ಭದ ತೆರವನ್ನು ವಾಪಸ್ಸು ಕೊಟ್ಟು ವಿಚ್ಛೇದನವಾಗುವ ಅವಕಾಶ, ಮರು ವಿವಾಹಕ್ಕೆ ಒಪ್ಪಿಗೆ, ಹಾಗೆಯೇ

> ಬೇಡಗಂಪಣರು ಎಲ್ಲಾ ಕ್ಷೇತ್ರಗಳಲ್ಲಿಯೂ ತೀರಾ ಹಿಂದುಳಿದವರಾಗಿದ್ದು ಇಂದಿಗೂ ಕಾಡ ಒಡನಾಟದಲ್ಲೆ ಬದುಕನ್ನು ಸಾಗಿಸುತ್ತಿದ್ದಾರೆ. ಐತಿಹ್ಯದಂತೆ ಬೇಡರ ಕಣ್ಣಪ್ಪನ ವಂಶಸ್ಥರಾದ ಇವರು ಮೂಲತಃ ತಮಿಳುನಾಡಿನವರಾಗಿದ್ದು (ಕೆಲವರು ಆಂಧ್ರದ ಶ್ರೀಶೈಲವೆಂದೂ ಹೇಳುತ್ತಾರೆ) ಈಗ ಮಾದೇಶ್ವರ ಬೆಟ್ಟದ ಸಾಲುಗಳಲ್ಲಿ – ಆಣೆ ಹೊಲ, ಕೊಕ್ಬರೆ, ಕೊಂಬಡಿ, ದೊಡ್ಡಾಣೆ, ತೋಕರೆ, ಮಲಚಿಕೆರೆ, ಬಿದಿರಹಳ್ಳಿ, ಕಡ್ಲೂರು, ಸುಳ್ಳುವಾದೆ, ಹಲೆವೂರು, ಕೀರ್‌ನಹೊಲ, ಕೊಂಕನವೂರು, ಗೊರಸಣ್ಣೆ, ತುಳಸಿಕೆರೆ, ಹಿಂಡಿಗನಾಥ, ತೆಂಕಣೆ, ಪಡಸಲ್‌ನತ್ತ , ಹರ್ಬಗೆರೆ, ಮೀಣ್ಯ, ಗುಂಡಿಮಾಳ, ಪುಣ್ಣೂರು, ನಾಗಮಲೈ ಮುಂತಾದ ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದಾರೆ.

ವಿಧವೆಯರಿಗೆ ಮರುಮದುವೆ ಹಾಗೂ ಕೂಡಾವಳಿ ಪದ್ಧತಿಯು ರೂಢಿಯಲ್ಲಿದೆ. ಬಾಲ್ಯವಿವಾಹವೂ ಇವರಲ್ಲಿ ಆಚರಣೆಯಲ್ಲಿದೆ. ಆದರೆ ಈ ಸಮುದಾಯವನ್ನು ಮೀಸಲಾತಿ ವರ್ಗೀಕರಣದಲ್ಲಿ – ೧೯೩೧ರಲ್ಲಿ ನಡೆದ ಮೊದಲ ಜಾತಿವಾರು ಜನಗಣತಿ ಸಂದರ್ಭದಲ್ಲೆ – ಪ್ರವರ್ಗ ೩ ಬಿಗೆ (cat IIIB) ಸೇರಿಸಲಾಗಿದೆ. ಇದರ ಹಿಂದೆ ಜಾತಿವಾರು ಜನಗಣತಿಯ ವಿಚಿತ್ರ ತರ್ಕವಿದೆ. ಜೊತೆಗೆ ಈ ಜನಾಂಗ ಕುರಿತು ಗ್ರಹಿಕೆಯಲ್ಲೇ ತಪ್ಪೆಸಗಿರುವುದು ಕಂಡುಬರುತ್ತದೆ. ಇಂತಹ ತಪ್ಪು ಗ್ರಹಿಕೆಯೇ ಕಂಪಣಬೇಡರು ಇಂದಿಗೂ ಸಂದಿಗ್ಧವಾಗಿ ಬದುಕಲು ಕಾರಣವಾಗಿದೆ.

ಆದಿವಾಸಿಗಳಾದ ಈ ಸಮುದಾಯವನ್ನು ಬದಲಾವಣೆಯ ಬೆಳಕಿಗೆ ತಂದವನು ಕ್ರಿ.ಶ. ಸುಮಾರು ೧೪-೧೫ನೇ ಶತಮಾನದಲ್ಲಿ ಉತ್ತರದೇಶದಿಂದ ಕತ್ತಲ ರಾಜ್ಯಕ್ಕೆ ಬಂದ ಸಂತ ಮಲೆಮಾದೇಶ್ವರ. ಮಾದೇವ ಈ ದಟ್ಟಕಾಡಿಗೆ ಆಗಮಿಸಿದ ಬಳಿಕ ಆ ಅರಣ್ಯದೊಳಗೆ ಈಗಾಗಲೇ ವಾಸವಿದ್ದ ಬೇಡಗಂಪಣರು, ಸೋಲಿಗರು, ಜೇನುಕುರುಬರು ಮೊದಲಾದ ಬುಡಕಟ್ಟುಗಳನ್ನು ತನ್ನ ಒಕ್ಕಲುಗಳನ್ನಾಗಿಸಿಕೊಳ್ಳಲು ತೊಡಗುತ್ತಾನೆ. ಅದರಲ್ಲೂ ಬೇಡಗಂಪಣರನ್ನು ತನ್ನ ಒಕ್ಕಲನ್ನಾಗಿಸಿಕೊಳ್ಳುವುದು ಮಾತ್ರವಲ್ಲದೆ, ತನ್ನ ಪೂಜೆಯ ಹಕ್ಕನ್ನೂ ಈ ಬೇಡಗಂಪಣರಿಗೆ ನೀಡುತ್ತಾನೆ. ಮಲೆಮಾದೇಶ್ವರನ ಕುರಿತ ಮೌಖಿಕ ಮಹಾಕಾವ್ಯದಲ್ಲಿ ಬೇಡಗಂಪಣರ ಕುರಿತು ಆರಂಭಕ್ಕೇ ಈ ಕೆಳಕಂಡಂತೆ ಉಲ್ಲೇಖ ಬರುತ್ತದೆ.

"..............................

ಈ ಬೇಡಗಂಪಣರನ್ನೆಲ್ಲ ಕರೆದು
ನಾನು ವಿದ್ಯಾಬುದ್ಧಿಯನ್ನು ಕಲಿಸಿ
ಅವರಿಗೆ ಲಿಂಗಧಾರಣೆ ಮಾಡಿಸಿ
ಶಿವಾರ್ಚನೆ ಶಿವಪೂಜೆ ಮಾಡುವುದಕ್ಕೆ
ನೇಮಕ ಮಾಡ್ತೀನಿ ಗುರುವೆ ಅಂತ್ಹೇಳಿ
ಅಂತರಗಂಗೆ ಪಕ್ಕದಲ್ಲಿ
ಒಂದೇ ಕಂಬವನ್ನು ನೆಟ್ಟು
ಒಂದು ಹುಲ್ಲುಜೋಪಡಿ ಮಾಡವರೇ
ಮಹಾದೇವಾಽಽ

(ಪುಟ ೬೮, ಮಲೆಮಾದೇಶ್ವರ ಕಾವ್ಯ, ಸಂ: ಡಾ|| ಕೆ. ಕೇಶವನ್ ಪ್ರಸಾದ್, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೭).

ಮಲೆಯ ಮಾದೇವನಿಗೂ ಬೇಡಗಂಪಣರಿಗೂ ಅವಿನಾಭಾವ ಸಂಬಂಧವಿದೆ. ಮಾದೇಶ್ವರನ ಕಥನದಲ್ಲಂತೂ ಈ ಬೇಡಗಂಪಣರು ಪದೇ ಪದೇ ಉಲ್ಲೇಖ

ಗೊಳ್ಳುತ್ತಾರೆ. ಮುಂದಿನ ದಿನಗಳಲ್ಲಿ ಬೇಡಗಂಪಣರು ತಮ್ಮನ್ನು "ಬೇಡಗಂಪಣ ಶಿವಾರ್ಚಕ ಲಿಂಗಾಯಿತ"ರೆಂದು ಕರೆದುಕೊಳ್ಳುತ್ತಿದ್ದಾರೆ. (ಬೇರೆಯವರು ಇವರನ್ನು ಈ ರೀತಿ ಕರೆಯಲೂ ಆರಂಭಿಸಿರಬಹುದು.) ಈ ರೀತಿ ಕರೆದುಕೊಳ್ಳುವುದೇ ಇವರನ್ನು ಜನಗಣತಿ ಮಾಡಿದವರು ಪ್ರವರ್ಗ ೩ಬಿಗೆ ಸೇರಿಸಲೂ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ವಾಸ್ತವವಾಗಿ ಇವರಿಗೂ ವೀರಶೈವರಿಗೂ ಅಥವಾ ಲಿಂಗಾಯಿತರಿಗೂ ಯಾವುದೇ ರೀತಿಯ – ಆಚಾರ, ವಿಚಾರ, ಸಾಂಸ್ಕೃತಿಕ, ವೈವಾಹಿಕ, ಸಹಭೋಜನ, ಸಾಮಾಜಿಕ ಇತ್ಯಾದಿ – ಸಂಬಂಧಗಳಿಲ್ಲ. ಅಲ್ಲದೆ ಲಿಂಗಾಯಿತರು ಬೇಡಗಂಪಣರನ್ನು ತಮಗಿಂತ ಕೀಳುಜಾತಿಯವರೆಂದು ಇಂದಿಗೂ ಪರಿಗಣಿಸಿದ್ದಾರೆ.

ಒಂದು ಕಾಲಕ್ಕೆ ಮಲೆಮಾದೇಶ್ವರ ದೇವಾಲಯದ ಪ್ರಧಾನ ಅರ್ಚಕರೂ ಆಗಿದ್ದರೆಂಬುದಕ್ಕೆ ಹಾಗೆಯೇ ಸ್ವತಃ ಮಾದೇಶ್ವರನೇ ಪೂಜೆಯ ಹಕ್ಕುಗಳನ್ನು ನೀಡಿದ್ದನೆಂಬುದಕ್ಕೆ ಈಗಾಗಲೇ ಉಲ್ಲೇಖಿಸಿದಂತೆ ಮಹಾಕಾವ್ಯದಲ್ಲಿ ಹಾಗೂ ಬೇಡಗಂಪಣರಲ್ಲಿ ಇಂದಿಗೂ ಉಳಿದುಕೊಂಡಿರುವ ಮೌಖಿಕ ಕಥನಗಳಲ್ಲಿ ಐತಿಹ್ಯಾಧಾರಗಳು ಸಿಗುತ್ತವೆ. ಅಂದಿನ ಮೈಸೂರಿನ ಮಹಾರಾಜರಾದ ಜಯಚಾಮ ರಾಜೇಂದ್ರ ಒಡೆಯರು ಮಾದೇಶ್ವರನ ಪೂಜೆಯು ಸಂಸ್ಕೃತದಲ್ಲಿ ನಡೆಯಬೇಕೆಂದು ನಿರ್ಧರಿಸಿ, ಮೈಸೂರಿನಲ್ಲಿ ಸಂಸ್ಕೃತ ಶಾಲೆಯನ್ನು ಆರಂಭಿಸಿ ತರಬೇತಿಯನ್ನು ಸುರು ಮಾಡಿದ ಬಳಿಕ, ಸಂಸ್ಕೃತ ಕಲಿಯಲಾಗದೆ ಬೇಡಗಂಪಣರು ಪರಂಪರಾಗತವಾಗಿ ಬಂದ ತಮ್ಮ ಹಕ್ಕುಗಳನ್ನು ಕಳೆದುಕೊಳ್ಳುತ್ತ ಪೂಜೆಗೆ ಬೇಕಾದ ಹೂವುಗಳು, ಎಲೆಗಳನ್ನು ತಂದುಕೊಡುವ ಹಂತಕ್ಕೆ ತಲುಪಿದ ಬಗೆಗೂ ಆಧಾರಗಳು ಸಿಗುತ್ತವೆ. ಹೀಗೀಗೆ ಮಾದೇಶ್ವರ ದೇವಾಲಯವು ವೀರಶೈವೀಕರಣಗೊಳ್ಳುತ್ತಿರುವ ಕಾರಣವಾಗಿ ಬೇಡಗಂಪಣರಿಗೆ ಸುಮಾರು ೧೫ನೇ ಶತಮಾನದಿಂದಲೂ ಇದ್ದ ಹಕ್ಕುಗಳು ಆ ಮೂಲಕ ಅವರ ಪಾಲಿಗೆ ಸಿಗುತ್ತಿದ್ದ ಅಷ್ಟಿಷ್ಟು ಸವಲತ್ತುಗಳೂ ಬೇಡಗಂಪಣರಿಗೆ ಇಲ್ಲವಾಗಿವೆ. ಈ ಸಮುದಾಯದ ಮುಗ್ಧತೆಯನ್ನು ಬಳಸಿಕೊಂಡು ದೇವಾಲಯದ ಅಭಿವೃದ್ಧಿಯ ನೆಪದಲ್ಲಿ ಬೇಡಗಂಪಣರಿಗೆ ಯಾವುದೇ ಪರಿಹಾರವನ್ನು ಕೊಡದೆ ಅವರ ಪಾಲಿಗಿದ್ದ ಭೂಮಿಯನ್ನು ಕಬಳಿಸಿರುವುದೂ ಕಂಡುಬರುತ್ತದೆ. ಈ ಕುರಿತು ಬೇಡಗಂಪಣರಿಗೇ ಯಾವುದೇ ಬಗೆಯ ಬೇಸರವಿಲ್ಲ.

ಈಗಾಗಲೆ ತಿಳಿಸಿದಂತೆ ಬೇಡಗಂಪಣರು ಎಲ್ಲಾ ಕ್ಷೇತ್ರಗಳಲ್ಲಿಯೂ ತೀರಾ ಹಿಂದುಳಿದವರಾಗಿದ್ದು ಇಂದಿಗೂ ಕಾಡ ಒಡನಾಟದಲ್ಲೆ ಬದುಕನ್ನು ಸಾಗಿಸುತ್ತಿದ್ದಾರೆ. ಐತಿಹ್ಯದಂತೆ ಬೇಡರ ಕಣ್ಣಪ್ಪನ ವಂಶಸ್ಥರಾದ ಇವರು ಮೂಲತಃ ತಮಿಳುನಾಡಿನವರಾಗಿದ್ದು (ಕೆಲವರು ಆಂಧ್ರದ ಶ್ರೀಶೈಲವೆಂದೂ ಹೇಳುತ್ತಾರೆ) ಈಗ ಮಾದೇಶ್ವರ ಬೆಟ್ಟದ ಸಾಲುಗಳಲ್ಲಿ – ಆಣೆ ಹೊಲ, ಕೊಕ್ಕರೆ, ಕೊಂಬಡಿ, ದೊಡ್ಡಾಣೆ, ತೋಕರೆ, ಮಲಚಿಕೆರೆ, ಬಿದಿರಹಳ್ಳಿ, ಕಡ್ಬೂರು, ಸುಳ್ಳುವಾದೆ, ಹಲಿವೂರು, ಕೀರ್ನಹೊಲ, ಕೊಂಕನವೂರು, ಗೊರಸಣ್ಣೆ, ತುಳಸಿಕೆರೆ, ಹಿಂಡಿಗನಾಥ, ತೆಂಕಣೆ, ಪಡಸಲ್‌ನತ್ತ, ಹರ್ಬಗೆರೆ, ಮೀಣ್ಯ, ಗುಂಡಿಮಾಳ, ಪುಣ್ಣೂರು, ನಾಗಮಲ್ಲೆ ಮುಂತಾದ ಗುಡ್ಡಗಾಡುಗಳಲ್ಲಿ ವಾಸಿಸುತ್ತಿದ್ದಾರೆ. ಹೆಚ್ಚಾಗಿ ಗುಡಿಸಲುಗಳ ವಾಸಿಗಳಾಗಿರುವ ಇವರಿಗೆ ಸಂಬಂಧಿಸಿದಂತೆ ಸುಮಾರು ೫೦೦ ಗುಡಿಸಲುಗಳಿವೆ. ಕಾಡು ತೊರೆದು ಮಾದೇಶ್ವರ ಬೆಟ್ಟಕ್ಕೆ ಬಂದು ನೆಲೆಸಿರುವ ಕೆಲವರು ಲೋನಿನ ಮೂಲಕ ಹೆಂಚಿನ ಮನೆಗಳನ್ನು ಕಟ್ಟಿಸಿಕೊಂಡಿದ್ದಾರೆ. ಸರ್ಕಾರ ಕಟ್ಟಿಸಿರುವ ಸುಮಾರು ೨೭೬ ಜನತಾ ಮನೆಗಳಿವೆ. ಆದರೆ ಅವುಗಳಲ್ಲಿ ಬಹುಪಾಲು ಮನೆಗಳು ವಾಸಿಸಲು ಯೋಗ್ಯವಿಲ್ಲದಷ್ಟು ಶಿಥಿಲಗೊಂಡಿವೆ ಎಂಬುದೂ ನಿಜ. ಕರ್ನಾಟಕದಲ್ಲಿ ಒಟ್ಟು ಇವರ ಜನಸಂಖ್ಯೆ ಸುಮಾರು ೮೯೩೮. ಆಂಧ್ರಪ್ರದೇಶದಲ್ಲಿ ಇದೇ ಜನಾಂಗವನ್ನು ಬೇಡಜಂಗಮ ಎಂಬುದಾಗಿ ಕರೆದು ಪರಿಶಿಷ್ಟ ಪಂಗಡಕ್ಕೆ (ಎಸ್.ಟಿ.ಗೆ) ಸೇರಿಸಿದ್ದಾರೆ. ತಮಿಳುನಾಡಿನಲ್ಲಿ ಈ ಜನಸಮುದಾಯವನ್ನು ಪ್ರವರ್ಗ ೨ಎಗೆ ಸೇರಿಸಿದ್ದಾರೆ. ಕರ್ನಾಟಕದಲ್ಲಿ ಈಗಾಗಲೆ ತಿಳಿಸಿದಂತೆ ಪ್ರವರ್ಗ ೩ಬಿಗೆ ಸೇರಿಸಿರುವ ಇವರಿಗೆ ನೀಡುವ ಜಾತಿ ಪ್ರಮಾಣ ಪತ್ರದಲ್ಲಿ ''ಬೇಡಗಂಪಣ ಲಿಂಗಾಯಿತರು'' ಎಂದೂ ಕೆಲವೊಮ್ಮೆ ''ಬೇಡಗಂಪಣ ಶಿವಾರ್ಚಕ ಲಿಂಗಾಯಿತರು'' ಎಂದೂ ನಮೂದಿಸುತ್ತಾರೆ. ಪ್ರವರ್ಗ ೩ಬಿನಲ್ಲಿ ಲಿಂಗಾಯಿತ, ವೀರಶೈವ, ಬಂಟ, ಮರಾಠಿ, ಜೈನ, ಕ್ರಿಶ್ಚಿಯನ್ ಹೀಗೆ ಆರು ಜಾತಿಗಳೂ ಮತ್ತು ೪೧ ಉಪಜಾತಿಗಳೂ ಪರ್ಯಾಯ ಜಾತಿಗಳಿವೆ. ಬೇಡಗಂಪಣರನ್ನು ಪ್ರವರ್ಗ ೩ಬಿ ಎಂದು ಪರಿಗಣಿಸಲ್ಪಟ್ಟಿರುವುದರಿಂದ ಇಲ್ಲಿಯೂ ಸಹ ಈ ಜನಸಮುದಾಯಕ್ಕೆ ಪ್ರವರ್ಗ ೩ಬಿ ಮೀಸಲಾತಿಯ ಯಾವ ಸೌಲಭ್ಯಗಳೂ ಸಿಗದೆ, ಇದರ ಅನುಕೂಲಗಳು ಪ್ರಬಲಜಾತಿಗಳಿಗೆ ಮಾತ್ರವೇ ಸಿಗುತ್ತಿದ್ದು ಬೇಡಗಂಪಣರು ದಿವ್ಯನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ.

ವಿಹಂಗಮ

ಬದುಕಿನ ಪಂಜರದಲ್ಲಿ
ಗಿಳಿಯಾಗಲೊಲ್ಲದ ಮನಕೆ
ಸ್ವಾಭಿಮಾನದ ಗಗನದಲ್ಲಿ
ವಿಹಂಗಮವಾಗಿ ವಿಹರಿಸುವಾಸೆ!

ಡಿ. ವಿ. ಬಡಿಗೇರ
ವಿರೂಪಾಕ್ಷ ನಿಲಯ, ತೆಗ್ಗಿನಪೇಟೆ

ಓದಿದವರು ಮತ್ತು ಓದುವವರು ತೀರಾ ವಿರಳವಾಗಿರುವ ಈ ಸಮುದಾಯದ ಒಟ್ಟು ಶಿಕ್ಷಣ ಮಟ್ಟ ಶೇ. ೨೦ ರಿಂದ ೨೫ ಮಾತ್ರ. ಕ್ಷೇತ್ರಾಧ್ಯಯನದ ಮೂಲಕ ಕಂಡುಬಂದ ಅಂಶವೆಂದರೆ ಓದಿನ ಬಗೆಗೆ ಬಹುತೇಕ ಎಲ್ಲರೂ ಆಸಕ್ತಿ ತೋರಿಸುತ್ತಾರೆ. ಆದರೆ ಸೌಲಭ್ಯಗಳ ಕೊರತೆ ಇವರನ್ನು ಅಕ್ಷರ ವಂಚಿತರನ್ನಾಗಿ ಮಾಡಿದೆ. ಕಾಡಿನ ನಡುನಡುವೆ ವಾಸವಿರುವ ಇವರ ಸ್ಥಳಗಳಿಗೆ ರಸ್ತೆ ಸಂಪರ್ಕ, ಶಾಲೆ, ಅಕ್ಷರ ಕಲಿಕೆಯ ಅನುಕೂಲದ ತಿಳುವಳಿಕೆ ಇವಾವುವೂ ಇಲ್ಲದ್ದರಿಂದ ಹಾಗೂ ಈ ಕುರಿತು ಸರಿಯಾದ ಮಾಹಿತಿಯೂ ಇವರಿಗೆ ಇಲ್ಲದ ಕಾರಣ, ಇವರು ತಮಗಾಗುತ್ತಿರುವ ಅನ್ಯಾಯಗಳ ಅರಿವೂ ಇಲ್ಲದೆ ಮುಗ್ಧವಾಗಿ ಬದುಕುತ್ತಿದ್ದಾರೆ. ಪ್ರಾಥಮಿಕ ಶಾಲೆಗಳು ಅಲ್ಲಲ್ಲಿ ಇದ್ದರೂ ಅವೆಲ್ಲವೂ ಸಾಮಾನ್ಯವಾಗಿ ಏಕೋಪಾಧ್ಯಾಯ ಶಾಲೆಗಳಾಗಿವೆ. ಮುಂದಿನ ವ್ಯಾಸಂಗಕ್ಕೆ ಪ್ರೌಢಶಾಲೆಗೆ ಸೇರಲು ಸುಮಾರು ೧೫ರಿಂದ ೨೫ ಕಿಲೋಮೀಟರುಗಳಷ್ಟು ನಡೆದು ಮಾದೇಶ್ವರ ಬೆಟ್ಟಕ್ಕೇ ಬಂದು ಓದಬೇಕು. ಈ ಕಾರಣಕ್ಕೆ ಅರ್ಧಕ್ಕೇ ಓದನ್ನು ನಿಲ್ಲಿಸಿ ಬಾಲಕಾರ್ಮಿಕರೂ ಕೂಲಿಕಾರ್ಮಿಕರೂ ಆಗಿರುವುದು ಕಂಡುಬರುತ್ತದೆ. ಈಗೀಗ ಎಚ್ಚೆತ್ತುಕೊಳ್ಳುತ್ತಿರುವ ಈ ಸಮುದಾಯದ ಕೆಲವರು ಓದಿನಲ್ಲಿ ಆಸಕ್ತಿ ತೋರಿಸುತ್ತಿದ್ದಾರೆ. ತಮ್ಮ ಕಡುಕಷ್ಟಗಳ ನಡುವೆಯೂ ಪಿ.ಯು.ಸಿ. ಮುಗಿಸಿದ ೩೦ ವಿದ್ಯಾರ್ಥಿಗಳು, ಬಿ.ಎ. ಮುಗಿಸಿದ ೬ ವಿದ್ಯಾರ್ಥಿಗಳು, ಎಂ.ಎ. ವ್ಯಾಸಂಗ ಮಾಡಿದ ಒಬ್ಬ ಹುಡುಗ ಒಬ್ಬ ಹುಡುಗಿ ಮಾತ್ರ ಸಿಗುತ್ತಾರೆ. ಈ ಜನಾಂಗದ ಶೈಕ್ಷಣಿಕ ಪ್ರಮಾಣದಲ್ಲಿ ವಿದ್ಯಾರ್ಥಿನಿಯರ ಪಾಲು ಶೇ.೧೦ ಮಾತ್ರ.

ಔದ್ಯೋಗಿಕವಾಗಿ ನೋಡುವುದಾದರೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನಲ್ಲಿ ಮೇನೇಜರ್ ಆಗಿ ಒಬ್ಬರು, ಫಾರೆಸ್ಟರ್ ವೃತ್ತಿಯಲ್ಲಿ ಒಬ್ಬರು, ಎಚ್.ಎ.ಎಲ್.ನ ಇಂಜಿನಿಯರ್ ಆಗಿ ಒಬ್ಬರು, ಪ್ರಾಧ್ಯಾಪಕರಾಗಿ ನಿವೃತ್ತರಾಗಿರುವ ಒಬ್ಬರು, ಕಂದಾಯ ಇಲಾಖೆಯಲ್ಲಿ ಒಬ್ಬರು. ಐದು ವರ್ಷಗಳಿಂದೀಚೆಗೆ ಪಿ.ಯು.ಸಿ. ನಂತರ ಟಿ.ಸಿ.ಎಚ್. ಮುಗಿಸಿ ೧೧ ಪುರುಷರು, ಇಬ್ಬರು ಮಹಿಳೆಯರು ಶಿಕ್ಷಕರಾಗಿ ಕೆಲಸಕ್ಕೆ ಸೇರಿದ್ದಾರೆ. ಮಹದೇಶ್ವರ ಬೆಟ್ಟದ ದೇವಾಲಯದ ಮುಜರಾಯಿ ಇಲಾಖೆಯಲ್ಲಿ 'ಡಿ' ದರ್ಜೆ ನೌಕರರಾಗಿ ४೦ ಮಂದಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಿಗೆ ಸರಿಯಾದ ಸವಲತ್ತುಗಳಿಲ್ಲದೆ ಸಂಕಷ್ಟದಲ್ಲಿದ್ದಾರೆ. ಅಂದಾಜು ಸುಮಾರು ೧,೫೦೦ ಎಕರೆ ಭೂಮಿ–ಕರ್ನಾಟಕದಲ್ಲಿ–ಬೇಡಗಂಪಣರಿಗಿದೆ. ಹಾಗೆಯೇ ಈ ಜನಾಂಗದಲ್ಲಿ ಭೂಮಿ ಇಲ್ಲದವರೂ ಇದ್ದಾರೆ. ದೇವಾಲಯದ ಅಭಿವೃದ್ಧಿಗಾಗಿ ತಮ್ಮ ಜಮೀನನ್ನು ಬಿಟ್ಟುಕೊಟ್ಟು – ಕಳೆದುಕೊಂಡು – ನಿರ್ಗತಿಕರಾದವರೂ ಇದ್ದಾರೆ. ಭೂಮಿ ಇರುವವರು ತಮ್ಮ ಜಮೀನುಗಳಲ್ಲಿ ಮುಖ್ಯವಾಗಿ ರಾಗಿ, ಅವರೆ, ಉಚ್ಚೆಳ್ಳು ಬೆಳೆಯುತ್ತಾರೆ. ಭೂಮಿ ಇಲ್ಲದವರು ಕಾಡಿನಿಂದ ಒಣಗಿದ ಸೌದೆ ಹೊತ್ತು ತಂದು ಊರುಗಳಲ್ಲಿ ಮಾರುವುದು, ಬಿದಿರ ಬುಟ್ಟಿಗಳನ್ನು ನೇಯ್ದು ಮಾರಾಟ ಮಾಡುವುದು, ಈಚಲು ಗರಿಯ ಕಸಬರಿಕೆ (ಇಡುಗಲು) ತಯಾರಿಸಿ ಮಾರುವುದು, ಕಾಡಿನಿಂದ ಜೇನುತುಪ್ಪ, ಹರಳೆಕಾಯಿ, ಅಂಟ್ವಾಳ, ನೆಲ್ಲಿಕಾಯಿ, ಪಾಚಿ ಸಂಗ್ರಹಣೆ ಮಾಡಿ ಮಾದೇಶ್ವರ ಬೆಟ್ಟದಲ್ಲಿರುವ 'ಲ್ಯಾಂಪ್ಸ್' ಸೊಸೈಟಿಯ ಶಾಖೆಗೆ ಮಾರಾಟ ಮಾಡುತ್ತಾರೆ. ಕುರಿ, ದನ, ಮೇಕೆ ಕಾಯುವುದು, ಕರಿಕಲ್ಲು ಕ್ವಾರೆಗಳಲ್ಲಿ ಕೂಲಿಗಳಾಗಿ ದುಡಿಯುವುದು, ಮಾದೇಶ್ವರ ದೇವಾಲಯದ ಮುಂದೆ ಧೂಪ, ಗಂಧದ ಕಡ್ಡಿ, ಕರ್ಪೂರ ಮಾರುವುದು ಇವರ ಜೀವನಾಧಾರ ವೃತ್ತಿಗಳಾಗಿವೆ. ದುರಂತದ ವಿಷಯವೆಂದರೆ ಒಂದು ಹೊತ್ತಿನ ಊಟಕ್ಕಾಗಿ ತತ್ವಾರ ಪಡುವ ಈ ಜನಸಮುದಾಯದ ಕೆಲವರು – ಚಿಕ್ಕಮಕ್ಕಳನ್ನೂ ಮೊದಲ್ಗೊಂಡು ವಯಸ್ಸಾದವರೂ ಭಿಕ್ಷಾಟನೆ ಮಾಡುತ್ತಿದ್ದಾರೆ. ಹಾಗೆಯೇ ಇನ್ನು ಕೆಲವರು ತಮ್ಮ ಬದುಕನ್ನು ಪೊರೆಯಲು

ಸಂಸಾರಸಮೇತರಾಗಿ ಜಮೀನುದಾರರ ತೋಟಗಳಲ್ಲಿ ಜೀತಕ್ಕೆ ಸೇರಿಕೊಂಡಿರುವ ಪ್ರಕರಣಗಳೂ ಇವೆ. ಕಠಿಣ ಶ್ರಮಜೀವಿಗಳಾಗಿರುವ ಬೇಡಗಂಪಣ ಜನಸಮುದಾಯದ ಗಂಡು ಹೆಣ್ಣುಗಳಿಬ್ಬರೂ ಎಲ್ಲಾ ಕೆಲಸಗಳಲ್ಲೂ ಸರಿಸಮನಾಗಿ ದುಡಿಯುತ್ತಾರೆ. ಇವರ ಮೂರು ಹೊತ್ತಿನ ಆಹಾರವೂ ರಾಗಿಮುದ್ದೆ, ಸೊಪ್ಪು, ಗೆಡ್ಡೆಗೆಣಸು ಆಗಿರುತ್ತದೆ.

ಇನ್ನು ಇವರ ಸಮಸ್ಯೆಗಳು ಬಹಳಷ್ಟಿವೆ. ಮೂಲತಃ ಇವರು ವಾಸಿಸುವ ನೆಲೆಗಳೇ ಗುಡ್ಡಗಾಡು ಪ್ರದೇಶಗಳಾಗಿರುವುದರಿಂದ ಸಂಪರ್ಕಕ್ಕೆ ಸರಿಯಾದ ರಸ್ತೆಗಳಿಲ್ಲ, ಕುಡಿವ ನೀರಿನ ವ್ಯವಸ್ಥೆ ಇಲ್ಲದೆ ನೀರಿಗಾಗಿ ಬಾವಿ, ಸಣ್ಣ ಸಣ್ಣ ಕಟ್ಟೆಗಳು, ಕೊಳಗಳನ್ನು ಅವಲಂಬಿಸಿದ್ದಾರೆ. ವಿದ್ಯುತ್ ಇಲ್ಲ, ಆರೋಗ್ಯ ಕೇಂದ್ರಗಳಿಲ್ಲ, ರೋಗಗಳಿಗೆ ತುತ್ತಾದರೆ ಹಾಗೂ ಹೆರಿಗೆಯ ಸಂದರ್ಭದಲ್ಲಿ ಅವರದೇ ಆದ ನಾಟಿ ಔಷಧಿ ಮತ್ತು ಸೂಲಗಿತ್ತಿಯರಿಗೆ ಮೊರೆ ಹೋಗುತ್ತಾರೆ. ತೀರಾ ಅನಿವಾರ್ಯವಾಗಿ ತುರ್ತು ಚಿಕಿತ್ಸೆಗಳು ಬೇಕಾದಾಗ, ಅಪಘಾತಗಳಿಗೆ ಒಳಗಾದರೆ ಬೇಡಗಂಪಣರು ಅವರು ವಾಸಿಸುವ ಗುಡ್ಡಗಾಡಿನಿಂದ ಮಾದೇಶ್ವರ ಬೆಟ್ಟದಲ್ಲಿರುವ ಆಸ್ಪತ್ರೆಗೆ ಅಡ್ಡೆಯಲ್ಲಿ ಹೊತ್ತು ತರುತ್ತಾರೆ. (ಅಡ್ಡೆ = ದೊಡ್ಡ ಬಿದುರಿನ ಗಳುವಿನ ಮಧ್ಯೆ ರಗ್ಗನ್ನೊ, ಪಂಚೆಯನ್ನೊ ಕಟ್ಟಿ ಅದರಲ್ಲಿ ರೋಗಿಯನ್ನು ಮಲಗಿಸಿ, ಗಳುವಿನ ಎರಡು ತುದಿಯಲ್ಲೂ ಒಬ್ಬೊಬ್ಬರು ಹೊತ್ತು ತರುತ್ತಾರೆ.) ಸರ್ಕಾರದ ಮೂಲಭೂತ ಸೌಕರ್ಯಗಳಿಂದಲೂ ವಂಚಿತರಾಗಿರುವ ಇವರಿಗೆ ರೇಷನ್ ಕಾರ್ಡ್‌ಗಳೂ ಸರಿಯಾಗಿ ವಿತರಣೆಯಾಗಿಲ್ಲ, ಸರ್ಕಾರದ ವತಿಯಿಂದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಉಚಿತವಾಗಿ ಸೈಕಲ್‌ಗಳನ್ನು ವಿತರಿಸಿರುವುದು ಜನಜನಿತ ವಿಚಾರ. ಆದರೆ ಈ ಪ್ರದೇಶದ ಗುಡ್ಡಗಾಡು ಮಕ್ಕಳಿಗೆ ಸೈಕಲ್ಲುಗಳನ್ನು ನೀಡಿಲ್ಲ, ಅದಕ್ಕೆ ಅಧಿಕಾರಿಗಳು ನೀಡಿರುವ ಕಾರಣ ಗುಡ್ಡಗಾಡುಗಳಿಗೆ ರಸ್ತೆಯೇ ಇಲ್ಲ, ಇನ್ನು ನಿಮಗೆ ಸೈಕಲ್‌ಗಳು ಯಾಕೆ? ಎಂಬುದಾಗಿದೆ.

ರಾಜಕಾರಣದ ಬಗೆಗೂ ಈ ಜನಸಮುದಾಯದಲ್ಲಿ ತಿಳುವಳಿಕೆ ಅತ್ಯಂತ ಕಡಿಮೆ ಮಟ್ಟದಲ್ಲಿದೆ. ಎಂ.ಪಿ., ಎಂ.ಎಲ್.ಎ. ಚುನಾವಣೆಗಳು ನಡೆಯುವಾಗ ಬಹುಪಾಲು ಯಾವ ಪಕ್ಷದ ಅಭ್ಯರ್ಥಿಗಳೂ ಗಿರಿಕಾನನಗಳಲ್ಲಿ ವಾಸವಿರುವ ಇವರನ್ನು ನೇರವಾಗಿ ಭೇಟಿ ಮಾಡುವುದಿಲ್ಲ, ಬದಲಿಗೆ ತಮ್ಮ ಪಕ್ಷದ ಕಾರ್ಯಕರ್ತರನ್ನೋ, ಏಜೆಂಟರನ್ನೋ ಇವರ ಬಳಿಗೆ ಕಳಿಸುತ್ತಾರೆ. ಇಲ್ಲವೆ ಮಾದೇಶ್ವರ ಬೆಟ್ಟದಲ್ಲಿರುವ ಬೇಡಗಂಪಣರ ಯಜಮಾನರನ್ನು ಭೇಟಿ ಮಾಡಿ ಮತ ಯಾಚಿಸುತ್ತಾರೆ. ನಾಗಮಲೈ, ಪಡಸಲನಾಥ, ಹಿಂಡಿಗನಾಥ, ತುಳಸಿಕೆರೆ, ಮೆದಗಮನೆ, ಹಳೀಊರು ಎಂಬುವ ಗುಡ್ಡಗಾಡುಗಳಲ್ಲಿ ಮತಗಟ್ಟೆಗಳಿದ್ದು ಶೇ. ೩೦ರಿಂದ ೪೦ರಷ್ಟು ಮಾತ್ರ ಮತದಾನ ನಡೆಯುತ್ತದೆ. ಗೆದ್ದ ನಂತರ ರಾಜಕಾರಣಿ ಹಾಗೂ ಇವರ ಭೇಟಿ ಆಕಸ್ಮಿಕವಷ್ಟೆ, ಅಥವಾ ಇಲ್ಲವೇ ಇಲ್ಲ ಎಂದರೂ ತಪ್ಪಲ್ಲ. ಇನ್ನು ಸ್ಥಳೀಯ ರಾಜಕಾರಣಕ್ಕೆ ಬಂದರೆ ವಿಚಿತ್ರವೆಂಬಂತೆ ಮೀಸಲಾತಿ ಕಾರಣದಿಂದ ಮಾದೇಶ್ವರ ಬೆಟ್ಟ ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿ ಈ ಜನಾಂಗದ ಬೊಮ್ಮಯ್ಯ ಎಂಬುವವರು ಆಯ್ಕೆಯಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಮಹಿಳಾ ಮೀಸಲಾತಿ ಕಾರಣವಾಗಿ ಮಾದೇವಮ್ಮ ಎಂಬ ಮಹಿಳೆ ಆಯ್ಕೆಯಾಗಿದ್ದಾರೆ. (ಕೊಳ್ಳೇಗಾಲ) ತಾಲ್ಲೂಕು ಪಂಚಾಯ್ತಿ ಸದಸ್ಯರಾಗಿ ಮಾದಯ್ಯ ಎಂಬುವವರು ಸೇವೆ ಸಲ್ಲಿಸಿದ್ದಾರೆ. ಇವರನ್ನು ಸಂಪರ್ಕಿಸಿದಾಗ ಸದಸ್ಯರಾಗಿ ಪಂಚಾಯ್ತಿ ಆಡಳಿತದ ಬಗೆಗೆ ಸಾಕಷ್ಟು ಅರಿವು ಇಲ್ಲದಿರುವುದೂ ಹಾಗೂ ಆಯ್ಕೆಗೊಂಡ ಸದಸ್ಯರನ್ನು ಪ್ರಬಲಜಾತಿಗಳ ಸದಸ್ಯರು ನಿಯಂತ್ರಿಸುವುದೂ ಕಂಡುಬರುತ್ತದೆ. ಇಂತಹ ಸ್ಥಿತಿ ಬಹುತೇಕ ಎಲ್ಲಾ ಗ್ರಾಮ ಪಂಚಾಯ್ತಿಗಳ ಸ್ಥಿತಿಯಾಗಿದೆ ಎಂಬುದೂ ಎಲ್ಲರಿಗೂ ಗೊತ್ತಿರುವ ವಾಸ್ತವ ಸತ್ಯ. ಇಂತಹ ದುರಂತಗಳ ನಿವಾರಣೆಗೆ ಸ್ಥಳೀಯ ಆಡಳಿತದ ಬಗೆಗೆ, ಓಟಿನ ಮೌಲ್ಯ ಹಾಗೂ ಸಾಮಾಜಿಕ ನ್ಯಾಯದ ಬಗೆಗೆ ಸದಸ್ಯರಿಗೆ ಅರಿವು ಮೂಡಿಸಬೇಕಿದೆ.

ಸಂತ ಮಾದಾರಿ ಮಾದೇಶ್ವರ ಬೇಡಗಂಪಣರನ್ನು ತನ್ನ ಒಕ್ಕಲಾಗಿಸಿಕೊಂಡು ದೀಕ್ಷೆ ನೀಡುವ ಮೊದಲು, ಬೇಡಗಂಪಣರು ಬೇಟೆಗಾರರೂ ಮಾಂಸಾಹಾರಿಗಳೂ ಆಗಿದ್ದು ಆನಂತರ ಸಸ್ಯಾಹಾರಿಗಳಾಗಿದ್ದಾರೆ. ಇದಕ್ಕೆ ಪುರಾವೆಯಾಗಿ ಬೇಡಗಂಪಣರಲ್ಲೆ ಮಾದೇಶ್ವರನ ಒಕ್ಕಲಿಗೆ ಸೇರಿದವರು ಮತ್ತು ಸೇರದವರೆಂಬ ಎರಡು ವರ್ಗಗಳಿವೆ. ಮಾದೇಶ್ವರನ ಒಕ್ಕಲಿಗೆ ಸೇರಿದವರನ್ನು ತಮ್ಮಡಿಗಳೆಂದು ಕರೆಯುತ್ತಾರೆ. ಇದರೊಳಗೆ ದೊಡ್ಡಪಾಲು, ಚಿಕ್ಕಪಾಲು, ಕಾಡುವೀರನ ಪಾಲು ಎಂಬುದಾಗಿ ಮೂರು ಒಳಪಂಗಡಗಳಿವೆ. ಮಾದೇಶ್ವರನ ಒಕ್ಕಲಿಗೆ ಸೇರದ ವರ್ಗವನ್ನು ಗೌಡರು, ಒಕ್ಕಲಿಗರು ಎಂದು ಕರೆಯುತ್ತಾರೆ. ಈ ಒಕ್ಕಲಿಗ ವರ್ಗದಲ್ಲಿ ಸುಮಾರು ೩೦ ಒಳಪಂಗಡಗಳಿವೆ. ಇವರು ಸಂಪೂರ್ಣ ಮಾಂಸಾಹಾರಿಗಳಾಗಿದ್ದು ಮಾದೇಶ್ವರನನ್ನು ಆರಾಧಿಸುವುದಿಲ್ಲ, ಬದಲಿಗೆ ಒಂದೊಂದು ಒಳಪಂಗಡವೂ ತಮ್ಮದೇಯಾದ ಬುಡಕಟ್ಟು ಕುಲದೈವಗಳನ್ನು ಆರಾಧಿಸುತ್ತಾರೆ. ಇವರ ಆದಿಮ ಸಾಂಸ್ಕೃತಿಕ ಪದ್ಧತಿಗಳು ಇಂದಿಗೂ ಆಚರಣೆಯಲ್ಲಿವೆ. ಸಂಕ್ರಾಂತಿ ಸಂದರ್ಭದಲ್ಲಿ ಜೇನು ಬೇಟೆಗೆ ಎಲ್ಲರೂ ಹೋಗುತ್ತಾರೆ. ಈ ಎಲ್ಲಾ ಅಂಶಗಳೂ ಬೇಡಗಂಪಣರು ಆದಿವಾಸಿಗಳಾಗಿದ್ದು ಪರಿಶಿಷ್ಟ ಪಂಗಡವೆಂದು ಪರಿಗಣಿಸಲು ಸಹಾಯಕವಾಗಿವೆ.




ಈ ಹಿನ್ನೆಲೆಯಲ್ಲಿ ಎಚ್ಚೆತ್ತ ಬೇಡಗಂಪಣರ ಕೆಲವು ಕ್ರಿಯಾಶೀಲ ಯುವಕರು ಒಟ್ಟಾಗಿ ೨೦೦೦ನೇ ಸಾಲಿನಲ್ಲಿ ಮಾದೇಶ್ವರ ಬೆಟ್ಟದಲ್ಲಿ 'ಬೇಡಗಂಪಣ ಯುವಕ ಸಂಘ' ಎಂಬ ಸಂಘಟನೆಯನ್ನು ಸ್ಥಾಪಿಸಿಕೊಂಡು ನೋಂದಣಿ ಮಾಡಿಸಿ ತಮ್ಮ ಜನಾಂಗದ ವಿಮೋಚನೆಗೆ ತೊಡಗಿದ್ದಾರೆ. ಪ್ರೊ|| ರವಿವರ್ಮಕುಮಾರ್ ಅವರು ಕರ್ನಾಟಕ ಶಾಶ್ವತ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ತಮ್ಮ ಜನಾಂಗದ ಕುರಿತು ವರದಿಯನ್ನು ತಯಾರಿಸಿ ಮನವಿ ಸಲ್ಲಿಸಿರುತ್ತಾರೆ. ಆದರೆ ಅದರ ಪರಿಣಾಮವೇನೆಂಬ ವಿವರ ಈವರೆಗೂ ಯಾರಿಗೂ ಗೊತ್ತಿಲ್ಲ. ಈಗ ೨೦೦೬ರಿಂದ 'ಬೇಡಗಂಪಣ ನೌಕರರ ಕ್ಷೇಮಾಭಿವೃದ್ಧಿ ಸಂಘ' ಎಂಬುದನ್ನೂ ಮಾದೇಶ್ವರ ಬೆಟ್ಟದಲ್ಲಿ ಆರಂಭಿಸಿ ನೋಂದಣಿ ಮಾಡಿಸಿ ಚಟುವಟಿಕೆಗೆ ತೊಡಗಿದ್ದಾರೆ.

ಕ್ಷೇತ್ರಾಧ್ಯಯನದ ಮೂಲಕ ಕಂಡುಕೊಂಡಂತೆ ಪ್ರಮುಖವಾಗಿ ನಾಲ್ಕು ಬೇಡಿಕೆಗಳು ಈ ಸಮುದಾಯದ ಮುಂದಿವೆ.

೧. ಬುಡಕಟ್ಟಿನ ಬದುಕನ್ನೇ ಇಂದಿಗೂ ನಡೆಸುತ್ತಿರುವ ಇವರನ್ನು ಪರಿಶಿಷ್ಟ ಪಂಗಡವೆಂದು ಪರಿಗಣಿಸಬೇಕು.

೨. ವೀರಶೈವೀಕರಣಗೊಳ್ಳುತ್ತಿರುವ ಮಾದೇಶ್ವರ ದೇವಸ್ಥಾನದ ಸ್ವಾಯತ್ತತೆಯನ್ನು ಹಿಂದೆ ಇದ್ದಂತೆಯೇ ಅಂದರೆ ಬೇಡಗಂಪಣರಿಗೆ ಪರಂಪರಾಗತವಾಗಿ ಇದ್ದ ದೇವಾಲಯದ ಹಕ್ಕುಗಳನ್ನು ಕಾಯ್ದುಕೊಳ್ಳುವುದು.

೩. ಮಾದೇಶ್ವರ ಬೆಟ್ಟದ ದೇವಾಲಯಕ್ಕೆ ಬರುವ ಆದಾಯದಲ್ಲಿ ಶೇ. ೨೫ರಿಂದ ೩೦ರಷ್ಟು ಆದಾಯವನ್ನು ಈ ಸಮುದಾಯದ ಅಕ್ಷರ, ಆರೋಗ್ಯ, ವಸತಿ ಹಾಗೂ ಇನ್ನಿತರ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುವುದು.

೪. ಒಂದು ವೇಳೆ ಪ್ರವರ್ಗ ೩ಬಿನಲ್ಲೇ ಮುಂದುವರೆಸುವುದಾದರೆ ಈ ವರ್ಗಕ್ಕೆ (೩ಬಿಗೆ) ಸಿಗುವ ಸಕಲ ಸವಲತ್ತುಗಳು ಕೇವಲ ಅಲ್ಲಿನ ಬಲಿಷ್ಠ ಜಾತಿಗಳಿಗೆ ಮಾತ್ರ ದಕ್ಕುವಂತೆ ಮಾಡದೆ ಈ ಸಮುದಾಯಕ್ಕೂ ಮೀಸಲಾತಿಯ ಸಮಪಾಲು ದೊರೆಯಬೇಕು.

ಇವಿಷ್ಟೆ ಅಲ್ಲದೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಔದ್ಯೋಗಿಕವಾಗಿ ತೀರಾ ಹಿಂದುಳಿದಿರುವ ಬೇಡಗಂಪಣರ ಇನ್ನಿತರ ಮೂಲಭೂತ ಸೌಕರ್ಯಗಳ ಕುರಿತಾದ ಬೇಡಿಕೆಗಳೂ ನ್ಯಾಯಯುತವಾಗಿವೆ. ಅವರ ಈ ಹಕ್ಕೊತ್ತಾಯಗಳು ಮರೀಚಿಕೆಯಾಗದಿರಲು ಸಂಬಂಧಪಟ್ಟ ಆಯೋಗಗಳು, ಸಂಘ-ಸಂಸ್ಥೆಗಳು, ಜನಪ್ರತಿನಿಧಿಗಳು ಹಾಗೂ ಸರ್ಕಾರ ಇನ್ನಾದರೂ ಇವರ ಸಮಸ್ಯೆಗಳನ್ನು ತೆರೆದಕಣ್ಣುಗಳಿಂದ ನೋಡಬೇಕಿದೆ, ಈ ಜನಾಂಗದ ಏಳಿಗೆಯನ್ನು ಹಾರೈಸಿ ಗುಣಾತ್ಮಕವಾಗಿ ಕೂಡಲೆ ಕಾರ್ಯಪ್ರವೃತ್ತರಾಗಬೇಕಿದೆ.

**ಡಾ|| ಎಸ್. ನರೇಂದ್ರಕುಮಾರ್**
ಉಪನ್ಯಾಸಕರು
ಡಾ|| ಬಿ. ಆರ್. ಅಂಬೇಡ್ಕರ್ ಸಂಶೋಧನ ಹಾಗೂ ವಿಸ್ತರಣ ಕೇಂದ್ರ
ಮಾನಸಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು



## ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ

ಕೆ. ಎಸ್. ಪಾರ್ಥಸಾರಥಿ

ಪುಟ : ೧೪೪ ಬೆಲೆ : ರೂ. ೯೦

ನವಕರ್ನಾಟಕ ಪ್ರಕಾಶನ, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯
ಬೆಂಗಳೂರು - ೫೬೦ ೦೦೧

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕೆ ೧೫೦ ವರ್ಷಗಳು ತುಂಬಿದ ಸಂದರ್ಭದಲ್ಲೇ ಕೃತಿ ಪ್ರಕಟವಾಗಿದೆ. ೧೮೫೭ರ ಸಿಪಾಯಿದಂಗೆಯ ಬಗೆಗೆ ಸಾಕಷ್ಟು ಮಾಹಿತಿಗಳನ್ನು ಒಂದೆಡೆ ಕಲೆಹಾಕಿ ಈ ಪುಸ್ತಕವನ್ನು ರಚಿಸಲಾಗಿದೆ. ದಂಗೆಯ ಹಿನ್ನೆಲೆ, ಅದು ನಡೆದುಬಂದ ದಾರಿ, ಅದರ ಪರಿಣಾಮಗಳನ್ನು ಸಚಿತ್ರವಾಗಿ ಕಟ್ಟಿಕೊಡಲಾಗಿದೆ. ಇವುಗಳ ಬಗೆಗೆ ಲಭ್ಯವಿರುವ ಲಿಖಿತ ಮಾಹಿತಿಗಳನ್ನು ಮಾತ್ರವಲ್ಲದೆ ಜನಪದರಲ್ಲಿ ಲಭ್ಯವಿರುವ ಮಾಹಿತಿಗಳನ್ನು ಸಹ ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಕಾರಣದಿಂದಲೇ ಉತ್ತಮ ಆಕರ ಗ್ರಂಥವಾಗಿದೆ. ಇಡೀ ಪುಸ್ತಕದ ಓದು ಕೇವಲ ಮಾಹಿತಿ ಪುಸ್ತಕದ ಓದಿನಂತೆ ಭಾರವೆನಿಸದೆ ಲೇಖಕರ ಬರಹದ ಶೈಲಿಯ ಕಾರಣದಿಂದಾಗಿ ಆಸಕ್ತಿದಾಯಕವಾಗಿದೆ.



## ಮರಳಿ ಬರಲಿದೆ ಸಮಾಜವಾದ

(ಸಮಕಾಲೀನ ಸಮಾಜವಾದಿ ಚಿಂತನೆಗಳು)

ಡಿ. ಎಸ್. ನಾಗಭೂಷಣ

ಪುಟ : ೧೪೮ ಬೆಲೆ : ರೂ. ೬೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಜಾಗತೀಕರಣ ತಂದೊಡ್ಡುತ್ತಿರುವ ಅಪಾಯ ಆತಂಕಗಳ ಹಿನ್ನೆಲೆಯಲ್ಲಿ ಪರ್ಯಾಯ ಅಭಿವೃದ್ಧಿ ಮಾರ್ಗಗಳ ಹುಡುಕಾಟ ನಡೆಯುತ್ತಿದೆ. ಈ ಕೃತಿಯು ಆ ಬಗೆಯ ಪರ್ಯಾಯ ಅಭಿವೃದ್ಧಿ ಮಾರ್ಗಕ್ಕೆ ಸಮಾಜವಾದದ ಹಾದಿ ಸೂಕ್ತ ಎಂಬ ನಂಬಿಕೆಯನ್ನು ಬಿಂಬಿಸುತ್ತದೆ. ಪತ್ರಿಕೆಗಳಿಗಾಗಿ ಬರೆದ ಲೇಖನಗಳು ಇಲ್ಲಿ ಸಂಕಲಿತಗೊಂಡಿವೆ. ಸಮಕಾಲೀನ ಸಾಮಾಜಿಕ, ರಾಜಕೀಯ ಸನ್ನಿವೇಶಗಳಿಗೆ ನೀಡಿರುವ ಲೇಖಕರ ಪ್ರತಿಕ್ರಿಯೆಗಳನ್ನು ಇಲ್ಲಿ ಕಾಣಬಹುದಾಗಿದೆ. ಲೋಹಿಯಾ ಬಗ್ಗೆ ಬರೆದಿರುವ ಲೇಖನ ಲೋಹಿಯಾ ವ್ಯಕ್ತಿತ್ವವನ್ನು ಸಶಕ್ತವಾಗಿ ಬಿಂಬಿಸುತ್ತದೆ. ಜಾಗತೀಕರಣ, ಸಮಾಜವಾದ, ಪರ್ಯಾಯ ಬದುಕಿನ ಕ್ರಮಗಳು ಇವುಗಳ ಬಗೆಗಿನ ಚಿಂತನೆ ಸುತ್ತ ಇಲ್ಲಿನ ಲೇಖನಗಳು ಹೆಣೆದುಕೊಂಡಿವೆ.

## ಕನ್ನಡ ಸಾಹಿತ್ಯದಲ್ಲಿ ಪ್ರತಿಬಿಂಬಿತವಾದ ಇಸ್ಲಾಂ ಸಂಸ್ಕೃತಿ

ಡಾ|| ಎನ್. ಇಸ್ಮಾಯಿಲ್

ಪುಟ : ೩೮೦ ಬೆಲೆ : ರೂ. ೩೦೦

**ಶಮಾ ಪ್ರಕಾಶನ,** 'ಶಮಾ', ದೆಕ್ಕಾಡು, ಮುನ್ನೂರು ಅಂಚೆ,
ಮಂಗಳೂರು - ೫೭೫ ೦೨೭

ಪಿಎಚ್.ಡಿ. ಮಹಾಪ್ರಬಂಧ ಈ ಕೃತಿ. ಕರ್ನಾಟಕದಲ್ಲಿ ಇಸ್ಲಾಂ ಧರ್ಮ, ಇಲ್ಲಿನ ಮುಸ್ಲಿಮರ ಜೀವನ, ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳು ಇವುಗಳನ್ನು ಕೃತಿಯ ಮೊದಲ ಅಧ್ಯಾಯಗಳಲ್ಲಿ ನೀಡಲಾಗಿದೆ. ನಂತರದ ಅಧ್ಯಾಯಗಳು ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದ ಮುಸ್ಲಿಂ ಬರಹಗಾರರ ಕೃತಿಗಳನ್ನು ಚರ್ಚಿಸುತ್ತವೆ. ಇದರೊಂದಿಗೆ ಇಸ್ಲಾಮೇತರ ಲೇಖಕರ ಕೃತಿಗಳಲ್ಲಿ ಚಿತ್ರಿತವಾಗಿರುವ ಮುಸ್ಲಿಂ ಬದುಕಿನ ಚಿತ್ರಣ ಇವುಗಳನ್ನು ಚರ್ಚಿಸುತ್ತವೆ. ಕನ್ನಡ ಬರಹಗಾರರ ಕೃತಿಗಳ ಮೂಲಕ ಇಲ್ಲಿನ ಇಸ್ಲಾಂ ಸಂಸ್ಕೃತಿಯ ಸ್ವರೂಪವನ್ನು ವಿಸ್ತೃತವಾಗಿ ಅಭ್ಯಸಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ.

## ಕರ್ನಾಟಕ ಏಕೀಕರಣ (ಬಳ್ಳಾರಿ ಜಿಲ್ಲೆ ಹಿನ್ನೆಲೆಯಲ್ಲಿ)

ಕೋ. ಚೆನ್ನಬಸಪ್ಪ

ಪುಟ : ೧೪೦ ಬೆಲೆ : ರೂ. ೬೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಸುಮಾರು ಒಂದು ದಶಕದ ಕಾಲ ಹೋರಾಟದಲ್ಲಿ ಭಾಗವಹಿಸಿದ ಕೋ. ಚೆನ್ನಬಸಪ್ಪನವರು ಬರೆದಿರುವ ಕೃತಿ. ಹೋರಾಟದ ಅವಧಿಯಲ್ಲಿನ ತಮ್ಮ ಅನುಭವಗಳು ಹಾಗೂ ಲಭ್ಯವಿರುವ ದಾಖಲೆಗಳನ್ನು ಬಳಸಿಕೊಂಡು ಈ ಕೃತಿಯನ್ನು ರಚಿಸಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಹೋರಾಟದ ಹಿನ್ನೆಲೆಯಲ್ಲಿ ಒಟ್ಟಾರೆ ಕರ್ನಾಟಕ ಏಕೀಕರಣ ಚಳುವಳಿಯ ಸ್ವರೂಪ ಹಾಗೂ ಘಟನೆಗಳನ್ನು ನಿರೂಪಿಸಲಾಗಿದೆ. ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದ ಹಲವು ಮಾಹಿತಿಗಳನ್ನು ನೀಡಿರುವ ಒಳ್ಳೆಯ ಆಕರಗ್ರಂಥವಾಗಿದೆ.

## ಯಾದ್ ವಶೇಮ್

ನೇಮಿಚಂದ್ರ

ಪುಟ : ೨೮೮ ಬೆಲೆ : ರೂ. ೧೭೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯
ಬೆಂಗಳೂರು - ೫೬೦ ೦೦೧

ಇತಿಹಾಸದ ಪುಟಗಳನ್ನು ಸೇರಿಹೋದ ಘಟನೆಗಳನ್ನು ತಮ್ಮ ಕಾಲ್ಪನಿಕ ಕತೆಯ ಎಳೆಯೊಂದಿಗೆ ಹೆಣೆದ ಕಾದಂಬರಿ ಯಾದ್ ವಶೇಮ್. ಹಿಟ್ಲರ್‌ನ ದೌರ್ಜನ್ಯದಲ್ಲಿ ಜರ್ಮನಿಯಲ್ಲಿ ನರಳಿದ ಯಹೂದಿಗಳ ಬದುಕು. ಅಲ್ಲಿಂದ ತಪ್ಪಿಸಿಕೊಂಡು ವಲಸೆಹೋದ ಕುಟುಂಬಗಳು ಹಲವು. ಹಾಗೆ ಭಾರತಕ್ಕೆ ವಲಸೆ ಬಂದ ಹೆಣ್ಣುಮಗಳೊಬ್ಬಳು ತಾನು ಸಾಯುವ ಮೊದಲು ತನ್ನ ಗತಬದುಕು ಹಾಗೂ ಸಂಬಂಧಗಳನ್ನು ನೋಡಬೇಕೆಂದು ಅರಸಿ ಹೊರಟ ಕತೆಯಿದು. ನೆನಪಿನ ಸುರುಳಿ ಬಿಚ್ಚುತ್ತಾ ಹೋದಂತೆ ಇಲ್ಲಿ ಕತೆ ಅನಾವರಣಗೊಳ್ಳುತ್ತಾ ಸಾಗುತ್ತದೆ. ೩೪ ಅಧ್ಯಾಯಗಳಲ್ಲಿ ಕಾದಂಬರಿ ಹರಡಿಕೊಂಡಿದೆ. ಪ್ರತಿಪಾತ್ರವೂ ತನ್ನ ನೆನಪುಗಳನ್ನು ಮೆಲುಕು ಹಾಕುತ್ತಲೇ ಓದುಗರಿಗೆ ಇದಿರಾಗುತ್ತದೆ ಹಾಗೂ ಘಟನೆಗಳನ್ನು ಅವಲೋಕಿಸುತ್ತಾ ಕತೆಯನ್ನು ಮುಂದುವರಿಸುತ್ತದೆ. ನೇಮಿಚಂದ್ರರ ಆಕರ್ಷಣೀಯ ಶೈಲಿಯ ಹೊರತಾಗಿ ಕೂಡ ಕಾದಂಬರಿಯ ದೀರ್ಘತೆ ಓದಿಗೆ ತೊಡಕನ್ನುಂಟುಮಾಡುತ್ತದೆ. ಕತೆಯನ್ನು ಅತಿಯಾಗಿ ಲಂಬಿಸಿರುವುದರಿಂದಲೇ ಈ ಸಮಸ್ಯೆ ಕೃತಿಯನ್ನು ಕಾಡಿದೆ.

## ಬಾಜಿರ ಕಂಬದ ಒಳಸುತ್ತು (ಕಥಾ ಸಂಕಲನ)

ಮಣಿಮಾಲಿನಿ ವಿ. ಕೆ.

ಪುಟ : iv + ೧೭೬ ಬೆಲೆ : ರೂ. ೧೨೦

**ವಸುಧಾ ಪ್ರಕಾಶನ,** ಪಂಜಳ, ಉಪ್ಪಿನಂಗಡಿ, ದಕ್ಷಿಣ ಕನ್ನಡ ಜಿಲ್ಲೆ - ೫೭೪ ೨೪೧



ಲೇಖಕಿಯ ಮರಣಾನಂತರ ಪ್ರಕಟವಾಗುತ್ತಿರುವ ೨೦ ಕತೆಗಳ ಸಂಕಲನ. ಭಾಷೆ ಇಲ್ಲಿನ ಕತೆಗಳ ಮೂಲ ಜೀವದ್ರವ್ಯವಾಗಿದೆ. ಪ್ರಾದೇಶಿಕ ಭಾಷೆಯ ಸೊಗಡು ಗಮನ ಸೆಳೆಯುತ್ತದೆ. ವೈದೇಹಿಯವರ ಬರಹಗಳನ್ನು ನೆನಪಿಸುವಂತಿದೆ. ಆಧುನಿಕ ಸ್ತ್ರೀ ಪಾತ್ರಗಳೊಂದಿಗೆ, ಪುರಾಣ ಪಾತ್ರಗಳಾದ ಅಹಲ್ಯೆ, ಅಮೃತಮತಿ, ಊರ್ಮಿಳೆ ಯಂತಹವರ ಮಾನಸಿಕ ಲೋಕದ ಚಿತ್ರಣವನ್ನು ಇಲ್ಲಿ ಕಾಣಬಹುದಾಗಿದೆ. ಕತೆಗಳ ವಸ್ತುವಿನ ಮಂಡನೆ ಭಿನ್ನವೆನಿಸಿದರೂ ಕೂಡ ಸರಾಗವಾದ ಓದು ಸಾಧ್ಯವಾಗುವುದಿಲ್ಲ. ಮನುಷ್ಯ ಸಂಬಂಧಗಳ ಆಳ, ಅಗಲ, ಎತ್ತರಗಳನ್ನು ಪಾತಾಳಗರಡಿ ಹಾಕಿ ಶೋಧಿಸುವ ಶಕ್ತಿ ಈ ಕೃತಿಗಿದೆ.

**ಹೇಮಾ ಎಸ್.**
D/o ಶ್ರೀನಿವಾಸಮೂರ್ತಿ
ನಂ. ೧೭, ೫ನೇ ಅಡ್ಡರಸ್ತೆ, ೨೨ನೇ ಮುಖ್ಯರಸ್ತೆ
೫ನೇ ಫೇಸ್, ಜೆ.ಪಿ. ನಗರ, ಬೆಂಗಳೂರು - ೫೬೦ ೦೭೮

# ಸೇತುಸಮುದ್ರಂ ಯೋಜನೆ

## ಅಖಿಲ ಭಾರತ ಜನವಿಜ್ಞಾನ ಸಂಘಟನೆಗಳ ಕಾರ್ಯಜಾಲದ ಅಧಿಕೃತ ಪ್ರಕಟಣೆ

**ವೈಜ್ಞಾನಿಕವಾಗಿ ದೊರಕುವ ಸಾಕ್ಷ್ಯಾಧಾರಗಳನ್ನು ಮತ್ತು ವಾಸ್ತವಾಂಶಗಳನ್ನು ಆಧಾರವಾಗಿಟ್ಟುಕೊಂಡು ಸೇತುಸಮುದ್ರಂ ಯೋಜನೆಯ ಉಪಯುಕ್ತತೆಯನ್ನು ನಿರ್ಧರಿಸಬೇಕು. ವಿವಾದದ ಸುಳಿಯಾಗಿರುವ ಜಲಸಂಧಿಯಲ್ಲಿ ಯಾವುದೇ ಮಾನವ ನಿರ್ಮಿತ ರಚನೆಯಿದೆ ಎಂಬುದಕ್ಕೆ ಸಾಕ್ಷ್ಯಾಧಾರವೇ ಇಲ್ಲದಿರುವುದರಿಂದ ಆದಕ್ಕೆ ಗಂಡಾಂತರ ಒದಗಿದೆ ಎಂಬ ವಾದದಲ್ಲಿ ಹುರುಳಿಲ್ಲ. ಸಂಘಟನೆಗಳಾಗಲೀ ರಾಜಕೀಯ ಪಕ್ಷಗಳಾಗಲೀ ಅವೈಜ್ಞಾನಿಕ ಮತ್ತು ಅವೈಚಾರಿಕ ನೆಲೆಯಲ್ಲಿ ಸಮಸ್ಯೆಯನ್ನು ಕಗ್ಗಂಟು ಮಾಡುವ ಆಗತ್ಯವಿಲ್ಲ ಎಂಬುದನ್ನು ಇಲ್ಲಿನ ಅಂಶಗಳು ಸಾರಿಹೇಳುತ್ತವೆ.**

ಅಮಿತ್ ಸೇನ್‌ಗುಪ್ತ




ಕಳೆದ ಒಂದೆರಡು ತಿಂಗಳುಗಳಿಂದ ಸೇತುಸಮುದ್ರಂ ಯೋಜನೆಗೆ ಸಂಬಂಧಿಸಿದಂತೆ ಕೋಮುವಾದಿ ಸಂಘಟನೆಗಳ ಹಾಗೂ ಭಾರತೀಯ ಜನತಾ ಪಕ್ಷ ಮತ್ತು ಇತರ ಕೋಮುವಾದಿ ಪಕ್ಷಗಳ ನೇತೃತ್ವದಲ್ಲಿ ಚಳುವಳಿಯೊಂದು ಸಂಘಟಿತವಾಗುತ್ತಿದೆ. 'ಸೇತು'ವು ರಾಮನು ಶ್ರೀಲಂಕಾಕ್ಕೆ ದಾಟಿ ಹೋಗಲು ನಿರ್ಮಿಸಿದ ಸೇತುವೆಯಾಗಿದೆ ಮತ್ತು ಈಗಿನ ಸರ್ಕಾರವು ಸೇತುಸಮುದ್ರಂ ಯೋಜನೆಯನ್ನು ಕೈಗೆತ್ತಿಕೊಳ್ಳುವ ನೆಪದಲ್ಲಿ 'ಹಿಂದು' ಭಾರತದ ಗತ ವೈಭವಕ್ಕೆ ಸಾಕ್ಷಿಯಾಗಿ ಉಳಿದಿರುವ 'ಸೇತು'ವನ್ನು ನಾಶಪಡಿಸಲು ಪಿತೂರಿ ನಡೆಸಿದೆ ಎಂಬುದು ಈ ಸಂಘಟನೆಗಳ ಮತ್ತು ಪಕ್ಷಗಳ ಆರೋಪವಾಗಿದೆ. ಈ ವಿವಾದದ ಬಗ್ಗೆ ಇರುವ ಕೆಲವು ಮುಖ್ಯ ಸಂಗತಿಗಳನ್ನು ಸಾರ್ವಜನಿಕರ ಗಮನಕ್ಕೆ ತರುವುದು ನಮ್ಮ ಉದ್ದೇಶವಾಗಿದೆ.

### ೧. ಸೇತುಸಮುದ್ರಂ ಕಡಲ್ಗಾಲುವೆ ಯೋಜನೆ

ಸೇತುಸಮುದ್ರಂ ಕಡಲ್ಗಾಲುವೆ ಯೋಜನೆಯು ಭಾರತ ಮತ್ತು ಶ್ರೀಲಂಕಾ ದೇಶಗಳ ನಡುವೆ ನೌಕಾಯಾನವನ್ನು ಸ್ಥಾಪಿಸುವ ದಿಕ್ಕಿನಲ್ಲಿ ಕಡಲ್ಗಾಲುವೆಯನ್ನು ನಿರ್ಮಾಣ ಮಾಡುವ ಯೋಜನೆಯಾಗಿದೆ. ಇದರ ಪ್ರಕಾರ ಭಾರತ ಮತ್ತು ಶ್ರೀಲಂಕಾಗಳ ನಡುವೆ ವಿಸ್ತರಿಸಿರುವ ಜಲಸಂಧಿ ಮಾರ್ಗದಲ್ಲಿ ಬೃಹತ್ ನಾಲೆಯನ್ನು ತೋಡಲಾಗುವುದು. ಯೋಜನೆಯು ಪೂರ್ಣಗೊಂಡಲ್ಲಿ ಭಾರತದ ಗಡಿಯಂಚಿನ ಜಲಮಾರ್ಗದ ಮೂಲಕ ಶ್ರೀಲಂಕಾಕ್ಕೆ ನೇರ ನೌಕಾ ಸಂಚಾರವನ್ನು ಏರ್ಪಡಿಸುವುದು ಸಾಧ್ಯವಾಗುತ್ತದೆ. ಇದರಿಂದ ಶ್ರೀಲಂಕಾ ದ್ವೀಪವನ್ನು ಪ್ರದಕ್ಷಿಣೆಹಾಕಿಕೊಂಡು ಸಂಚರಿಸುವ ಸಧ್ಯದ ನೌಕಾ ಸಾರಿಗೆ ವ್ಯವಸ್ಥೆಯು ತಪ್ಪುತ್ತದೆ. ಈ ಕಾಲುವೆಯು ಒಟ್ಟು ೧೫೯ ಕಿ.ಮೀ. ಉದ್ದದ್ದಾಗಿದೆ. ಇದರಿಂದ ಸುಮಾರು ೭೮೦ ಕಿ.ಮೀ.ಗಳ (೪೨೪ ನಾಟಿಕಲ್ ಮೈಲುಗಳು) ಸುತ್ತು ಪ್ರಯಾಣವನ್ನು ಕಡಿಮೆಗೊಳಿಸಬಹುದು. ಪ್ರಯಾಣದ ಕಾಲಾವಧಿಯಲ್ಲಿ ಸುಮಾರು ೩೦ ಗಂಟೆಗಳಷ್ಟು ಉಳಿತಾಯವನ್ನು ಸಾಧಿಸಬಹುದು.

### ೨. ತಕರಾರು ಏನು ?

ಸಮುದ್ರದ ತಳಮಟ್ಟದಲ್ಲಿ ತೆಳುಪದರವಾಗಿ ಶೇಖರಣೆಯಾಗಿರುವ ಮರಳು ದಿಬ್ಬಗಳ ಸರಣಿಯು (ಇದನ್ನು ಆದಮ್ಸ್ ಬ್ರಿಜ್ ಎಂಬ ಹೆಸರಿನಿಂದ ಕರೆಯಲಾಗುತ್ತದೆ) ನಾಶವಾಗುತ್ತದೆಂಬುದು ಭಾರತೀಯ ಜನತಾ ಪಕ್ಷದಂತಹ ರಾಜಕೀಯ ಪಕ್ಷಗಳ ಮತ್ತು ಹಿಂದುತ್ವವಾದಿ ಸಂಘಟನೆಗಳ ಪ್ರಮುಖ ತಕರಾರು. ಹೀಗೆ ಶೇಖರಣೆಯಾಗಿರುವ ಮರಳ ರಾಶಿಯು ವಾಸ್ತವದಲ್ಲಿ ಮಾನವ ನಿರ್ಮಿತವಾಗಿದ್ದು, ರಾಮಾಯಣದಲ್ಲಿ 'ವಾನರ ಸೇನೆ'ಯ ನೆರವಿನಿಂದ ರಾಮನು ಶ್ರೀಲಂಕೆಗೆ ದಾಟಿಹೋಗಲು ನಿರ್ಮಿಸಿದ 'ರಾಮಸೇತು'ವೇ ಆಗಿದೆ ಎಂಬುದು ಅವುಗಳ ವಾದ. ''ಆದಮ್ಸ್ ಬ್ರಿಜ್ ಎಂಬುದು ಮಾನವನಿಂದ ನಿರ್ಮಿತವಾದ ಸುಮಾರು ೧.೭೫ ದಶಲಕ್ಷ ವರ್ಷಗಳಷ್ಟು ಹಳೆಯದಾದ ಜೋಡಣೆಯಾಗಿದೆ. ಇದಕ್ಕೆ ಅಮೆರಿಕಾದ ರಾಷ್ಟ್ರೀಯ ಬಾಹ್ಯಾಕಾಶ ಸಂಸ್ಥೆಯಲ್ಲಿ ಲಭ್ಯವಿರುವ ಛಾಯಾಚಿತ್ರಗಳು ಸಾಕ್ಷ್ಯಾಧಾರವನ್ನು ಒದಗಿಸಿವೆ'' ಎಂಬುದಾಗಿ ಕೆಲವು ಸಂಘಟನೆಗಳು ವಾದಿಸತೊಡಗಿದವು. ಛಾಯಾಚಿತ್ರಗಳು 'ಸಾಕ್ಷ್ಯಾಧಾರ'ಗಳಾಗಿವೆ ಎಂಬ ಅವರ ವಾದವನ್ನು 'ನಾಸಾ' ಅಂದೇ ತಿರಸ್ಕರಿಸಿತು. ಈ ವಿವಾದವು ಇತ್ತೀಚೆಗೆ ತಲೆಯೆತ್ತಿದಾಗ ನಾಸಾ ತನ್ನ ನಿಲುವನ್ನು ಮತ್ತೊಮ್ಮೆ ಸ್ಪಷ್ಟಪಡಿಸಿತು. ನಾಸಾದ ವಕ್ತಾರರಾದ ಮೈಕೆಲ್ ಬ್ರೌಕುಸ್, ''ಕೆಲವರು ತಮ್ಮ ವಾದವನ್ನು ಪುಷ್ಟೀಕರಿಸಲು ನಮ್ಮ ಬಾಹ್ಯಾಕಾಶ ಯಾತ್ರಿಗಳು ತೆಗೆದ ಛಾಯಾಚಿತ್ರಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ಛಾಯಾಚಿತ್ರಗಳನ್ನು ಆಧಾರವಾಗಿಟ್ಟುಕೊಂಡು ಯಾವುದೇ ಖಚಿತ ನಿಲುವನ್ನು ತಳೆಯುವುದು ಸಾಧ್ಯವಿಲ್ಲ. ನಮ್ಮ ಗಗನಗಾಮಿಗಳು ತೆಗೆದಿರುವ ಛಾಯಾಚಿತ್ರ

ಗಳಿಂದ ಜಲಸಂಧಿಯ ಸಮುದ್ರ ತಳದ ಬಗೆಗಿನ ಕಾಲಮಾನ, ಭೂಪದರಗಳು, ಭೌಗೋಳಿಕ ರಚನೆ ಅಥವಾ ಮಾನವ ಶಾಸ್ತ್ರೀಯ ಸ್ಥಿತಿಗತಿಗಳ ಬಗ್ಗೆ ನಿಖರವಾದ ನಿರ್ಧಾರಕ್ಕೆ ಬರುವುದು ಸಾಧ್ಯವೇ ಇಲ್ಲ. ಆದ್ದರಿಂದ ಈ ವಾದವು ಸಂಪೂರ್ಣವಾಗಿ ನಿರಾಧಾರವಾದ್ದು'' ಎಂಬುದಾಗಿ ಸ್ಪಷ್ಟೀಕರಣವನ್ನು ನೀಡಿದರು.

**೩. ಮಾನವನ ಖಂಡಾಂತರ ಪಯಣ ಮತ್ತು ವಸಾಹತು**

೧.೭೫ ದಶಲಕ್ಷ ವರ್ಷಗಳ ಹಿಂದೆ ರಾಮನು ಜೀವಿಸುತ್ತಿದ್ದ ಎಂಬ ವಾದವನ್ನು ಕುರಿತಂತೆ ವೈಜ್ಞಾನಿಕ ಆಧಾರಗಳು ನಮ್ಮ ಮುಂದಿವೆ. ನಾವು ಅವನ್ನು ವಸ್ತುನಿಷ್ಠ ನೆಲೆಯಲ್ಲಿ ಗಮನಿಸಬೇಕು. 'ಹೋಮೋ ಸೇಪಿಯನ್ಸ್' ಅವಸ್ಥೆಯಲ್ಲಿ ಮನುಷ್ಯ ಜಾತಿ ಎನ್ನಬಹುದಾದ ಪ್ರಾಣಿಯು ಆಫ್ರಿಕಾ ಖಂಡದ ಸವನ್ನಾ ಪ್ರಾಂತ್ಯದಲ್ಲಿ ಉಗಮವಾದದ್ದು ವರ್ತಮಾನ-ಪೂರ್ವ ಸುಮಾರು ೨ ಲಕ್ಷ ವರ್ಷಗಳ ಸುಮಾರಿಗೆ. ವಿಶ್ವಾದ್ಯಂತ ಅಂಗೀಕೃತವಾಗಿರುವ ಸಂಗತಿ ಇದು. ಅದರ ಪೂರ್ವಿಕನೆನ್ನಬಹುದಾದ (ಕಾಲುಗಳ ಸಹಾಯದಿಂದ ಲಂಬಾಕೃತಿಯಲ್ಲಿ ನಿಲ್ಲಬಲ್ಲ) 'ಹೋಮೋ ಇರೆಕ್ಟಸ್' ಈಗ ಗುರುತಿಸಲಾಗುವ ಏಷ್ಯಾ, ಯೂರೋಪ್ ಮತ್ತು ದೂರ ಸಾಗರ – ಮಧ್ಯ ಮತ್ತು ದಕ್ಷಿಣ ಪೆಸಿಫಿಕ್ ಸಾಗರ ದ್ವೀಪಗಳುಳ್ಳ – ಖಂಡಗಳಲ್ಲಿ ಕಂಡುಬಂದದ್ದು ವರ್ತಮಾನ – ಪೂರ್ವ ಸುಮಾರು ೪೦ ಸಾವಿರ ವರ್ಷಗಳ ಸುಮಾರಿಗೆ. ಅವನು ಅಮೆರಿಕಾ ಖಂಡಗಳಲ್ಲಿ ವಾಸಸ್ಥಾನವನ್ನು ಕಂಡುಕೊಂಡದ್ದು ೧೦ ಸಾವಿರ ವರ್ಷಗಳ ಅನಂತರದ ಕಾಲದಲ್ಲಿ. ಹೋಮೋ ಸೇಪಿಯನ್ಸ್ ಖಂಡಾಂತರ ಪ್ರಯಾಣಿಸಿ ಹೊಸ ಹೊಸ ವಸಾಹತು ನೆಲೆಗಳನ್ನು ಕಂಡುಕೊಳ್ಳುವ ಪ್ರಕ್ರಿಯೆಯ ನಡುವೆಯೇ 'ಹೋಮೋ ಇರೆಕ್ಟಸ್' ವರ್ಗದ ಸಂತಾನ ಪ್ರಭೇದಗಳು ಕಾಣೆಯಾಗತೊಡಗಿದವು. ಅಂದರೆ, ೧.೫-೨ ದಶಲಕ್ಷ ವರ್ಷಗಳ ಹಿಂದೆ ಅಸ್ತಿತ್ವದಲ್ಲಿದ್ದಿರಬಹುದಾದರೆ ಅದು ಹೋಮೋ ಇರೆಕ್ಟಸ್‌ನ ವಂಶಕ್ಕೆ ಸೇರಿದ ಪೂರ್ವ – ಮನುಷ್ಯ ಜಾತಿಯ ಏಕೈಕ ಪ್ರಾರಂಭಿಕ ಪ್ರಭೇದವೆಂದು ಮಾತ್ರ ಹೇಳಲು ಸಾಧ್ಯ. ಈ ಸಾಧ್ಯತೆಯನ್ನು ಮೀರಿ ಹೋಮೋ ಸೇಪಿಯನ್ಸ್ ವಂಶವೃಕ್ಷಕ್ಕೆ ಸೇರಿದ ಆಧುನಿಕ ಮಾನವ ಜೀವಶಾಖೆಯಾಗಿರುವುದು ಸಾಧ್ಯವೇ ಇಲ್ಲ. ಹೋಮೋ ಇರೆಕ್ಟಸ್‌ನ ಪ್ರಾರಂಭಿಕ ವಂಶಜರ ಪಳೆಯುಳಿಕೆಗಳು ಭಾರತ ಉಪಖಂಡದಲ್ಲಿ ಇದುವರೆಗೆ ಎಲ್ಲೂ ದೊರೆತಿಲ್ಲ. ಅಷ್ಟೇ ಅಲ್ಲದೆ ಆ ವಂಶವೃಕ್ಷದ ಆಗಿನ ಜೀವಶಾಖೆಗಳ ಸ್ವಭಾವ, ಗುಣ ಮತ್ತು ಲಕ್ಷಣಗಳು ಅತ್ಯಂತ ಒರಟಾಗಿದ್ದು ದಾಂಡಿಗ ಕಪಿಯಾಕೃತಿ ಹೊಂದಿದ್ದ ಗಡಸು ಮಾನವ-ಪ್ರಾಣಿಯ ಒರಟು ಸ್ವಭಾವ, ಒರಟು ಗುಣ ಮತ್ತು ಒರಟು ಲಕ್ಷಣಗಳನ್ನು ಹೋಲುತ್ತಿದ್ದವು ಎನ್ನಬಹುದು. ರಾಮಾಯಣದಲ್ಲಿ ಚಿತ್ರಣಗೊಂಡಿರುವ ಸುಧಾರಿತ ಮಟ್ಟದ ನಾಗರಿಕತೆಯನ್ನು ನಿರ್ಮಾಣ ಮಾಡುವ ಸಾಮರ್ಥ್ಯವು ಅವನಿಗಿದ್ದಿರಲು ಸಾಧ್ಯವೇ ಇಲ್ಲ.

**೪. ಭಾರತ ಮತ್ತು ಶ್ರೀಲಂಕಾಗಳ ನಡುವಿನ ಭೌತಿಕ ಸ್ವಭಾವದ ಸಂಬಂಧ**

ಪೂರ್ವಯುಗಗಳ ಹಲವು ಕಾಲಘಟ್ಟಗಳಲ್ಲಿ ಭಾರತ ಮತ್ತು ಶ್ರೀಲಂಕಾ ದೇಶಗಳನ್ನು ಪ್ರಕೃತಿದತ್ತವಾದ ಭೂಸೇತುವೆಯು ಒಂದುಗೂಡಿಸಿತ್ತು ಎಂಬುದು ಈಗಾಗಲೇ ಎಲ್ಲರಿಗೂ



# ಮೈಸೂರು ದೊಡ್ಡ ಗಡಿಯಾರ

ಮೈಸೂರು ದೊಡ್ಡ ಗಡಿಯಾರ ಸರ್ಕಲ್
ಕಪ್ಪು ಸೈಜುಗಲ್ಲು ಕಟ್ಟಿದ ಚೌಕ ಎತ್ತರದ ಕಂಬ
ನೆತ್ತಿಮೇಲೆ ಗುಂಬಜ಼್ ಮಿನಾರು ಕಮಾನಿನ ಟೋಪಿ
ಹಣೆಮೇಲೆ ಚತುರ್ಮುಖ ಬ್ರಿಟಿಷ್ ಗಡಿಯಾರ
(ಎಂದೂ ಮುಳುಗದ ಸೂರ್ಯ)
ಚಾಚುತಪ್ಪದೆ ಜಗ ಅಳೆದು ತೋರುವ ಎರಡು
ಲೋಹದ ಮುಳ್ಳು
ಎದುರುಗಡೆ ಒಡೆಯರ ಮಾಜಿ ಮಹಲು
ವಾರಕ್ಕೊಮ್ಮೆ ಮೈತುಂಬ ಝುಗಝುಗ ಬೆಳಕಿನ ಸಾಲು.

ತೋಪು ಹಾರಿಸಿತು ಎದೆಗೆ,
ಟೀಪು ಮಜಾರಿ*ನ ಮಿನಾರು...

ತಲೆಗೆ ಟೋಪಿ ಇಟ್ಟು, ಕಣ್ಣಿಗೆ ಸುರುಮಾ ಸವರಿ
ಅರಬಿ ಮದರಸಾಕ್ಕೆ ಕಳಿಸುತ್ತಿದ್ದ
ಅಮ್ಮಿಯ ಹೊಲಿಗೆ ಯಂತ್ರದ ರಾಟೆಯಿಂದಾಗೇ
ಭೂಮಿ ಸೂರ್ಯನ ಸುತ್ತ ಸುತ್ತುತ್ತಿದೆ
ಹಸಿರುಗಡ್ಡ ಮೋಲಿಸಾಬರ ಕುರಾನು ಕಲ್ಮಾ ನಮಾಜ಼ು
ಬೆಕ್ಕಿನ ಕಣ್ಣು, ಚುರುಕ್ ಛಡಿಗೆ ಕೈ ಕೊಟ್ಟಿದೆ
ಖುರಾನಿನಲ್ಲಿಟ್ಟ ನೀಲಿಕಣ್ಣಿನ ರೇಷಿಮೆ ನವಿಲುಗರಿ
ಉಣ್ಣಲು ಇಟ್ಟ ಅಬ್ರಕದ ಜೊತೆ ಮಾಯವಾಗಿದೆ.
ಕ್ರಿಸ್ತನ ಇಂಗ್ಲಿಷ್ ಬೈಬಲ್ ಓದುಬಲ್ಲ ನಾನು
ಅಲ್ಲಾನ ಕಚಿಪಿಚಿ ಕುರಾನು ಓದಲಾರೆ !

ಅಜ಼ಾನ್ ಕೂಗುವ ಸದ್ದು...
ಕೈಕೊಟ್ಟ 'ಅಣ್ಣ'ನ ಮಗಳಿಗೆ ಕಾಯುತ್ತಿದ್ದೇನೆ
'ಅಕ್ಕ' ಹುಡುಕಿಹೋದ ಹಕ್ಕಿ
ಅವಳ ಬೆಕ್ಕಿಗೆ ಬಲಿಯಾಗಿದೆ.

ಬಿಳೀ ಬಣ್ಣ ಬಳಿದ ಆಸ್ಪತ್ರೆಗೆ
ಈಗೀಗ ಎದೆನೋವಿನ ರೋಗಿಗಳೆ ಹೆಚ್ಚು

ರಾಜಮಾರ್ಗದ ಮೇಲೆ ವಾಹನಗಳ ಹೊದ್ದು ಓಡಾಡುವ
ಮನುಷ್ಯಾಕೃತಿಗಳು
ಅಪರಿಚಿತ ಎದುರಾಗಿ ಪರಿಚಿತದಂತೆ ಮಾಯವಾಗುವ
ಮುಖಗಳು

ಅಂದಹಾಗೆ ಮೈಸೂರ ದೊಡ್ಡ ಗಡಿಯಾರ
ಎಂದೂ ನಿಂತಿದ್ದೇ ಇಲ್ಲ;
ಒಮ್ಮೆ ಮಾತ್ರ ಅಚಾನಕ್ಕಾಗಿ ನಿಂತಾಗ
ಮೈಸೂರು ಗರಬಡಿದು ಚಲನೆ ಕಳಕೊಂಡಿತ್ತು.

* ಮಜ಼ಾರ್ – ಗೋರಿ ಅಥವಾ ಸಮಾಧಿ

**ಆರಿಫ್ ರಾಜಾ**
ಸಾ. ಪೋ. ಆರಕೇರಾ - ೫೮೪ ೧೧೧
ದೇವದುರ್ಗ ತಾಲೂಕು, ರಾಯಚೂರು ಜಿಲ್ಲೆ

ತಿಳಿದಿರುವ ಸಂಗತಿ. ಭೂಮಿಯ ಎರಡು ಧ್ರುವ ಪ್ರದೇಶಗಳಲ್ಲಿ ಭೂಮಿಯನ್ನು ವಿಸ್ತಾರವಾಗಿ ಮುಚ್ಚಿರುವ ಹಿಮ ಕವಚಗಳಲ್ಲಿ ಮತ್ತು ಬೃಹತ್ ಹಿಮಗಡ್ಡೆಗಳಲ್ಲಿ ನೀರು ಸಂಚಿತವಾಗಿರುತ್ತದೆ. ಹೀಗೆ ಸಂಚಿತವಾಗಿರುವ ನೀರಿನ ಪ್ರಮಾಣಕ್ಕೆ ಅನುಗುಣವಾಗಿ ಸಮುದ್ರದ ನೀರಿನ ಮಟ್ಟದಲ್ಲಿ ಏರಿಳಿತಗಳುಂಟಾಗುತ್ತವೆ. ಯುಗಾಂತರಗಳ ಕಾಲಮಾನದಲ್ಲಿ ನಡೆಯುವ ಈ ನಿರಂತರ ಪ್ರಕ್ರಿಯೆಯು ಸಮುದ್ರದ ಏರಿಳಿತಗಳಿಗೆ ಕಾರಣವಾಗಿದೆ. ಆಯಾ ಕಾಲಘಟ್ಟದ ಬದಲಾವಣೆಗಳೂ ಭೂಮಿಯ ಸರಾಸರಿ ತಾಪಮಾನದ ಮೇಲೆ ಪರಿಣಾಮ ಬೀರುತ್ತವೆ. ತಾಪಮಾನವು ಒಂದು ನಿರ್ದಿಷ್ಟ ಪ್ರಮಾಣಕ್ಕಿಂತ ಕೆಳಗೆ ಕುಸಿದರೆ ಅದನ್ನು ಹಿಮಯುಗ ಎಂದು ವರ್ಗೀಕರಿಸಲಾಗುತ್ತದೆ.

ಹಿಮಯುಗಗಳಲ್ಲಿ ಸಮಶೀತೋಷ್ಣ ಮತ್ತು ಉಗ್ರ ತಾಪಮಾನದ ಕಾಲಘಟ್ಟಗಳು ಅಡಕಗೊಂಡಿರುತ್ತವೆ. ಅತಿ ಶೀತಲ ಕಾಲಘಟ್ಟಗಳನ್ನು ಹಿಮಶಿಲಾಯುಗದ ಕಾಲಘಟ್ಟವೆಂದೂ ಬಿಸಿ ತಾಪದ ಕಾಲಘಟ್ಟಗಳನ್ನು ಅಂತರ್-ಹಿಮಶಿಲಾಯುಗದ ಕಾಲಘಟ್ಟವೆಂದೂ ಗುರುತಿಸಲಾಗುತ್ತದೆ. ಹಿಮಶಿಲಾಯುಗದ ಕಾಲಘಟ್ಟದಲ್ಲಿ ಸಮುದ್ರ ಮಟ್ಟಕ್ಕಿಂತ ಮೇಲಿರುವ ಹಿಮಕವಚಗಳಲ್ಲಿ ಸಂಚಿತವಾಗಿರುವ ಅಗಾಧ ಪ್ರಮಾಣದ ನೀರು ಸ್ಥಿತ್ಯಂತರಗೊಳ್ಳುವುದರಿಂದ ಸಮುದ್ರದ ಮಟ್ಟವು ಕುಸಿಯುತ್ತದೆ. ಅಂತರ್-ಹಿಮಶಿಲಾಯುಗದ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಅದು ಸುಮಾರು ೧೨ ಸಾವಿರ ವರ್ಷಗಳವರೆಗೆ ಅಸ್ತಿತ್ವದಲ್ಲಿ ಮುಂದುವರೆಯುತ್ತದೆ ಎಂಬುದಾಗಿ ಮೊದಲು ನಂಬಲಾಗಿತ್ತು. ಆದರೆ ಹೊಸ ಪುರಾವೆಗಳು ಅದು ಇನ್ನೂ ಹೆಚ್ಚು ಕಾಲ ವಿಸ್ತರಿಸುತ್ತದೆ ಎಂಬುದನ್ನು ಸೂಚಿಸುತ್ತವೆ. ಅಂದರೆ ಕಳೆದ ಒಂದು ಲಕ್ಷ ವರ್ಷಗಳಲ್ಲಿ ಸಮುದ್ರದ ಮಟ್ಟವು ಕುಸಿದ ಕಾಲಘಟ್ಟಗಳಲ್ಲಿ ಭಾರತ ಮತ್ತು ಶ್ರೀಲಂಕಾ ದೇಶಗಳ ಭೂಭಾಗಗಳು ಆಗಾಗ ಕೂಡಿಕೊಂಡು ಏಕತ್ರವಾದದ್ದಿದೆ. ಪ್ರಾಕೃತಿಕವಾದ ಈ ವಿದ್ಯಮಾನದಿಂದಾಗಿ ಆ ಭೂಪ್ರದೇಶದಲ್ಲಿ ಅಡೆತಡೆಯಿಲ್ಲದೆ ಚಲಿಸುತ್ತಾ ವಸಾಹತು ಹೂಡುವ ಸಾಧ್ಯತೆಯು ಸೃಷ್ಟಿಯಾಗಿರುತ್ತದೆ. ಪೂರ್ವಕಾಲದಲ್ಲಿ ಭಾರತ ಮತ್ತು ಶ್ರೀಲಂಕಾ ದೇಶಗಳನ್ನು ಕೂಡಿಸುವ ಭೂಮಾರ್ಗದ ಸಂಪರ್ಕವಿತ್ತು ಎನ್ನುವ ಭರದಲ್ಲಿ ಅದು ರಾಮಾಯಣದ 'ರಾಮಸೇತು'ವಾಗಿದೆ ಎನ್ನುವುದು ಅಸಂಬದ್ಧವಾಗುತ್ತದೆ.

**೫. ಕುತಂತ್ರದ ಬೂಟಾಟಿಕೆ ವಿಜ್ಞಾನ**

ಆದಂಸ್ ಬ್ರಿಜ್ ಹಾನಿಗೊಳಗಾಗುವುದರಿಂದ ಸೇತುಸಮುದ್ರಂ ಯೋಜನೆಯನ್ನು ಕೈಬಿಡಬೇಕೆಂದು ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆಯೊಂದನ್ನು ದಾಖಲು ಮಾಡಲಾಯಿತು. ಅದರ ವಿಚಾರಣೆಯ ಸಂದರ್ಭದಲ್ಲಿ ಭಾರತ ಪುರಾತತ್ವ ಪರಿವೇಕ್ಷಣ ಸಂಸ್ಥೆಯು ಆದಂಸ್ ಬ್ರಿಜ್ ಮಾನವ ನಿರ್ಮಿತವಾದುದು ಎಂಬುದಕ್ಕೆ ಪುರಾತತ್ವ ಅಧ್ಯಯನಗಳಲ್ಲಿ ಯಾವುದೇ ಸಾಕ್ಷ್ಯಾಧಾರಗಳು ದೊರೆಯುವುದಿಲ್ಲ ಎಂಬುದಾಗಿ ಸರ್ವೋಚ್ಚ ನ್ಯಾಯಾಲಯಕ್ಕೆ ಪ್ರಮಾಣಪತ್ರವನ್ನು ಸಲ್ಲಿಸಿತು. ಪ್ರಸ್ತುತ ವಿವಾದಕ್ಕೆ ಮೂಲ ಇದೇ.

ಭಾರತ ಪುರಾತತ್ವ ಪರಿವೇಕ್ಷಣ ಸಂಸ್ಥೆಯು ಸಲ್ಲಿಸಿದ ಪ್ರಮಾಣ ಪತ್ರವು ವೈಜ್ಞಾನಿಕ ಸಾಕ್ಷ್ಯಾಧಾರಗಳ ದೃಷ್ಟಿಯಿಂದ ಅತ್ಯಂತ ಸಮಂಜಸವಾಗಿಯೇ ಇತ್ತು. ಕೆಲವೇ ವರ್ಷಗಳ ಹಿಂದೆ ಕೇಂದ್ರದಲ್ಲಿ ಆಡಳಿತ ನಡೆಸುತ್ತಿದ್ದ ಭಾರತೀಯ ಜನತಾ ಪಕ್ಷದ ನೇತೃತ್ವದ ಸರ್ಕಾರವು ಸೇತು ಸಮುದ್ರಂ ಕುರಿತು ಹೊರಡಿಸಿದ ಆದೇಶದ ಮೇರೆಗೆ ಭಾರತ ಭೂ-ಸರ್ವೇಕ್ಷಣ ಸಂಸ್ಥೆಯು ಒಂದು ವರದಿಯನ್ನು ಸಲ್ಲಿಸಿತ್ತು. ಆದಂಸ್ ಬ್ರಿಜ್ ಪ್ರಾಕೃತಿಕವಾಗಿ ಸಮುದ್ರ ತಳದಲ್ಲಿ ಉದ್ಭವವಾಗಿರುವ ಮರಳು ದಿಣ್ಣೆಗಳ ಸರಣಿಯಾಗಿದೆ. ಅದು ಮಾನವ ನಿರ್ಮಿತ ಎಂಬುದಕ್ಕೆ ಯಾವ ಸಾಕ್ಷ್ಯಾಧಾರಗಳೂ ದೊರೆಯುವುದಿಲ್ಲ ಎಂಬ ಖಚಿತ ಅಭಿಪ್ರಾಯವನ್ನು ವ್ಯಕ್ತಪಡಿಸಿತ್ತು. ಆದರೆ ಈಗ ಅದು ಒಂದು ಹೆಜ್ಜೆ ಅನಗತ್ಯವಾಗಿ ಮುಂದೆ ಹೋಗಿ ರಾಮನು ಅಸ್ತಿತ್ವದಲ್ಲಿದ್ದ ಎನ್ನುವುದಕ್ಕೆ ಐತಿಹಾಸಿಕ ಸಾಕ್ಷ್ಯಾಧಾರಗಳಿಲ್ಲ ಎಂಬ ಅಪ್ರಾಸಂಗಿಕ ಅಭಿಪ್ರಾಯವನ್ನು ಪ್ರಮಾಣಪತ್ರದಲ್ಲಿ ವ್ಯಕ್ತಪಡಿಸಿತು. ಈ ಅಭಿಪ್ರಾಯವು ಎರಡು ರೀತಿಯಲ್ಲಿ ಅಪ್ರಾಸಂಗಿಕವಾದ್ದಾಗಿತ್ತು: (೧) ನ್ಯಾಯಾಲಯದಲ್ಲಿ ಹೂಡಿದ್ದ ಮೊಕದ್ದಮೆಯ ವ್ಯಾಪ್ತಿಗೆ ಆ ಅಂಶವು ಹೊರಗಿನದ್ದಾಗಿತ್ತು; (೨) ವಿಜ್ಞಾನ ಮತ್ತು ಸಾಕ್ಷ್ಯಾಧಾರಗಳದ್ದು ಒಂದು ನೆಲೆ. ಶ್ರದ್ಧೆ ಮತ್ತು ಸಮೂಹ ನಂಬಿಕೆಗಳದ್ದು ಅದಕ್ಕೆ ಭಿನ್ನವಾದ ಬೇರೊಂದು ನೆಲೆ. ವಿಭಿನ್ನ ನೆಲೆಗಳಿಗೆ ಸೇರಿದ ಎರಡು ವಿದ್ಯಮಾನಗಳನ್ನು ಪ್ರಮಾಣಪತ್ರದಲ್ಲಿ ಒಟ್ಟಿಗೆ ತರುವ ಅಗತ್ಯವಿರಲಿಲ್ಲ.

**೬. ವಿರೋಧಾಭಾಸ**

ಭಾರತೀಯ ಜನತಾ ಪಕ್ಷದ ನೇತೃತ್ವದ ಸರ್ಕಾರವು ಕೇಂದ್ರದಲ್ಲಿ ಆಡಳಿತ ನಡೆಸುತ್ತಿದ್ದ ಅವಧಿಯಲ್ಲಿ ರಾಷ್ಟ್ರೀಯ ಪರಿಸರ ತಂತ್ರಜ್ಞಾನ ಸಂಶೋಧನಾ ಕೇಂದ್ರವು ಈ



ಯೋಜನೆಯ ಬಗ್ಗೆ ಒಂದು ವರದಿಯನ್ನು ಸಿದ್ಧಪಡಿಸಿತ್ತು. ಈ ಸಂಶೋಧನಾ ಕೇಂದ್ರವು ಕಾಲುವೆಯ ಮಾರ್ಗದ ಆಯ್ಕೆಗಾಗಿ ಆರು ಮಾರ್ಗಗಳನ್ನು ಪರಿಶೀಲಿಸಿ ಅದರಲ್ಲಿ ಈ ಮಾರ್ಗವು (ಈಗ ವಿವಾದಾತ್ಮಕವಾಗಿರುವ) ಆ ಪ್ರದೇಶದ ಜೀವ ಪರಿಸರಕ್ಕೆ ಅತ್ಯಂತ ಕಡಿಮೆ ಹಾನಿಕಾರಕವಾಗಿರುವುದರಿಂದ ಅದನ್ನು ಆಯ್ಕೆ ಮಾಡಿಕೊಳ್ಳುವುದೇ ಸೂಕ್ತವೆಂದು ಶಿಫಾರಸು ಮಾಡಿತ್ತು. ಆ ವರದಿಯ ಶಿಫಾರಸ್ಸಿನ ಆಧಾರದ ಮೇಲೆ ಬಿಜೆಪಿ ಸರ್ಕಾರದ ಆರ್ಥಿಕ ವ್ಯವಹಾರಗಳ ಮೇಲಿನ ಸಂಸದೀಯ ಮಂಡಳಿಯು ಪ್ರಸ್ತಾವನೆಯಲ್ಲಿ ಈಗಿನಂತೆಯೇ ಇದ್ದ ಕಡಲ್ಗಾಲುವೆಯ ಮಾರ್ಗವನ್ನು ನಿರ್ಧರಿಸಿ ಸೇತುಸಮುದ್ರಂ ಯೋಜನೆಗೆ ಅನುಮೋದನೆ ನೀಡಿತ್ತು.

**೭. ಯೋಜನೆಯನ್ನು ನಿರ್ಧರಿಸಬೇಕಾದ ನಿಜವಾದ ನೆಲೆ**

ವೈಜ್ಞಾನಿಕವಾಗಿ ದೊರಕುವ ಸಾಕ್ಷ್ಯಾಧಾರಗಳನ್ನು ಮತ್ತು ವಾಸ್ತವಾಂಶಗಳನ್ನು ಆಧಾರವಾಗಿಟ್ಟುಕೊಂಡು ಸೇತುಸಮುದ್ರಂ ಯೋಜನೆಯ ಉಪಯುಕ್ತತೆಯನ್ನು ನಿರ್ಧರಿಸಬೇಕು. ವಿವಾದದ ಸುಳಿಯಾಗಿರುವ ಜಲಸಂಧಿಯಲ್ಲಿ ಯಾವುದೇ ಮಾನವ ನಿರ್ಮಿತ ರಚನೆಯಿದೆ ಎಂಬುದಕ್ಕೆ ಸಾಕ್ಷ್ಯಾಧಾರವೇ ಇಲ್ಲದಿರುವುದರಿಂದ ಅದಕ್ಕೆ ಗಂಡಾಂತರ ಒದಗಿದೆ ಎಂಬ ವಾದದಲ್ಲಿ ಹುರುಳಿಲ್ಲ. ಸಂಘಟನೆಗಳಾಗಲೀ ರಾಜಕೀಯ ಪಕ್ಷಗಳಾಗಲೀ ಅವೈಜ್ಞಾನಿಕ ಮತ್ತು ಅವೈಚಾರಿಕ ನೆಲೆಯಲ್ಲಿ ಸಮಸ್ಯೆಯನ್ನು ಕಗ್ಗಂಟುಮಾಡುವ ಅಗತ್ಯವಿಲ್ಲ ಎಂಬುದನ್ನು ಮೇಲಿನ ಅಂಶಗಳು ಸಾರಿಹೇಳುತ್ತವೆ.

ಆದರೆ ಈ ಯೋಜನೆಯು ಅನುಷ್ಠಾನಗೊಳ್ಳುವುದರಿಂದ ಆ ಪ್ರದೇಶದಲ್ಲಿರುವ ಸಸ್ಯ ಸಂಕುಲ ಹಾಗೂ ಜೀವಸಂಕುಲಗಳ ಮೇಲೆ ಉಂಟಾಗಬಹುದಾದ ಪರಿಸರ ಸಂಬಂಧಿತ ದುಷ್ಪರಿಣಾಮಗಳ ಸಮಸ್ಯೆಯನ್ನು ನಾವು ಅತ್ಯಂತ ಗಂಭೀರವಾಗಿ ಪರಿಗಣಿಸಬೇಕು. ಸಮೃದ್ಧವಾಗಿರುವ ಸಾಗರ ಜೈವಿಕ ವೈವಿಧ್ಯತೆಯಿರುವ ಮನ್ನಾರ್ ಕೊಲ್ಲಿಯ ಸಾಗರ ಜೈವಿಕ ವಲಯದ ಮೇಲೆ ಈ ಯೋಜನೆಯಿಂದ ದುಷ್ಪರಿಣಾಮವಾಗುತ್ತದೆ ಎಂಬ ಆತಂಕವು ಕೇಳಿಬರುತ್ತಿದೆ. ಯೋಜನೆಯಿಂದಾಗಿ ಆ ಪ್ರದೇಶದ ಮೀನುಗಾರರ ಬದುಕು ಅತಂತ್ರವಾಗುವ ಸಮಸ್ಯೆ ಇದೆ. ನಾವು ಪರಿಗಣಿಸಬೇಕಾದ ನಿಜವಾದ ಸಮಸ್ಯೆಗಳು ಇವು.

ಭಾರತೀಯ ಜನತಾ ಪಕ್ಷ ಮತ್ತು ಕೋಮುವಾದಿ ಸಂಘಟನೆಗಳು ಎತ್ತಿರುವ ತಕರಾರುಗಳಿಗೂ ಈ ಯೋಜನೆಗೆ ಸಂಬಂಧಿಸಿರುವ ನಿಜವಾದ ಸಮಸ್ಯೆಗಳಿಗೂ ಸಂಬಂಧವೇ ಇಲ್ಲ. ದೇಶದ ಜನತೆಯನ್ನು ವಿಭಜಿಸುವ ಕಾರ್ಯಸೂಚಿಗೆ ಪ್ರಚಾರವನ್ನು ಗಿಟ್ಟಿಸಿಕೊಳ್ಳಲು ಬೂಟಾಟಿಕೆ - ವಿಜ್ಞಾನದ ನೆರಳಿನಲ್ಲಿ ಅವು ಕುತಂತ್ರ ನಡೆಸುತ್ತಿವೆ.

ಅನುವಾದ : ಪ್ರೊ|| ಬಿ. ಗಂಗಾಧರ ಮೂರ್ತಿ
ಎ-೬೬. ಸಂಪಿಗೆ ರಸ್ತೆ, ಕುವೆಂಪುನಗರ, ಗೌರಿಬಿದನೂರು -

# ಸಿಂಗಾರಿತ್ಲು - ನಾಟಕ ಕೃತಿ ವಿಮರ್ಶೆ

ವಿಜಯ ಕರ್ನಾಟಕ ಗಂಗಾವತಿ ಆವೃತ್ತಿಯ ಸ್ಥಾನಿಕ ಸಂಪಾದಕ ಕೆ. ಕರಿಸ್ವಾಮಿಯವರ ಚೊಚ್ಚಲು ನಾಟಕ ಕೃತಿ. ಪ್ರಸ್ತುತ ರಾಜಕಾರಣಿಗಳು ಓಟ್ ಬ್ಯಾಂಕಿಗಾಗಿ ಗ್ರಾಮೀಣ ಬದುಕಿನ ಜ್ವಲಂತ ಸಮಸ್ಯೆಗಳನ್ನು ಬಗೆಹರಿಸದೆ ಹೇಗೆ ಜೀವಂತ ಇಡುತ್ತಾರೆ ಎನ್ನುವ ಹತ್ತು ಹಲವಾರು ಗಂಭೀರ ಕಾರಣಗಳಿಗಾಗಿ 'ಸಿಂಗಾರಿತ್ಲು' ಕೃತಿ ಗಮನ ಸೆಳೆಯುತ್ತದೆ.

ಕೆ. ಕರಿಸ್ವಾಮಿ ಮೂಲತಃ ಗ್ರಾಮೀಣ ಪ್ರದೇಶದ ಹಿನ್ನೆಲೆಯಿಂದ ಬಂದವರಾದ್ದರಿಂದ ತಮ್ಮ ಪ್ರಥಮ ಕೃತಿಯಲ್ಲಿಯೇ ಹಳ್ಳಿಗಾಡಿನ ದೇಶಿ ಸೊಗಡನ್ನು ಬಿಂಬಿಸಿದ್ದಾರೆ. ಅವರೇ ಹೇಳಿರುವಂತೆ ಕಥೆಯಾಗಿದ್ದ 'ಸಿಂಗಾರಿತ್ಲು'ವಿನಲ್ಲಿ ನಾಟಕೀಯ ಅಂಶಗಳಿರುವುದನ್ನು ಮನಗಂಡು ನಾಟಕವಾಗಿಸಿದ್ದಾರೆ.

'ಸಿಂಗಾರಿತ್ಲು' ನಾಟಕದ ಕಥೆ ಅತ್ಯಂತ ಸರಳವಾಗಿದೆ. ನಾಟಕದ ವಸ್ತು ಸಾಮಾನ್ಯವಾಗಿ ಎಲ್ಲಾ ಹಳ್ಳಿಗಳಲ್ಲೂ ಇರುವಂತಹುದೇ. 'ಸಿಂಗಾರಿತ್ಲು' ಗತಕಾಲದಲ್ಲಿ ಇತ್ತೆಂದು ಹೇಳಲಾದ ಅರಮನೆಯು ನಾಶವಾಗಿ ಪಾಳುಬಿದ್ದ ಜಾಗ. ಊರಲ್ಲಿ ಸವರ್ಣೀಯ ಹೆಂಗಸರು ಹೇಲುವ ಸ್ಥಳವಾಗಿ ಬಳಕೆಯಾಗುತ್ತಿದ್ದೂ, ಈ ಸ್ಥಳಕ್ಕಾಗಿ ರಾಜಕೀಯ ಹಾಗೂ ಧಾರ್ಮಿಕ ಮುಖಂಡರ ನಡುವೆ ಸ್ವಾರ್ಥಕ್ಕಾಗಿ ಪೈಪೋಟಿ ನಡೆದು ಕೊನೆಗೆ ಆ ಸ್ಥಳಕ್ಕೆ ಯಾವುದೇ ಪರಿಹಾರ ಸಿಗದೇ ಸಮಸ್ಯೆ ಜೀವಂತವಾಗುತ್ತದೆ.

ಈ ನಾಟಕದಲ್ಲಿ ಗ್ರಾಮೀಣ ಸಂಸ್ಕೃತಿ ಬಿಂಬಿಸುವ ಭಾಷೆಯೇ ಪ್ರಧಾನವಾಗಿದೆ. ಗ್ರಾಮ್ಯ ಪದಗಳ ಜಾಡನ್ನು ಹಿಡಿದು ಸೊಗಡನ್ನು ಸಾರುವ ಲೇಖಕರ ಶೈಲಿ ವಿಭಿನ್ನವಾಗಿ ಗೋಚರವಾಗುತ್ತದೆ. ಉಟ್ಟನ್ನೆ, ಉರ್ಯ, ಇಟ್ಕಮಕೊಗ್ಬೌದು, ಉಡುಸ್ಲಮ್ಮ, ವತ್ಲುಂಟೆ, ಹಸ್ವ, ಬೆಳ್ಕು, ಉದ್ದೇಸ... ಹೀಗೆ ನಾಟಕದುದ್ದಕ್ಕೂ, ಬಳಕೆಯಾಗಿರುವ ಅನೇಕ ಪದಗಳು ದೇಶೀ ಸೊಗಡಿಗೆ ಸಾಕ್ಷಿಯಾಗಿವೆ.

ನಾಟಕವನ್ನು ಒಟ್ಟಾರೆ ನೋಡಿದಾಗ ವಾಸ್ತವವಾಗಿ ದೇಶದ ಕೆಟ್ಟ ರಾಜಕಾರಣವನ್ನು ಗ್ರಾಮಾಂತರ ಪ್ರದೇಶದ ಸ್ಥಳೀಯ ಸಮಸ್ಯೆಯೊಂದನ್ನು ಆಧಾರವಾಗಿಟ್ಟುಕೊಂಡು ನಿರೂಪಿಸಲಾಗಿದೆ.

ಊರ ಪಂಚಾಯ್ತಿ ಅಧ್ಯಕ್ಷನ ಮಗ ದಲಿತ ಮಹಿಳೆಯ ಮೇಲೆ 'ಸಿಂಗಾರಿತ್ಲು'ವಿನಲ್ಲಿ ಅತ್ಯಾಚಾರಕ್ಕೆ ಪ್ರಯತ್ನಿಸುತ್ತಾನೆ. ಇದರಿಂದ ಅವಮಾನಿತಳಾಗಿ ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ದಲಿತರ ಕೋಪ ತಣಿಸಲು ಗ್ರಾಮ ಪಂಚಾಯ್ತಿ ಅಧ್ಯಕ್ಷ 'ಸಿಂಗಾರಿತ್ಲು'ವಿನಲ್ಲಿ ದಲಿತರಿಗೆ ಮನೆಗಾಗಿ ನಿವೇಶನಗಳನ್ನು ಹಂಚುವ ನಾಟಕವಾಡಿ ತನ್ನ ರಾಜಕೀಯ ಪ್ರತಿಷ್ಠೆ ಹೆಚ್ಚಿಸಲು ಮತ್ತು ಊರಿನ ರಾಜಕೀಯ ವಿರೋಧಿಗಳನ್ನು ಮಟ್ಟಹಾಕಲು ತಂತ್ರಗಾರಿಕೆ ನಡೆಸುತ್ತಾನೆ.

ಇದಕ್ಕೆ ವಿರುದ್ಧವಾಗಿ ಮತೀಯವಾದಿಗಳು ದೊರೆಗಳ ಅರಮನೆ ಪರಂಪರೆಯ ಸಂಕೇತ. ಅದೊಂದು ಪವಿತ್ರವಾದ ಸ್ಥಳವೆಂದು ಮುಂದುವರೆದ ಜಾತಿಯ ಜನರನ್ನು ಎತ್ತಿಕಟ್ಟಿ, ದೇವಸ್ಥಾನ ಕಟ್ಟಲೇಬೇಕು, ದಲಿತರಿಗೆ ಮನೆ ಬೇಡ ಎಂದು ಧಾರ್ಮಿಕ ರಾಜಕೀಯ ಬೆರೆಸುತ್ತಾರೆ. ಶಾಸಕ ಜನರಿಗೆ ಉಪಯೋಗವಾಗುವ ಆಸ್ಪತ್ರೆ, ಕಾರ್ಖಾನೆ ಕಟ್ಟಿಸುವ ಪ್ರಗತಿಪರ ನಿಲುವು ತೆಗೆದುಕೊಂಡಾಗ ಇಡೀ ಊರಿನ ಜನ ಇದನ್ನು ವಿರೋಧಿಸುತ್ತಾರೆ. ಶಾಸಕ ಗಾಂಧಿ-ಅಂಬೇಡ್ಕರರ ತತ್ವದ ಮಾತು ಹೇಳಿ ಆದರ್ಶವಾದಿಯಾಗಿ ಮರೆಯಾಗುತ್ತಾನೆ. ಕೊನೆಗೆ ಹೆಂಗಸರ ಕಕ್ಕಸ್ಸಿಗೆ ಜಾಗವೂ ಸಿಗದೆ ದೇವಸ್ಥಾನ, ಆಸ್ಪತ್ರೆ, ದಲಿತರಿಗೆ ಮನೆ ನಿರ್ಮಾಣವಾಗದೆ, 'ಸಿಂಗಾರಿತ್ಲು' ಪ್ರದೇಶಕ್ಕೆ ಬೇಲಿ ಹಾಕಲಾಗುತ್ತದೆ.

ರಾಷ್ಟ್ರೀಯ ರಾಜಕಾರಣ, ಧರ್ಮ ಆಧಾರಿತ ರಾಜಕೀಯದ ಕರಿ ನೆರಳು ನಾಟಕದಲ್ಲಿ ವ್ಯಕ್ತವಾಗಿದೆ. ಒಂದೆಡೆ ಈಗಲೂ ನಿರಂತರವಾಗಿ ದಲಿತ, ಹಿಂದುಳಿದ, ವರ್ಗಗಳ ಶೋಷಣೆ ನಡೆಯುತ್ತಿದೆ. ಮತ್ತೊಂದೆಡೆ ಬಲಪಂಥೀಯರಿಗೆ 'ರಾಮ'-ನಾಮ ಸವಕಲು ನಾಣ್ಯವಾಗಿ ವಿರಾಟ್ ಮೂಲಕ ಕೋಮುಭಾವನೆ ಕೆರಳಿಸುತ್ತಿರುವುದು ಅಪಾಯಕಾರಿ ಬೆಳವಣಿಗೆಯಾಗಿದೆ.

ಸನಾತನ ಧರ್ಮದ ಅಮಾನವೀಯ ಮೌಲ್ಯಗಳ ವಿರುದ್ಧ ಸಮರ ಸಾರಿದ್ದ ಬಸವಣ್ಣ-ಅಂಬೇಡ್ಕರರ ತತ್ವಗಳಿಗೆ ಹಿಂದುತ್ವದ ಅಮಲಿನಲ್ಲಿರುವ ಕೋಮುವಾದಿಗಳು ಮುಗ್ಧ ಹಳ್ಳಿಗಾಡಿನ ಜನರಲ್ಲಿ ದ್ವಂದ್ವದ ವಿಷಬೀಜ ಬಿತ್ತುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ದೇವರು, ಧರ್ಮ, ಮೇಲ್ಜಾತಿ, ಕೆಳಜಾತಿ ನಡುವೆ ಒಡಕು ಮೂಡಿಸಿ ಮತ ಬ್ಯಾಂಕ್ ಗಟ್ಟಿಮಾಡಿಕೊಳ್ಳುವ ಕೀಳುತನ, ದಲಿತರ ಅಂಧಶ್ರದ್ಧೆ, ಬಡತನ ಮೊದಲಾದ ಅಂಶಗಳು, ಮಾತ್ರವಲ್ಲದೆ ಮತಾಂಧರ ಒಳಹುನ್ನಾರಗಳು ನಾಟಕದಲ್ಲಿ ಸ್ಪಷ್ಟವಾಗಿ ಬಿಂಬಿತವಾಗಿವೆ.

'ಸಿಂಗಾರಿತ್ಲು' ಮೇಲೆ ಅವಲಂಬಿತರಾಗಿ ಹೇಗೋ ಬದುಕು ಸಾಗಿಸುತ್ತಿದ್ದ ಸುಕ್ಕಜ್ಜ, ನೀರಗಂಟಿ, ನರ್ಸಿಂಗಪ್ಪ, ದಲ್ಲಾಳಿ ನಿಂಗಣ್ಣರ ಕೆಲಸಕ್ಕೆ ಕುತ್ತು ಬಂದಿರುವ ಸಂಗತಿ ಜಾಗತೀಕರಣ ಪ್ರಭಾವದಿಂದ ಗ್ರಾಮೀಣ ಮೂಲ ಕಸುಬುಗಳು ಕಣ್ಮರೆಯಾಗುತ್ತಿರುವುದೇ ಅಲ್ಲದೆ, ಪರ ಊರಿನಿಂದ ಬಂದಿದ್ದ ನಿಂಗಜ್ಜಿ, ಪಂಚಾಯ್ತಿ ಅಧ್ಯಕ್ಷೆಯಾಗಲು ಒಂದು ಗುಂಪು ವಿರೋಧಿಸುವುದು ಕೂಡ ರಾಷ್ಟ್ರ ರಾಜಕಾರಣದ ಒಳ ಸುಳಿವುಗಳನ್ನು ಬಯಲಿಗೆಳೆದಿದೆ.

ನಾಟಕಕ್ಕೆ ಬೆನ್ನುಡಿ ಬರೆದಿರುವ ಜಾನಪದ ತಜ್ಞ ಮುದೇನೂರು ಸಂಗಣ್ಣ ಹೇಳುವಂತೆ ಸಾಮಾನ್ಯ ಘಟನೆಗಳ ಆಧಾರದ ಹಿನ್ನೆಲೆಯಲ್ಲಿ ಅಸಾಮಾನ್ಯವಾದಂತಹ ವಿಚಾರ ಯುಕ್ತ ನಾಟಕವನ್ನು ಕರಿಸ್ವಾಮಿ ಕನ್ನಡ ರಂಗಭೂಮಿಗೆ ನೀಡಿದ್ದಾರೆ. ಲೇಖಕರು ತಮ್ಮ ಚೊಚ್ಚಲ ಕೃತಿಯನ್ನು ಈ ಶತಮಾನದ ಮಹಾನ್ ಪ್ರತಿಭೆಗಳಾದ ಹಾಗೂ ವೈಚಾರಿಕ ನಿಲುವು ಪ್ರತಿಪಾದಿಸಿದ 'ಕುವೆಂಪು-ಲಂಕೇಶ್'ರಿಗೆ ಸಮರ್ಪಿಸಿರುವುದು ಅರ್ಥಪೂರ್ಣವಾಗಿದೆ.

ತಾವೇ ರಚಿಸಿದ್ದ ಕಥೆ ಆಧರಿಸಿ ನಾಟಕ ಕಡೆದು ನಾಟಕಕಾರರಾಗಿ ರೂಪುಗೊಂಡಿರುವ ಕೆ. ಕರಿಸ್ವಾಮಿಯವರ ಪ್ರಯತ್ನಕ್ಕೆ ಅಭಿನಂದನೆಗಳು. ರಂಗಾಸಕ್ತರು ಅವಶ್ಯವಾಗಿ ಓದಲೇಬೇಕಾದ ಕೃತಿಯಾಗಿದೆ. ಸಿಂಗಾರಿತ್ಲು ನಾಡಿನ ಪ್ರಗತಿಪರ ನಾಟಕ ತಂಡಗಳಿಗೆ ಈ ನಾಟಕವನ್ನು ಹೆಚ್ಚು ಪ್ರದರ್ಶಿಸುವ ಜವಾಬ್ದಾರಿಯನ್ನೂ ನೀಡಿದೆ.

**ಸುರೇಶ ಅಂಗಡಿ**
ಪತ್ರಕರ್ತರು, ವಿಜಯನಗರ ಬಡಾವಣೆ
ಹೂವಿನ ಹಡಗಲಿ - ೫೮೩೨೧೯




**ಮಂಡ್ಯದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ**

೨೦೦೮ ಜನವರಿ ೩ರಂದು ಮಂಡ್ಯದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಹಾಗೂ ಮಾರಾಟ ಮಳಿಗೆಯನ್ನು ಸಾಹಿತಿ ಪ್ರೊ॥ ಎಚ್. ಎಲ್. ಕೇಶವಮೂರ್ತಿ ಉದ್ಘಾಟಿಸಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕ ಬಸವರಾಜ್ ಹೂಗಾರರು ಅಧ್ಯಕ್ಷತೆ ವಹಿಸಿದ್ದರು. ನಗರ ಕೇಂದ್ರ ಗ್ರಂಥಾಲಯದ ಮುಖ್ಯ ಗ್ರಂಥಾಲಯ ಅಧಿಕಾರಿ ಪಿ. ಎಂ. ಭಬ್ಬಿ, ಪುಸ್ತಕ ಪ್ರಾಧಿಕಾರದ ಸದಸ್ಯರಾದ ರವಿಶಂಕರ ಗೌಡ ಹಾಗೂ ಇತರರು ಅತಿಥಿಗಳಾಗಿ ಭಾಗವಹಿಸಿದ್ದರು.

# ಮಕ್ಕಳ ರಂಗಭೂಮಿ ಮತ್ತು ನಾಟಕಗಳು



ಮಕ್ಕಳ ನಾಟಕಗಳು ಮತ್ತು ಮಕ್ಕಳ ರಂಗಭೂಮಿ ಎಂದು ಹೇಳುವಾಗ ನಾವು ಸುಮಾರು ಹದಿನಾರು ವರ್ಷಕ್ಕಿಂತ ಕೆಳಗಿನ ಪ್ರಾಯದ ಮಕ್ಕಳ ಮನಸ್ಸನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ದೊಡ್ಡವರ ಅನುಭವಕ್ಕೆ ಬರುವ ಪ್ರೇಮ, ಕಾಮ, ಸಾಮಾಜಿಕ ಸಂಘರ್ಷಗಳು, ಯುದ್ಧ, ಕ್ರೌರ್ಯ ಮುಂತಾದವುಗಳಿರುವ ನಾಟಕಗಳು ಮಕ್ಕಳಿಂದ ಆಡಿಸಿದರೂ ಅವು ಮಕ್ಕಳ ನಾಟಕಗಳೆನ್ನಿಸಿಕೊಳ್ಳಲಾರವು. ದೊಡ್ಡವರಾಡುವ ನಾಟಕಗಳನ್ನೇ ಅಲ್ಲಿ ಇಲ್ಲಿ ಬದಲಾಯಿಸಿ ಮಕ್ಕಳಿಂದ ಆಡಿಸಿದರೆ ಅವುಗಳನ್ನು ಮಕ್ಕಳ ನಾಟಕಗಳೆಂದು ತಿಳಿಯಲು ಸಾಧ್ಯವಿಲ್ಲ. ಶೈಕ್ಷಣಿಕ ದೃಷ್ಟಿಯಿಂದ ವಿಚಾರ ಮಾಡುವುದಾದರೆ, ಮಕ್ಕಳ ನಾಟಕದ ವಸ್ತು ಅವರ ವಯೋಮಾನಕ್ಕೆ ತಕ್ಕ ಅನುಭವದ ಸೀಮೆಯೊಳಗೆ ಬರುವಂಥ ವಿಚಾರ-ವಿಷಯವಾಗಿರಬೇಕು. ಅದರೊಳಗಿದ್ದುಕೊಂಡೇ ಮತ್ತು/ಅಥವಾ ಅದನ್ನು ದಾಟಿ, ಸಾಹಿತ್ಯ, ಸೃಜನಶೀಲತೆ, ಕಲ್ಪನಾ ಸಾಮರ್ಥ್ಯ ಮುಂತಾದ ವಿಚಾರಗಳ ಕಡೆಗೆ ಮಕ್ಕಳನ್ನು ಆಕರ್ಷಿಸುವಂಥದಾಗಿರಬೇಕು. ಮಕ್ಕಳ ನಾಟಕಗಳು ಆರೋಗ್ಯಕರವಾಗಿ ರಂಜನೀಯವಾಗಿರಬೇಕು. ಜಾನಪದ ಕತೆಗಳು ಮತ್ತು ಅಪ್ಸರ ಕಥೆಗಳು ಮಕ್ಕಳನ್ನು ವಿಶೇಷವಾಗಿ ಆಕರ್ಷಿಸುತ್ತವೆ. ಫ್ಯಾಂಟಸಿ ಮಕ್ಕಳಿಗೆ ಇಷ್ಟ. ಇಂಥ ಗುಣಗಳುಳ್ಳ ನಾಟಕಗಳು ಮಕ್ಕಳ ರಂಗಭೂಮಿಗೆ ಸೂಕ್ತ.

ಶಾಲೆಗಳಲ್ಲಿ ನಾಟಕಗಳನ್ನು ಒಂದು ಶಿಕ್ಷಣ ಮಾಧ್ಯಮವಾಗಿ ಬಳಸಿದರೆ ಕಲಿಕೆಯಲ್ಲಿ ಆಸಕ್ತಿಯನ್ನು ಹೆಚ್ಚಿಸಬಹುದು. ಈಗ ಕಲಿಸುವ ಪರಂಪರಾಗತ ಕ್ರಮಕ್ಕಿಂತ ನಾಟಕಗಳ ಮೂಲಕ ಆಕರ್ಷಕವಾಗಿ ಮತ್ತು ಫಲಪ್ರದವಾಗಿ ಭಾಷೆಯನ್ನು ಕಲಿಸಬಹುದು. ಗಣಿತ, ವಿಜ್ಞಾನ ಮುಂತಾದ ವಿಷಯಗಳನ್ನು ಸಹ ಭಾಗಶಃ ನಾಟಕ ವಿಧಾನ ಬಳಸಿ ಕಲಿಸಲು ಸಾಧ್ಯವಿದೆ.

ಯಾವುದೇ ಭಾಷೆಯನ್ನು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಬಳಸುವ ತರಬೇತಿಯನ್ನು ನಾಟಕಗಳ ಮೂಲಕ ಕೊಡಬಹುದು. ಸಾಹಿತ್ಯ, ಸಂಸ್ಕೃತಿಯ ಪರಿಚಯ ಮತ್ತು ಅರಿವನ್ನು ಮಕ್ಕಳಲ್ಲಿ ನಾಟಕಗಳ ಮೂಲಕ ಬೆಳೆಸಬಹುದು. ಆದರೆ ಇದನ್ನು ಒಂದು ವರ್ಷದಲ್ಲಿ ಒಂದು ಬಾರಿ ಆಡಿಸುವ ವಾರ್ಷಿಕೋತ್ಸವದ ನಾಟಕದ ಮೂಲಕ ಮಾಡಲಿಕ್ಕಾಗಲಿಕ್ಕಿಲ್ಲ. ಚಿಕ್ಕ ನಾಟಕಗಳು ಅಥವಾ ಪ್ರಹಸನಗಳನ್ನು ಆಗಾಗ ಏರ್ಪಡಿಸಬೇಕು. ಶಾಲಾ ತರಗತಿಯ ಮಿತಿಯೊಳಗೆ, ಸಾಧ್ಯವಿದ್ದರೆ, ಶಾಲಾ ಕೊಠಡಿಯ ಹೊರಗೆ ಕರೆದುಕೊಂಡು ಹೋಗಿ ಮರದಡಿಯಲ್ಲಿ ಮಕ್ಕಳಿಂದ ನಾಟಕಗಳನ್ನು ಆಡಿಸಬಹುದು. ಶೈಕ್ಷಣಿಕ ಮತ್ತು ಸಾಹಿತ್ಯಿಕ ಎಂಬ ವರ್ಗೀಕರಣ ಮಾಡಬೇಕಾದ್ದಿಲ್ಲ. ಇಂಥ ಅನುಭವಗಳು ಮುದ ನೀಡುವ ನೆನಪುಗಳಾಗಿ ಮಕ್ಕಳ ಮನಸ್ಸಿನಲ್ಲಿ ಚಿರಸ್ಥಾಯಿಯಾಗುತ್ತವೆ. ಇಂಥ ಅನುಭವಗಳನ್ನು ಒದಗಿಸಿದ ಶಿಕ್ಷಕನನ್ನು ಅವರು ಜೀವನ ಪರ್ಯಂತ ನೆನಪಿಸಿಕೊಳ್ಳುತ್ತಾರೆ. ನಾಲ್ಕು ಕೋಣೆಯೊಳಗಿನ ರೂಢಿಗತ 'ಪಾಠ ಮಾಡುವಿಕೆ'ಯಿಂದಾಚೆ ಮಕ್ಕಳಲ್ಲಿ ಚೈತನ್ಯವುಕ್ಕಿಸುವ ನಿಜವಾದ ಪಾಠಗಳಾಗಬೇಕಾದ್ದು ಹೀಗೆ.

ಮಕ್ಕಳಿಗೆ ವಿಷಯ ಕೊಟ್ಟು, ಮಾರ್ಗದರ್ಶನ ನೀಡಿ ಅವರಿಂದಲೇ ಪುಟ್ಟ ಪುಟ್ಟ ನಾಟಕಗಳನ್ನು ಬರೆಸಿದರೆ ಅವರ ವಿಚಾರಶಕ್ತಿ, ಕಲ್ಪನಾಶಕ್ತಿ ಉದ್ದೀಪನಗೊಳ್ಳುತ್ತದೆ. ಈ ಕ್ರಿಯೆಯಿಂದ ಸೃಜನಶೀಲ ಚಿಂತನೆಗೆ ಚಾಲನೆ ದೊರೆಯುತ್ತದೆ. ಭಾಷೆಯನ್ನು ಚೆನ್ನಾಗಿ ಆಡುವ ಮತ್ತು ಬರೆಯುವ ಸಾಮರ್ಥ್ಯ ಲಭಿಸುತ್ತದೆ. ವಿಚಾರ ಮಾಡುವ ಮತ್ತು ವಿಚಾರವನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ಮತ್ತು ಆತ್ಮವಿಶ್ವಾಸ ವರ್ಧಿಸುತ್ತದೆ. ನಟನೆ ಮತ್ತು ನಾಟಕ ರಚನೆಯನ್ನು ಒಂದು ಕೂಟ ಚಟುವಟಿಕೆಯಾಗಿ ನಡೆಸಿದಾಗ ಅದರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪ್ರಯೋಜನಗಳು ಅಪಾರ. ಈ ಚಟುವಟಿಕೆಯನ್ನು ಕೂಡ ಮಾಡಬೇಕಾದ್ದು ಶಾಲಾ ಕೊಠಡಿಯಿಂದ ಹೊರಗಿನ ನಿಸರ್ಗದ ಮಡಿಲಲ್ಲಿ. ಯಾಕೆಂದರೆ, ಸೃಜನಶೀಲತೆ ಅರಳುವುದೇ ಇಲ್ಲಿ. ಮಕ್ಕಳು ಬರೆಯಬೇಕಾದ್ದು, ಸೃಷ್ಟಿಸಬೇಕಾದ್ದು ಕಣ್ಣು ತೆರೆದು, ಸುತ್ತಮುತ್ತ ನೋಡಿಕೊಂಡು. ಇದೇ ಬಾಲಕ -

ಮಕ್ಕಳಿಗೆ ವಿಷಯ ಕೊಟ್ಟು, ಮಾರ್ಗದರ್ಶನ ನೀಡಿ ಅವರಿಂದಲೇ ಪುಟ್ಟ ಪುಟ್ಟ ನಾಟಕಗಳನ್ನು ಬರೆಸಿದರೆ ಅವರ ವಿಚಾರಶಕ್ತಿ, ಕಲ್ಪನಾಶಕ್ತಿ ಉದ್ದೀಪನಗೊಳ್ಳುತ್ತದೆ. ಈ ಕ್ರಿಯೆಯಿಂದ ಸೃಜನಶೀಲ ಚಿಂತನೆಗೆ ಚಾಲನೆ ದೊರೆಯುತ್ತದೆ. ಭಾಷೆಯನ್ನು ಚೆನ್ನಾಗಿ ಆಡುವ ಮತ್ತು ಬರೆಯುವ ಸಾಮರ್ಥ್ಯ ಲಭಿಸುತ್ತದೆ. ವಿಚಾರ ಮಾಡುವ ಮತ್ತು ವಿಚಾರವನ್ನು ಅಭಿವ್ಯಕ್ತಿಸುವ ಸಾಮರ್ಥ್ಯ ಮತ್ತು ಆತ್ಮವಿಶ್ವಾಸ ವರ್ಧಿಸುತ್ತದೆ. ನಟನೆ ಮತ್ತು ನಾಟಕ ರಚನೆಯನ್ನು ಒಂದು ಕೂಟ ಚಟುವಟಿಕೆಯಾಗಿ ನಡೆಸಿದಾಗ ಅದರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪ್ರಯೋಜನಗಳು ಅಪಾರ. ಈ ಚಟುವಟಿಕೆಯನ್ನು ಕೂಡ ಮಾಡಬೇಕಾದ್ದು ಶಾಲಾ ಕೊಠಡಿಯಿಂದ ಹೊರಗಿನ ನಿಸರ್ಗದ ಮಡಿಲಲ್ಲಿ. ಯಾಕೆಂದರೆ, ಸೃಜನಶೀಲತೆ ಅರಳುವುದೇ ಇಲ್ಲಿ. ಮಕ್ಕಳು ಬರೆಯಬೇಕಾದ್ದು, ಸೃಷ್ಟಿಸಬೇಕಾದ್ದು ಕಣ್ಣು ತೆರೆದು, ಸುತ್ತಮುತ್ತ ನೋಡಿಕೊಂಡು. ಇದೇ ಬಾಲಕ - ಲೇಖಕನಿಗೂ ವಯಸ್ಕ - ಲೇಖಕನಿಗೂ ಇರುವ ವ್ಯತ್ಯಾಸ!

ಕೆ. ಟಿ. ಗಟ್ಟಿ





ಲೇಖಕನಿಗೂ, ವಯಸ್ಕ - ಲೇಖಕನಿಗೂ ಇರುವ ವ್ಯತ್ಯಾಸ!

ಸದಭಿರುಚಿ, ಸಜ್ಜನತೆ, ಸದ್ಗುಣ, ಸನ್ನಡತೆ ಇತ್ಯಾದಿಗಳನ್ನು ಪೋಷಿಸಬೇಕೆಂದು ನೀತಿಕಥೆಗಳನ್ನೇ ಕೊಡಬೇಕು ಎಂದು ತಿಳಿದುಕೊಂಡರೆ ತಪ್ಪಾದೀತು. ಯಾಕೆಂದರೆ ನೀತಿ-ಅನೀತಿ, ಧರ್ಮ-ಅಧರ್ಮ, ನ್ಯಾಯ-ಅನ್ಯಾಯ ಇವುಗಳೆಲ್ಲ ಮಕ್ಕಳ ಮನಸ್ಸಿಗೆ-ಬದುಕಿಗೆ ಸಂಬಂಧಿಸಿದ ಮೌಲ್ಯಗಳಲ್ಲ ಇವು ದೊಡ್ಡವರ ಮನಸ್ಸಿಗೆ-ಬದುಕಿಗೆ ಸಂಬಂಧಿಸಿದ ಮೌಲ್ಯಗಳು. ಇಂಥದನ್ನೆಲ್ಲ ಅನಗತ್ಯವಾಗಿ ಮಕ್ಕಳ ಮನಸ್ಸಿನಲ್ಲಿ ತುಂಬಿಸಿ ಅವರಲ್ಲಿ ಗೊಂದಲವನ್ನು ಸೃಷ್ಟಿಸುವ ಕಥಾಪಠ್ಯಗಳನ್ನು ಮತ್ತು ನಾಟಕಪಠ್ಯಗಳನ್ನು ಮಕ್ಕಳಿಂದ ದೂರವಿಟ್ಟರೆ ಅವರ ಮಾನಸಿಕ ಆರೋಗ್ಯಕ್ಕೆ ಒಳ್ಳೆಯದು.

ಮಕ್ಕಳಿಗಾಗಿ ಸಿದ್ಧ ನಾಟಕಗಳನ್ನು ಆರಿಸುವಾಗ ತುಂಬಾ ಜಾಗ್ರತೆ ವಹಿಸಬೇಕು. ಮಕ್ಕಳ ಅನುಭವ ಸೀಮೆ, ವಯಸ್ಸಿಗೆ ತಕ್ಕುದಾದ ಅಭಿರುಚಿಗಳು, ಆಸಕ್ತಿಗಳು, ಅವರ ಮನೋವಿಕಾಸದ ಹಂತ ಇತ್ಯಾದಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ, ಆಯ್ಕೆ ಮಾಡುವವರು ಮಕ್ಕಳ ಮನೋವಿಜ್ಞಾನವನ್ನು ಸಾಕಷ್ಟು ತಿಳಿದಿರಬೇಕು.

ಔಪಚಾರಿಕ ವಿಧಾನದ ಕಲಿಕೆಯ ತರಗತಿಯಲ್ಲಿ ಬಹುತೇಕ ಎಲ್ಲಾ ವಿಷಯಗಳನ್ನೂ ರೂಢಿಗತವಾಗಿರುವ 'ಬೋರು' ಹೊಡೆಸುವ ವಿಧಾನದಲ್ಲಿ ಕಲಿಸಲಾಗುತ್ತದೆ. ಇದಕ್ಕಿಂತ ಭಿನ್ನವಾದ ರೀತಿಯಲ್ಲಿ ಕಲಿಸುವ, ದಿನ ದಿನ ಸ್ವಯಂ ಪುನಶ್ಚೇತನಗೊಳ್ಳುವ ಕ್ರಿಯಾಶೀಲ ಶಿಕ್ಷಕರ ಸಂಖ್ಯೆ ಬಹಳ ಸಣ್ಣದು. ಆದರೆ ತರಬೇತಿ ಶಿಬಿರಗಳ ಮೂಲಕ ನವಚೈತನ್ಯ ವುಂಟುಮಾಡಲು ಸಾಧ್ಯವಿದೆ. ಕಲಿಕೆಯ ಎಲ್ಲಾ ವಿಷಯಗಳಲ್ಲಿಯೂ ನಾಟಕೀಯತೆಯನ್ನು ಉಪಯೋಗಿಸಿ ವಿಷಯವನ್ನು -ಟಾಪಿಕನ್ನು ಆಕರ್ಷಕವಾಗಿಸಲು ಸಾಧ್ಯವಿದೆ. ಅಂದರೆ, ಗಣಿತದಲ್ಲಿ ತ್ರಿಕೋಣಮಿತಿಯ ಕುರಿತಾದ ಪಾಠ ಕರಿಹಲಿಗೆಯ ಮೇಲೆ ಒಂದು ತ್ರಿಕೋಣವನ್ನು ಎಳೆಯುವ ಮೂಲಕವಲ್ಲ ಆರಂಭಿಸಬೇಕಾದ್ದು. ಯೂಕ್ಲಿಡ್, ಪೈಥಾಗೋರಸ್ ಗಣಿತದ ಮಹಾಪುರುಷರಾದದ್ದು ಇಂಥ ಕಲಿಕೆಯ ಮೂಲಕವಲ್ಲ. ಮಕ್ಕಳನ್ನು ಶಾಲೆಯಿಂದ ಹೊರಗೆ ಒಂದು ಕಟ್ಟಡ ನಿರ್ಮಾಣಗೊಳ್ಳುತ್ತಿರುವಲ್ಲಿಗೆ ಕರೆದುಕೊಂಡು ಹೋಗಿ ಒಂದಷ್ಟು ಜಾಮಿತಿಯನ್ನು ಕಲಿಸಬಹುದು. ಇಂಥ ಎಲ್ಲಾ ಶೈಕ್ಷಣಿಕ 'ಚಟುವಟಿಕೆ'ಯಲ್ಲಿ ಅಂತರ್ಗತವಾಗಿ ನಾಟಕಾಂಶವಿದೆ ಮತ್ತು ಆ ಕಾರಣದಿಂದ ಚಟುವಟಿಕೆ ಆಸಕ್ತಿಯುತವಾಗುತ್ತದೆ ಎನ್ನುವುದನ್ನು ಶಿಕ್ಷಕರು ತಿಳಿದುಕೊಳ್ಳಬೇಕು. ಉಣ್ಣುವ, ತಿನ್ನುವ ಮಲಗಿ ನಿದ್ರಿಸುವ ಬದುಕಿನ ಕ್ರಿಯೆಗಳಿಂದಾಚೆ ನಮ್ಮ ಮತ್ತು ನಮ್ಮ ಸುತ್ತಲಿರುವ ಇತರರ 'ಚಟುವಟಿಕೆ'ಗಳಲ್ಲಿ ಒಂದಷ್ಟು ಸ್ವಾಭಾವಿಕ ನಾಟಕೀಯತೆ ಇರುತ್ತದೆ. ಶ್ರೇಷ್ಠ ನಟರಾಗಿರುವವರು ಇದನ್ನು ಕಾಣುತ್ತಾರೆ, ಮಕ್ಕಳಿಗೆ ನಟನೆ ಮತ್ತು ನಾಟಕದ ಪರಿಚಯ ಶಾಲೆಯಲ್ಲಿಯೇ ಆಗಬೇಕು. ಅದರ ಇತಿಮಿತಿಯನ್ನು ಕೂಡ ಅವರು ಅಲ್ಲಿಯೇ ತಿಳಿಯಬೇಕು. ಯಾಕೆಂದರೆ, ನಟನೆ ಅಥವಾ ನಾಟಕ ಒಂದು 'ಹುಚ್ಚು' ಆಗಬಾರದು. ಅದು ಹೇಗೆ ಸಿನಿಮಾಕ್ಕಿಂತ ಭಿನ್ನ ಎನ್ನುವುದನ್ನು ಕೂಡ ಮಕ್ಕಳು




ನಿಮ್ಮ ಒಣಿಯ ಅಂಗಳದಲ್ಲೇ
ಒಂದು ರೊಟ್ಟಿಗಾಗಿ
ಎಳೆಗೂಸುಗಳ ಮೃದುಗೆನ್ನೆಯ ಮೇಲೆ
ಜೀತದ ಮುದ್ರೆ
ದರಬಾರು ನಡೆಸುವಾಗ
ನಿಮ್ಮ ಮನೆಯಲ್ಲಿ ನೀವು
ನಿಮ್ಮೊಡಲ ಕಂದನ ಹುಬ್ಬಿಗೆ
ಕಾಡಿಗೆ ತೀಡಿ, ದೃಷ್ಟಿ ನಿವಾಳಿಸಿ
ಕೈ ತುತ್ತು ಹಾಕುತ್ತ
ನಿರಂಬಳ ನಗುವಿರಾದರೆ...

ನೆರೆಮನೆಯ ಹುಡುಗಿ
ಹದಿನಾರರ ಹೊಂಗನಸುಗಳ ಚೆಲುವೆ
ಪುಂಡರ ತೊಡೆ ತೀಟೆಗೆ
ಕಣ್ಣ ಬೆಳಕು ಕಳೆದುಕೊಂಡು ಆರ್ತನಾದ ಗೈಯುವಾಗಲೇ
ಮೈನೆರೆತ ನಿಮ್ಮ ಮಗಳಿಗೆ
ಸತಿಪತಿಗಳೊಂದಾಗಿ ನೀವು
ಮಲ್ಲಿಗೆ ಮುಡಿಸಿ, ಪಟಾಕಿ ಸಿಡಿಸಿ
ಆರತಿ ಬೆಳಗಿ ನಲಿಯುವಿರಾದರೆ ...

ಮಾಲೆ ಕಟ್ಟುವ ಹೂಗಾರ ಮುದುಕಿ
ಬೀದಿ ಬದಿಯಲ್ಲಿ ಅನಾಥ ಹೆಣವಾದ ದಿನ
ಅದೇ ಬೀದಿಯಲ್ಲಿ ಮನೆ ಮಾಡಿದ ನೀವು
ನಿಮ್ಮ ಮನೆಯನ್ನು
ಘಮ-ಘಮಿಸುವ ಹೂಮಾಲೆಯಿಂದ
ಶೃಂಗರಿಸಿ, ಹೆಸರಿಡುವ –
ಜೋಗುಳ ಜಾತ್ರೆ ನಡೆಸಿ ಸಂಭ್ರಮಿಸುವಿರಾದರೆ ...

ನಿಮ್ಮದೇ ಊರಿನ
ಗುಡಿ ಯಾ ಮಸೀದೆಯ ಗೋಪುರಗಳು
ಮತಾಂಧರ ಸುತ್ತಿಗೆಗೆ ಸಿಲುಕಿ
ತುಂಡಾಗುತ್ತಿರುವಾಗ
ನೀವು ನಿಮ್ಮದೇ ಜಗುಲಿ ಯಾ ಮಸೀದೆಯಲ್ಲಿ
ಕೂತು ಭಜನೆ ಯಾ ಅಜಾ ಮಾಡುತ್ತ
ಸಂಪೂರ್ಣ ಭಕ್ತಿ ಪರವಶರಾಗುವಿರಾದರೆ...



... ನಿಮ್ಮೊಂದಿಗೆ ನನ್ನದೇನೂ ತಕರಾರಿಲ್ಲ
ಯಾಕೆಂದರೆ
ನನ್ನ ತಕರಾರಿರುವುದು
ಕೇವಲ ಮನುಷ್ಯರ ಜೊತೆಗೆ...!

ಬಸವರಾಜ ಸೂಳಿಭಾವಿ (ಬಸೂ)
೪೨, ಪ್ರಸಾದ ಲಾಜ್, ಗದಗ

ತಿಳಿದುಕೊಳ್ಳಬೇಕು. ಮಕ್ಕಳ ರಂಗಭೂಮಿಗೆ ಇರಬೇಕಾದ್ದು ಸಿನೀಮೀಯ ಗ್ಲಾಮರ್ ಅಲ್ಲ. ಅದಕ್ಕಿರಬೇಕಾದ್ದು ಶೈಕ್ಷಣಿಕ ಆಕರ್ಷಣೆ ಮಾತ್ರ.

ಸಿನಿಮಾದಲ್ಲಿ ಹೃದಯ ಕಲಕುವ ಸಂಗತಿಗಳಿಗೆ ಹೆಚ್ಚು ಒತ್ತು. ಮತ್ತು ರಂಗಭೂಮಿಯ ನಾಟಕಗಳಲ್ಲಿ ಕೂಡ ಹಾಸ್ಯ, ಕರುಣ, ಶೃಂಗಾರ ರಸಾನುಭವಕ್ಕೆ ಒತ್ತು. ಮಕ್ಕಳ ನಾಟಕಗಳನ್ನು ನೀಡುವವರು ಹಾಸ್ಯ ಮತ್ತು ಕರುಣವನ್ನು ಬಹುಮಟ್ಟಿಗೆ ತರುತ್ತಾರೆ. ವಿಶೇಷ ಆಕರ್ಷಣೆಗೆಂದು ಒಂದಷ್ಟು ಹಾರಾಟ, ಚೀರಾಟ, ವಿಲಕ್ಷಣ ನಡೆನುಡಿ ಸೇರಿಸುತ್ತಾರೆ. ಶಿಕ್ಷಣದ ಹೊರಗಿನ ರಂಗಭೂಮಿಯಲ್ಲಿ ಇಂಥದೆಲ್ಲ ಇರಬಹುದು. ಆದರೆ ಶಿಕ್ಷಣದಲ್ಲಿ ಇರಬೇಕಾದ್ದು ಮಕ್ಕಳನ್ನು ಬೌದ್ಧಿಕವಾಗಿ ತಟ್ಟುವ ಮುಟ್ಟುವ, ಅವರ ಚಿಂತನಶೀಲತೆಯನ್ನು ಬೆಳೆಸುವ ನಾಟಕಗಳು.

**ನಾಟಕ – ಒಂದು ಸಮಗ್ರ ಅನುಭವ**

ಮಕ್ಕಳ ನಾಟಕಗಳ ತಯಾರಿಯಲ್ಲಿ ಕೂಡ ಮಕ್ಕಳಿಗೆ ಭಾಗವಹಿಸುವ ಅವಕಾಶಗಳಿರಬೇಕು. ನಾಟಕದ ವಸ್ತುವಿನ ಆಯ್ಕೆ , ನಾಟಕ ರಚನೆ, ರಂಗಪ್ರಯೋಗ, ಪರಿಕರಗಳ ತಯಾರಿ, ನಿರ್ದೇಶನ ಎಲ್ಲದರಲ್ಲಿಯೂ ಮಕ್ಕಳು ಭಾಗವಹಿಸುವಂತೆ ಮಾಡಬೇಕು. ಇದು ಮಕ್ಕಳ ನಾಟಕಗಳ ನಿರ್ದೇಶಕನ ವಿಶೇಷವಾದ ಮತ್ತು ಮುಖ್ಯವಾದ ಕೆಲಸ. ಅವನು ಕೇವಲ ಮಕ್ಕಳ ನಾಟಕ ನಿರ್ದೇಶಕನಲ್ಲ. ಅವನು ಮಕ್ಕಳ ರಂಗಭೂಮಿಯ ಸೃಷ್ಟಿಕರ್ತನಂತೆ ಕೆಲಸ ಮಾಡಬೇಕು. ಎಲ್ಲಕ್ಕಿಂತ ಮೊದಲು ಅವನು ಮಾಡಬೇಕಾದ್ದು ಮಕ್ಕಳ ಮನಸ್ಸನ್ನು ಅರ್ಥ ಮಾಡಿಕೊಳ್ಳುವುದು. ಅನಂತರ ಅವನು ಯೋಚಿಸಬೇಕಾದ್ದು ಮಕ್ಕಳ ನಾಟಕಗಳನ್ನು ಆಡುವ ಮೂಲಕ ಅವರು ಏನು ಪಡೆಯುತ್ತಾರೆ ಎಂಬುದು. ಎಲ್ಲಾ ಶಿಕ್ಷಕರೂ ಇಂಥ ನಿರ್ದೇಶಕರಾದರೆ ಶಿಕ್ಷಣಕ್ಷೇತ್ರದಲ್ಲಿ ಕ್ರಾಂತಿಯಾಗುತ್ತದೆ. ಇದನ್ನು ಶಿಕ್ಷಕ ತರಬೇತಿಯಲ್ಲಿ ಒಂದು ಮುಖ್ಯ ಅಧ್ಯಯನ ಮತ್ತು ತರಬೇತಿಯ ವಿಷಯವಾಗಿ ಪರಿಗಣಿಸಬೇಕಾದ ಅಗತ್ಯವಿದೆ.

ಮಕ್ಕಳ ನಾಟಕಗಳ ಶೈಕ್ಷಣಿಕ ಮಹತ್ವವನ್ನು ಇವತ್ತಿಗೂ ಶಿಕ್ಷಣ ವ್ಯವಸ್ಥೆ ಗಮನಕ್ಕೆ ತೆಗೆದುಕೊಂಡಿಲ್ಲ. ಮಕ್ಕಳ ಕತೆಗಳೆಂದು ಪ್ರಚಲಿತವಿರುವ ನಾಟಕಗಳಲ್ಲಿ ಹೆಚ್ಚಿನವು ಶಾಲಾ ಮಕ್ಕಳಿಗಾಗಿ ಬರೆದವುಗಳಲ್ಲ. ರಂಗಭೂಮಿಯನ್ನು ಅಪೇಕ್ಷಿಸುವ ಇಂಥ ನಾಟಕಗಳು ಹಲವೊಂದು ಗಿಮಿಕ್‌ಗಳ ಮೂಲಕ ಮಕ್ಕಳಿಗೂ ಅವರ ಹೆತ್ತವರಿಗೂ ಕಿಂಚಿತ್ ರಂಜನೆ ನೀಡುವಲ್ಲಿ ಸಫಲವಾಗಬಹುದು. ವಿಲಕ್ಷಣವಾದ ನಡೆದಾಟ, ಕುಣಿದಾಟ, ಹಾರಾಟ, ಚೀರಾಟ ಮುಂತಾದ ದೈಹಿಕ ಕಸರತ್ತುಗಳಿಂದ ಕೂಡಿದ ನಾಟಕಗಳಷ್ಟೇ ಮಕ್ಕಳ ನಾಟಕಗಳಲ್ಲ. ದೊಡ್ಡವರ ಬದುಕು, ಅದರಲ್ಲಿರುವ ಕಾಮ - ಪ್ರೇಮ, ನೆಲದಾಹ, ದ್ರವ್ಯದಾಹ, ಅಪರಾಧ, ಅಧಿಕಾರದಾಹ, ಮದ-ಮತ್ಸರ ಮತ್ತಿತರ ಅಪಚಾರಗಳನ್ನು ಶಿಶುಭಾಷೆಯಲ್ಲಿ ಸಾದರಪಡಿಸಿದರೆ ಅದು ಮಕ್ಕಳ ನಾಟಕ ಅಥವಾ ಮಕ್ಕಳ ಸಿನಿಮಾ ಆಗುವುದಿಲ್ಲ. ಮಕ್ಕಳ ಕಥೆಗಳ ನಾಯಕನಿಗೂ ದೊಡ್ಡವರ ಕಥೆಗಳ ನಾಯಕನಿಗೂ ಬಹಳ ವ್ಯತ್ಯಾಸವಿದೆ.

ಮಕ್ಕಳ ಸಾಹಿತ್ಯದಲ್ಲಿ ವಿಶ್ವದ ನಾನಾ ಭಾಗಗಳ ಉತ್ತಮ ಕಥೆಗಳನ್ನು, ಪದ್ಯಗಳನ್ನು, ನಾಟಕಗಳನ್ನು ಸೇರಿಸಿಕೊಳ್ಳಬಹುದು. ಒಂದು ಭಾಷೆ ಮತ್ತು ಅದರ ಸಾಹಿತ್ಯವನ್ನು ಪ್ರೀತಿಸುವಂತೆ ಮಾಡುವ ಕೆಲಸವನ್ನು ಕಥೆಗಳು ಮತ್ತು ನಾಟಕಗಳಷ್ಟು ಚಲೋದಾಗಿಯೂ ಪರಿಣಾಮಕಾರಿಯಾಗಿಯೂ ಮಾಡುವ ಮಾಧ್ಯಮ ಇನ್ನೊಂದಿಲ್ಲ. ಈ ವಿಚಾರದಲ್ಲಿ, ನಾಟಕ ಪ್ರಕಾರವು ಕಥಾ ಪ್ರಕಾರಕ್ಕಿಂತ ಒಂದಷ್ಟು ಭಿನ್ನ. ಹೇಗೆಂದರೆ, ಒಂದೇ ದಿನದಲ್ಲಿ ಮಗು ಒಂದು ದೊಡ್ಡ ಕಥೆಯನ್ನು ಅಥವಾ ಹಲವು ಚಿಕ್ಕ ಕಥೆಗಳನ್ನು ಓದಿ ಮುಗಿಸಬಹುದು. ಕಥೆಗಳನ್ನು ಪೇಳೆ ಸಿಕ್ಕಾಗಲೆಲ್ಲಾ ಓದಬಹುದು. ಮೌನವಾಗಿ ಏಕಾಂತದಲ್ಲಿ ಓದಿ ಖುಷಿ ಪಡಬಹುದು. ನಾಟಕವನ್ನು ದಿನಾ ನೋಡಲಿಕ್ಕಾಗುವುದಿಲ್ಲ. ನಾಟಕ ಆಗಾಗ ನೋಡಲಿಕ್ಕೆ ಸಿಗುವಂಥದೂ ಅಲ್ಲ. ನಾಟಕ ನೋಡಲು ಅದು ನಡೆಯುವಲ್ಲಿಗೇ ಹೋಗಬೇಕು.

ಭಾಷೆಯನ್ನು ಹೇಗೆ ಸರಿಯಾಗಿ ಆಡಬೇಕು ಹೇಗೆ ಓದಬೇಕು ಎಂಬ ತರಬೇತಿಯನ್ನು ನೀಡುವಲ್ಲಿ ನಾಟಕಗಳಿಗೆ ಸರಿಸಾಟಿ ಬೇರೆ ಇಲ್ಲ. ಮಕ್ಕಳು ಇಷ್ಟಪಡುವ ನಾಟಕಗಳನ್ನು ತರಗತಿಗಳಲ್ಲಿ ಒಂದು ಪಾಠವಾಗಿ ಆಡಬಹುದು. ನಾಟಕದ ಪಾತ್ರಗಳನ್ನು ಮಕ್ಕಳ ನಡುವೆ ಹಂಚಿ ಓದಿಸುವ ಚಟುವಟಿಕೆಗಳನ್ನು ತರಗತಿಗಳಲ್ಲಿ ನಡೆಸಬೇಕು. ಭಾಷಾ ಪಾಠದ ಒಂದು ಭಾಗವಾಗಿ ನಾಟಕವನ್ನು ಓದುವಂಥ ಆಸಕ್ತಿಯನ್ನು ಮಕ್ಕಳಲ್ಲಿ ಹುಟ್ಟಿಸಬೇಕು. ಸ್ಪಷ್ಟ, ಶುದ್ಧ ಉಚ್ಚಾರಣೆ, ಮಾತಿನ ಲಯ ಮುಂತಾದುವುಗಳನ್ನಲ್ಲದೆ, ಸಂಭಾಷಣಾ ಚಾತುರ್ಯವನ್ನು ಮಕ್ಕಳು ನಾಟಕಗಳ ಮೂಲಕ ಕಲಿಯಬಹುದಾಗಿದೆ. ಸಾಧ್ಯವಾದರೆ ಆಗಾಗ ಶಾಲಾ ರಂಗಭೂಮಿಯಲ್ಲಿ ಪ್ರದರ್ಶನಗಳನ್ನೇರ್ಪಡಿಸಬೇಕು. ಹಾಗೆ ಮಾಡಿದಾಗ ಏಕಕಾಲದಲ್ಲಿಯೇ ನೂರಾರು ಮಕ್ಕಳಿಗೆ ಒಂದು ಅಪೂರ್ವವಾದ ಭಾಷಾಪಾಠ ಲಭ್ಯವಾಗುತ್ತದೆ. ಯಾವುದೇ ಶಾಲಾ ರಂಗಭೂಮಿಯಲ್ಲಿ ನಾಟಕವನ್ನು ಪ್ರದರ್ಶಿಸಿದ ಬಳಿಕ ನಾಟಕದ ಪಠ್ಯವನ್ನು ಮಕ್ಕಳಿಗೆ ಒದಗಿಸಬೇಕಾದ್ದು ಅತಿ ಅಗತ್ಯ. ನಾಟಕದಲ್ಲಿ ಕೇಳಿದ ಮಾತುಗಳು ಅವರ ನೆನಪಿನಲ್ಲಿರುವಾಗಲೇ ನಾಟಕದ ಪಠ್ಯ ಅವರಿಗೆ ಸಿಗಬೇಕು. ಈ ಮೂಲಕ ಮಕ್ಕಳು ಭಾಷೆಯನ್ನು ಬಹಳ ಸಮರ್ಥವಾಗಿ ಮತ್ತು ವೇಗವಾಗಿ ಕಲಿತುಕೊಳ್ಳುತ್ತಾರೆ.

ತಮ್ಮ ಪಠ್ಯಪುಸ್ತಕದಲ್ಲಿರುವ ಯಾವ ಪಾಠಗಳನ್ನು ಮಕ್ಕಳು ಮರಳಿ ಮರಳಿ ಓದುತ್ತಾರೆ ಎಂದು ಪಾಲಕರು ಮತ್ತು ಶಿಕ್ಷಕರು ವಿಚಾರಿಸಿ ನೋಡಿದರೆ, ನಾಟಕಗಳನ್ನು ಮತ್ತು ಹಾಡುಗಳನ್ನು ಎಂದು ಕಂಡುಕೊಳ್ಳಬಹುದು. ಪಾತ್ರಗಳನ್ನು ಹಂಚಿಕೊಟ್ಟು ಮಕ್ಕಳಿಂದ ಓದಿಸಿದರೆ, ಅವರಿಗೆ ಅದರಿಂದ ಬಹಳ ಮುದ ಸಿಗುತ್ತದೆ. ಅದು ಎಂದೆಂದೂ ಮರೆಯದಂತಹ ಅನುಭವವಾಗುತ್ತದೆ. ವ್ಯಾಕರಣ ಅಭ್ಯಾಸದ ಮೂಲಕ ಭಾಷೆಯ ಮೇಲೆ ಪ್ರಭುತ್ವ ಬರುವುದಿಲ್ಲ. ವ್ಯಾಕರಣಬದ್ಧ ವಾಕ್ಯಸೂತ್ರಗಳ ಪ್ರಕಾರ ನೂರಾರು ವಾಕ್ಯಗಳನ್ನು ರಚಿಸಿ ಮುದ್ರಿಸಿಕೊಟ್ಟರೆ ಭಾಷೆಯನ್ನು ಸುಲಲಿತವಾಗಿ ಆಡಲು ಬರೆಯಲು ಬರುವುದಿಲ್ಲ. ಭಾಷೆಯನ್ನು ಸುಲಲಿತವಾಗಿ ಆಡಲು ಬರಬೇಕಾದರೆ, ಭಾಷೆಯು ನಮ್ಮ ಚಿಂತನೆಯಾಗಿ ಹೊರಬರಬೇಕು. ನಾವು ಆಡುವ ವಾಕ್ಯ ನಮ್ಮ ವಾಕ್ಯವಾಗಿರಬೇಕು. ಅಂದರೆ, ನಮ್ಮ ಮಾತು ನಮ್ಮದೇ ಚಿಂತನೆಯ ಅಭಿವ್ಯಕ್ತಿಯಾಗಿರಬೇಕು.

ಶಾಲಾ ತರಗತಿಯಲ್ಲಿ ನಡೆಯುವ ಹಲವು ಔಪಚಾರಿಕ ಭಾಷಾಪಾಠಗಳು ಏನು ಸಾಧಿಸುತ್ತವೆಯೋ ಅದನ್ನು ಅದಕ್ಕಿಂತ ಪರಿಣಾಮಕಾರಿಯಾಗಿ ಒಂದು ನಾಟಕ ಸಾಧಿಸಬಹುದು. ಒಂದು ನಾಟಕವು ರಂಗಪ್ರಯೋಗಕ್ಕೆ ಅನುಕೂಲವಾದುದಾಗಿರಲಿ ಅಲ್ಲದಿರಲಿ, ಅದರಲ್ಲಿ ಒಂದು ಕಥೆಯಿದ್ದರೆ ಮತ್ತು ಸಂಭಾಷಣೆಯ ಮೂಲಕ ಆ ಕಥೆ ನಡೆಯುವುದನ್ನು ಓದಿನ ಮೂಲಕ ಕಾಣಬಹುದಾಗಿದ್ದರೆ, ಅದನ್ನು ನಾವು ಓದಿ ಆನಂದಿಸಬಹುದಾಗಿದೆ. ಆದ್ದರಿಂದ ಮಕ್ಕಳಲ್ಲಿ ಆ ಭಾವನೆಯಿಂದ ನಾಟಕ ಓದುವ ಅಭ್ಯಾಸವನ್ನು ಚಿಕ್ಕಂದಿನಲ್ಲಿಯೇ ಬೆಳೆಸಬೇಕು.

ಹಲವು ವರ್ಷಗಳ ಭಾಷಾಭ್ಯಾಸದ ಬಳಿಕ ಕೂಡ ಮಕ್ಕಳು ಯಾಕೆ ಚಲೋದಾಗಿ ಮಾತಾಡುವುದಿಲ್ಲ, ಭಾಷೆಯನ್ನು ಕಲಿಯಲು ಯಾಕೆ ತ್ರಾಸಪಡುತ್ತಾರೆ ಎಂದು ನಾವು ಯಾವತ್ತಾದರೂ ಯೋಚಿಸಿದ್ದೇವೆಯೆ? ಸುಮಾರು ಹತ್ತು-ಹನ್ನೆರಡು ವರ್ಷಗಳ ಭಾಷಾಭ್ಯಾಸದ ನಂತರ ಕೂಡ ಉಚ್ಚಾರ ದೋಷಗಳು, ವ್ಯಾಕರಣದೋಷಗಳು ಸಾಮಾನ್ಯ. ಕೇಳುವವರಿಗೆ ಸ್ಪಷ್ಟವಾಗಿ ಕೇಳಿಸುವಂತೆ ಮತ್ತು ಸ್ಪಷ್ಟವಾಗಿ ಅರ್ಥವಾಗುವಂತೆ ಭಾಷೆಯನ್ನು ಆಡುವವರ ಸಂಖ್ಯೆ ಯಾಕಿಷ್ಟು ಕಡಿಮೆ ?

ಭಾಷೆಯ ಬಳಕೆಯಲ್ಲಿನ ಬಹಳಷ್ಟು ಕುಂದುಕೊರತೆಗಳಿಗೆ ಶಾಲೆಯಲ್ಲಿ ಭಾಷೆಯನ್ನು ಕಲಿಸುವುದರಲ್ಲಿರುವ ದೋಷಗಳೇ ಕಾರಣ. ಮಕ್ಕಳಿಗೆ ಆರಂಭದಲ್ಲಿ ಶಿಕ್ಷಕರು ಹೇಗೆ ಓದಲು ಹೇಳಿಕೊಡುತ್ತಾರೆ? ಮೊದಲು 'ಅಕ್ಷರದ ನಂತರ ಅಕ್ಷರ' ವಿಧಾನದಲ್ಲಿ. ಅನಂತರ 'ಶಬ್ದದ ನಂತರ ಶಬ್ದ' ವಿಧಾನದಲ್ಲಿ. ಯಾವ ಮಗು ತನ್ನ ಮನೆಯಲ್ಲಿ ಈ ರೀತಿ ಮಾತಾಡಲು ಕಲಿತುಕೊಂಡಿರುತ್ತದೆ? [illegible]

ಮಾತಾಡುತ್ತಾರೆ? ಮಗು ಇಡೀಯಿಡೀ ವಾಕ್ಯಗಳನ್ನು ಕೇಳಿಸಿಕೊಂಡು ಅದೇ ರೀತಿ ಮಾತಾಡಲು ಕಲಿತುಕೊಂಡಿರುತ್ತದೆ. ಅದನ್ನು ಗಮನಕ್ಕೆ ತೆಗೆದುಕೊಳ್ಳದೆ, ಶಿಕ್ಷಕರು ಅನುಸರಿಸುವ ಈ ಅವೈಜ್ಞಾನಿಕ ವಿಧಾನ ಮಗುವನ್ನು 'ಹೆಳವ ಓದುಗ'ನಾಗಿಸುತ್ತದೆ. ಮಕ್ಕಳು ಕೆಟ್ಟ ಕೆಟ್ಟದಾಗಿ ಓದಲು ಶಿಕ್ಷಕರೇ ಕಾರಣ ಎನ್ನುವ ವಿಖ್ಯಾತ ಶಿಕ್ಷಣತಜ್ಞನೊಬ್ಬ ''ನಮ್ಮ ಮಕ್ಕಳಿಗೆ ಭಾಷೆ ಕಲಿಸಲು ಶಾಲೆಗಳಿರುವಂತೆ, ನಡೆಯುವುದನ್ನು ಕಲಿಸಲು ಕೂಡ ಶಾಲೆಗಳಿರುತ್ತಿದ್ದರೆ, ಅವರೆಲ್ಲ ಹೆಳವರಾಗುತ್ತಿದ್ದರು,'' ಎಂದು ಹೇಳುತ್ತಾನೆ.

ಮಾತು ವಾಕ್ಯಗಳ ರೂಪದಲ್ಲಿರುತ್ತದೆ. ವಾಕ್ಯವನ್ನು ನಾವು ಆಡುವುದು ಅಥವಾ ಓದುವುದು ''ನುಡಿಗಟ್ಟುಗಳ ಪುಂಜ''ಗಳಾಗಿರುವ ವಾಕ್ಯಗಳ ರೂಪದಲ್ಲಿಯೇ ಹೊರತು ''ಶಬ್ದದ ನಂತರ ಶಬ್ದ''ವಾಗಿ ಅಲ್ಲ. ಕೆಳಗಿನ ತರಗತಿಗಳಲ್ಲಿ ಓದುವ ಮಕ್ಕಳು ವಾಕ್ಯಗಳನ್ನು ಏರುಪೇರಿಲ್ಲದೆ ಓದುವುದು, ಒಂದು ವಿಚಿತ್ರವಾದ ರಾಗದಲ್ಲಿ ಓದುವುದು ಸಾಮಾನ್ಯ. ತಡೆತಡೆದು, ಅಕ್ಷರ ಅಕ್ಷರವಾಗಿ, ಶಬ್ದ ಶಬ್ದವಾಗಿ ಓದುವುದು ಕೂಡ ಸಾಮಾನ್ಯ. ಇದಕ್ಕೆ ಶಿಕ್ಷಕರು ಸರಿಯಾದ ರೀತಿಯಲ್ಲಿ ಭಾಷೆಯನ್ನು ಓದಲು ಕಲಿಸದಿರುವುದೇ ಕಾರಣ. ಈ ರೀತಿಯ ಓದುವಿಕೆ ವ್ಯಕ್ತಿಯಲ್ಲಿ ಶಾಶ್ವತೀಕರಣ ಗೊಳ್ಳುತ್ತದೆ ಎಂಬುದನ್ನು ನಾವು ಗಮನಿಸಬಹುದು. ಸರಿಯಾದ ಓದುವಿಕೆಯು ಹತ್ತಿರ ಹತ್ತಿರ ಮಾತಿನ ಧಾಟಿಯಲ್ಲಿಯೇ ಇರಬೇಕು. ನಾಲ್ಕೈದು ನಾಟಕ ಪ್ರಯೋಗಗಳನ್ನು ಏರ್ಪಡಿಸಿ, ಅದರ ಪಠ್ಯವನ್ನು ಮಕ್ಕಳಿಗೆ ಒದಗಿಸಿಕೊಟ್ಟರೆ ಏಕ ಕಾಲದಲ್ಲಿಯೇ ನಾನೂರು-ಐನೂರು ಮಕ್ಕಳಿಗೆ ಅದೊಂದು 'ಕರೆಕ್ಟಿವ್' ಭಾಷಾಪಾಠವಾಗುತ್ತದೆ.

ತರಗತಿಯಲ್ಲಿ ಇಂಗ್ಲಿಷನ್ನು ಈವರೆಗಿನ ಕಲಿಕೆಯ ರೂಢಿಯಲ್ಲಿ ಕಲಿಸುವ ಬದಲು ನಾಟಕಗಳ ಮೂಲಕ ಪ್ರಾಥಮಿಕ ತರಗತಿಗಳಿಂದಲೇ ಕಲಿಸಬಹುದು. 'ಕಲಿಸದೆ ಕಲಿಸುವ' ಈ ವಿಧಾನದಿಂದ ಮಕ್ಕಳು ತಮ್ಮ ಸ್ವಂತ ಭಾಷೆಯನ್ನು ಮಾತಾಡುವಂತೆ ಇಂಗ್ಲಿಷ್ ಭಾಷೆಯಲ್ಲಿ ಮಾತಾಡಲು ಕಲಿತುಕೊಳ್ಳುತ್ತಾರೆ. ಭಾಷೆಯನ್ನು ಕಲಿಯುವುದು ಬಳಕೆಯ ಮೂಲಕ; ಮಾತು, ಓದು ಮತ್ತು ಬರವಣಿಗೆಯ ಮೂಲಕ. ಪ್ರಬಂಧ, ಕತೆ, ಕವಿತೆಗಳನ್ನು ಓದಿ 'ಕಠಿಣ' ಪದಗಳ ಅರ್ಥ ಕೊಟ್ಟು, ವ್ಯಾಕರಣ ಕಲಿಸಿ, ಪ್ರಶ್ನೆಗಳನ್ನು ಕೊಟ್ಟು ಅವುಗಳಿಗೆ ಉತ್ತರ ಬರೆಸಿ, ಅಂಕಗಳನ್ನು ಹಾಕಿ ಪಾಸು ಫೈಲು ಮಾಡುವ ರೂಢಿಯಲ್ಲಿ ಮಗುವಿಗೆ ಬೇಕಾದಷ್ಟು ಭಾಷೆ ಬರುವುದಿಲ್ಲ ಎನ್ನುವುದನ್ನು ನಾವು ತಿಳಿದುಕೊಂಡಾಗಿದೆ.

ಆಗದ ಕಾರು

ಯಾರಾದ್ರೂ 'ನೀರು' ಹಾಕಿ ಓಡಿಸುವ ಕಾರು ತಯಾರು ಮಾಡಿದ್ರೆ ನಾನೂ ಒಂದು ಖರೀದಿಸುವ ಅಂತಿದ್ದೆ...?!

ನಾಟಕವನ್ನು ಆಡಿದ ಬಳಿಕ ಮಕ್ಕಳು ಅದರ ಕುರಿತು ಮಾತಾಡಬೇಕು, ಚರ್ಚಿಸಬೇಕು, ವಿಮರ್ಶಿಸಬೇಕು. ಇದು ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಯಲ್ಲಿ ಜೊತೆಜೊತೆಯಾಗಿಯೇ ನಡೆಯಬಹುದು. ಅದು ನಿಜವಾದ ಪಾಠ. ಆಡಿದ ನಾಟಕವನ್ನೇ ಪುನಃ ಪುನಃ ಆಡಬೇಕು. ಒಂದೇ ನಾಟಕವನ್ನು ಎಲ್ಲಾ ತರಗತಿಯವರೂ ಆಡಬೇಕು. ಆ ನೆಲೆಯಲ್ಲಿ ನಾಟಕ ಸ್ಪರ್ಧೆ ನಡೆಸಬೇಕು. ಇಂಗ್ಲಿಷ್ ಭಾಷೆಯ ನಾಟಕದಲ್ಲಿ, ಉಚ್ಚಾರ, ಆ್ಯಕ್ಸೆಂಟ್ ಮತ್ತು ಇಂಟೊನೇಷನ್‌ಗೆ ಪ್ರತ್ಯೇಕ ಗಮನ ನೀಡಬೇಕು. ಮಕ್ಕಳಿಂದಲೇ ಚಿಕ್ಕ ಚಿಕ್ಕ ನಾಟಕ ಬರೆಸಬೇಕು. ಅದಕ್ಕೆ ಬೇಕಾದ ಕತೆಯನ್ನು, ಸನ್ನಿವೇಶಗಳನ್ನು ಮಕ್ಕಳು ಮತ್ತು ಶಿಕ್ಷಕರು ಸೇರಿ ಹೆಣೆಯಬಹುದು. ಜಾನಪದ ಕತೆಗಳು (ಫೋಕ್ ಟೇಲ್ಸ್) ಮತ್ತು ಅಪ್ಸರ ಕತೆಗಳನ್ನು (ಫೇರಿ ಟೇಲ್ಸ್) ಬಹಳ ಸುಲಭವಾಗಿ ನಾಟಕವಾಗಿ ಪರಿವರ್ತಿಸಬಹುದು. ತರಗತಿಯಲ್ಲಿ ನಾಟಕವನ್ನು ಆಡುವಾಗ ಮಕ್ಕಳು ಪಾತ್ರದ ಮಾತುಗಳನ್ನು ಕಂಠಪಾಠ ಮಾಡಲೇಬೇಕೆಂದಿಲ್ಲ. ಮಾಡಿದರೆ ಒಳ್ಳೆಯದು. ಇಂಗ್ಲಿಷ್ ನಾಟಕವಾದರೆ, ಕಂಠಪಾಠ ಮಾಡುವುದರಿಂದ ಹೆಚ್ಚು ಪ್ರಯೋಜನವಿದೆ. ಆದರೆ ಮಾತುಗಳ ಅರ್ಥ ಮಕ್ಕಳಿಗೆ ತಿಳಿದಿರಬೇಕು. ಒಂದು ತರಗತಿಯವರು ಕನ್ನಡದಲ್ಲಿ ಆಡಿದ್ದನ್ನೇ ಇನ್ನೊಂದು ತರಗತಿಯವರು ಇಂಗ್ಲಿಷಿನಲ್ಲಿ ಆಡಿದರೆ ಇಂಗ್ಲಿಷ್ ಕಲಿಕೆಯಲ್ಲಿ ಒಂದು ಕ್ರಾಂತಿಯೇ ಆರಂಭವಾಗುತ್ತದೆ. ಸಿನಿಮಾ ನೋಡಿ, ಟೀವಿ ನೋಡಿ ಮಕ್ಕಳು ಇಂಗ್ಲಿಷ್ ಮತ್ತು ಹಿಂದಿ ಕಲಿತಿರುವುದು ಇದೇ ವಿಧಾನದಲ್ಲಿ. ತನ್ನ ಮನೆಯ ಪರಿಸರದಲ್ಲಿ ಜನರಾಡುವ ಬೇರೆ ಭಾಷೆಗಳನ್ನು ಮಕ್ಕಳು ಬಹಳ ಸುಲಭದಲ್ಲಿ ಕಲಿತುಕೊಳ್ಳುವುದು ಇದೇ ರೀತಿಯಲ್ಲಿ.

ನಾಟಕಾಭಿನಯದ ಮೂಲಕ ಮಗುವಿನಲ್ಲಿ ಆತ್ಮವಿಶ್ವಾಸ ತಾನಾಗಿಯೇ ಬೆಳೆಯುತ್ತದೆ. ಸಭಾಕಂಪನ ಎಂಬುದೊಂದಿದೆ, ಅದನ್ನು ಗೆಲ್ಲುವುದು ಹೇಗೆ ಎಂದು ಹೇಳಿಕೊಡಬೇಕಾದ್ದೇ ಇಲ್ಲ. ಅಂಥದ್ದನ್ನೆಲ್ಲಾ ನೇರವಾಗಿ ಗೆಲ್ಲುವ ವಿಧಾನವೇ ತಪ್ಪು. ಮನಸ್ಸು ಬೇರೆ ಕ್ರಿಯೆಯಲ್ಲಿ ತೊಡಗಿದಾಗ ಉಂಟಾಗುವ ಮೈಮರವೆಯಲ್ಲಿ 'ಸೆಲ್ಫ್ ಕಾನ್ಶಸ್‌ನೆಸ್' ಎಂಬುದು ತಾನಾಗಿ ಅದೃಶ್ಯವಾಗುತ್ತದೆ. ನಾಟಕ ಅಂಥ ಅವಕಾಶವನ್ನು ಒದಗಿಸಿಕೊಡುತ್ತದೆ.

ಮಗುವಿನ ಪ್ರತಿ ದಿನದ ತರಗತಿಯ ಓದು ಅನುಭವವಾಗುವುದಿಲ್ಲ. ಅನುಭವವಾಗದ್ದು ಪೂರ್ಣವಾಗಿ ನೆನಪಿನಲ್ಲಿ ಉಳಿಯುವುದಿಲ್ಲ. ನೆನಪಿನಲ್ಲಿಡಲು ಪ್ರತ್ಯೇಕವಾಗಿ ಶ್ರಮಪಡಬೇಕಾಗುತ್ತದೆ. ಆದರೆ ಪ್ರತಿಯೊಂದು ನಾಟಕಾನುಭವವೂ ಮಕ್ಕಳ ನೆನಪಿನಲ್ಲಿ ಉಳಿಯುತ್ತದೆ. ಕಾರಣ, ಅದು ಅನುಭವ. ಅದು ಮಾನಸಿಕ ಕ್ರಿಯೆ ಮತ್ತು ಶಾರೀರಿಕ ಚಟುವಟಿಕೆ ಎರಡೂ ಸೇರಿದ ಅನುಭವ. ನಾಟಕದಲ್ಲಿನ ಮಾತುಗಳು ಪಠ್ಯಪುಸ್ತಕದ ಪಾಠಗಳ ಮಾತುಗಳಂತಿರದೆ, ನಾವು ಬದುಕಿನಲ್ಲಿ ಆಡುವ ಮಾತುಗಳಂತಿರುವುದರಿಂದ ಮಕ್ಕಳಿಗೆ ಆತ್ಮೀಯವಾಗುತ್ತವೆ. ಆತ್ಮೀಯವಾದದ್ದು ಮರೆತುಹೋಗುವುದಿಲ್ಲ.

**ಮಕ್ಕಳೇ ನಾಟಕ ರಚಿಸಬಹುದು**

ಮಕ್ಕಳು ಕೂಡ ತಮಗೆ ಸಿಕ್ಕಿದ ಕಥೆಗಳನ್ನು ಆಯ್ದುಕೊಂಡು ಐದು-ಹತ್ತು-ಹದಿನೈದು ನಿಮಿಷಗಳ ನಾಟಕ-ಕಥೆಯನ್ನು ಹೆಣೆಯಬಹುದು. ತಾವು ಕಂಡ ವಸ್ತು, ದೃಶ್ಯ, ತಮಗಾದ ಅನುಭವ ಇತ್ಯಾದಿಗಳ ಬಗ್ಗೆ ನಾಲ್ಕೈದು ಸಾಲಿನ ಹಾಡುಗಳನ್ನು ಅಥವಾ ಪುಟ್ಟ ಪುಟ್ಟ ಪ್ರಬಂಧಗಳನ್ನು ರಚಿಸಬಹುದು. ಚಿಕ್ಕ ಮಕ್ಕಳನ್ನು ಆಕರ್ಷಿಸುವಂಥ ಚಿಕ್ಕ ಮಕ್ಕಳ ಕಥೆಗಳು ಜನಪದದಲ್ಲಿ, ಪತ್ರಿಕೆ, ಪುಸ್ತಕಗಳಲ್ಲಿ ಹೇರಳವಾಗಿ ಸಿಗುತ್ತವೆ. ಒಂದು ಪರಿಪೂರ್ಣ ನಾಟಕವಾಗುವಂಥ ವಸ್ತು ಅವುಗಳಲ್ಲಿ ಇರುವುದು ಕಡಿಮೆ. ಇದ್ದರೂ ಅಂಥ ಕೆಲಸವನ್ನು ಮಕ್ಕಳಿಂದ ಮಾಡಲಿಕ್ಕಾಗದು. ಆದರೆ ಮಕ್ಕಳಿಗೆ ಅವುಗಳ ಮೂಲಕ ಸಂಭಾಷಣೆಯನ್ನು ರಚಿಸುವ ತರಬೇತಿಯನ್ನು ನೀಡಲು ಸಾಧ್ಯವಿದೆ. ಇದನ್ನು ಇಬ್ಬರು ಮೂವರು ಸೇರಿ ಕೂಡ ಮಾಡಬಹುದು. ಇಂಥ ತರಬೇತಿಯ ಲಾಭ ಬಹಳ. ನಾಟಕಗಳಲ್ಲಿ ಪಾತ್ರಗಳು ಆಡುವ ಮಾತುಗಳು ನಾವು ನಮ್ಮ ದಿನದಿನದ ಬದುಕಿನಲ್ಲಿ ಆಡುವ ಮಾತುಗಳೇ ಆಗಿರುತ್ತವೆ ಎಂಬುದನ್ನು ಮಕ್ಕಳು ಗುರುತಿಸುತ್ತಾರೆ. ಭಾಷೆಯನ್ನು ಪ್ರೀತಿಸಲು ಕಲಿಯುತ್ತಾರೆ.

ಭಾಷೆ ಮತ್ತು ಚಿಂತನೆ ಎಲ್ಲಾ ಕಲಿಕೆಯ ಅಡಿಗಲ್ಲು. ಭಾಷೆ ಸಶಕ್ತವಾಗಿದ್ದರೆ, ಕಲಿಕೆ ಸಶಕ್ತವಾಗಿರುತ್ತದೆ. ತಮ್ಮ ಚಿಂತನಶಕ್ತಿ, ವಿಚಾರಶಕ್ತಿ, ಕಲ್ಪನಾಶಕ್ತಿ ಮತ್ತು ಸೃಜನಶೀಲತೆಯನ್ನು ಬೆಳೆಸಲು ತಾವೇ ಕಲಿತುಕೊಳ್ಳುವಂತೆ ಮಕ್ಕಳಿಗೆ ಕಲಿಸಲು ನಾಟಕಗಳು ಅತ್ಯಂತ ಸಹಕಾರಿ. ಈ ರೀತಿ ತಮಗಾಗಿ ತಾವೇ ತಯಾರಿಸಿಕೊಂಡ ಸಾಹಿತ್ಯವೇನಿದೆಯೋ ಅದು ಕೂಡ ಮಕ್ಕಳ ಸಾಹಿತ್ಯವೇ. ಮಕ್ಕಳ ಸಾಹಿತ್ಯವೆಂದರೆ ಮುದ್ರಿತವಾದದ್ದು, ಪುಸ್ತಕದಂಗಡಿಯಲ್ಲಿ ಲಭಿಸುವಂಥದು ಎಂದು ನಾವು ವ್ಯಾಖ್ಯಾನಿಸಬೇಕಾಗಿಲ್ಲ. ಒಂದು ತರಗತಿಯ ಅಥವಾ ಶಾಲೆಯ ಮಕ್ಕಳು ತಮ್ಮ ಶಿಕ್ಷಕರ ನೆರವಿನಿಂದ ತಮಗಾಗಿ ತಾವೇ ಶಿಶುಸಾಹಿತ್ಯವನ್ನು ನಿರ್ಮಿಸಿಕೊಳ್ಳಬಹುದು. ಈ ಸಾಹಿತ್ಯ ಆಯಾಯ ಶಾಲೆಯ ಪರಿಸರಕ್ಕನುಸಾರವಾಗಿ ರೂಪುಗೊಳ್ಳಬಹುದು. ಅದರಲ್ಲಿ ಅಲ್ಲಿನ ಬದುಕು ಮತ್ತು ಸಮಾಜ, ಅಲ್ಲಿನ ಭೌಗೋಳಿಕ, ಐತಿಹಾಸಿಕ ಮತ್ತಿತರ ವೈಶಿಷ್ಟ್ಯಗಳು ಸ್ಥಾನ ಪಡೆಯಬಹುದು. ಅದು ಜೀವಂತ ಶಿಶುಸಾಹಿತ್ಯವಾಗುತ್ತದೆ. ಅದರಲ್ಲಿ ಶಿಶುಮನ ಮಿಡಿಯುತ್ತಿರುತ್ತದೆ.

**ಕೆ. ಟಿ. ಗಟ್ಟಿ**
'ವನಶ್ರೀ', ಉಜಿರೆ, ದ.ಕ.ಜಿಲ್ಲೆ – ೫೭೪ ೨೪೦




ಲೇಖಕರು
**ಡಾ|| ಎಸ್. ಬಾಲಚಂದ್ರ ರಾವ್**
ಪ್ರಕಾಶಕರು
**ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ**
ಭಾರತೀಯ ವಿದ್ಯಾಭವನ
ಬೆಂಗಳೂರು - ೫೬೦ ೦೦೧
**ಪುಟ : viii+೧೦೫ ಬೆಲೆ : ರೂ. ೬೦**

# ಡಾ|| ಎಸ್. ಬಾಲಚಂದ್ರ ರಾವ್ ಅವರ 'ಹೊಸ' ಆಕರಗ್ರಂಥ
# ವೇದಾಂಗ ಜ್ಯೋತಿಷ

ಪ್ರಾಚೀನ ಭಾರತದ ಖಗೋಳವಿಜ್ಞಾನವನ್ನು ಗುರುತಿಸಲು ಹೊರಟಾಗ ದೊರಕುವ ಆಕರ ಗ್ರಂಥಗಳು ಬೆರಳೆಣಿಕೆಯಷ್ಟು ಮಾತ್ರ. ಮೂಲಗ್ರಂಥಗಳು ಸಂಸ್ಕೃತದಲ್ಲಿ ಇರುವುದರಿಂದ ಅವನ್ನು ಅರ್ಥಮಾಡಿಕೊಳ್ಳಲು ಸಂಸ್ಕೃತದ ಜ್ಞಾನವೂ ಅತಿ ಅಗತ್ಯ. ಸಾಮಾನ್ಯವಾಗಿ ಗಣಿತ ಮತ್ತು ಸಂಸ್ಕೃತ ಇವೆರಡೂ ಕಬ್ಬಿಣದ ಕಡಲೆಗಳೇ ಎನ್ನಿಸಿಕೊಂಡಿರುವುದರಿಂದ ಈ ಆಕರಗ್ರಂಥಗಳು ಇನ್ನೂ ಪುಸ್ತಕರೂಪ ತಳೆದಿಲ್ಲ.

ಸುಮಾರು ನೂರು ವರ್ಷಗಳ ಹಿಂದೆ ಈ ಗ್ರಂಥಗಳನ್ನು ಪುನಃ ಬೆಳಕಿಗೆ ತರುವ ಸನ್ನಾಹ ಆರಂಭವಾಯಿತು. ಜ್ಯೋತಿಷ ಎಂದು ಕರೆಯಿಸಿಕೊಂಡ ಜ್ಞಾನದ ಮೂಲ ಇದು. ಬಾಲ ಗಂಗಾಧರ ತಿಲಕ್ ಮತ್ತು ಅವರ ಸಮಕಾಲೀನರಾದ ಶಂಕರ ಬಾಲಕೃಷ್ಣ ದೀಕ್ಷಿತ್ ಈ ಸಾಹಸಕ್ಕೆ ಕೈಹಾಕಿದರು. ಇಂದಿಗೂ ಅವರ ಕೃತಿಗಳು ಆಕರಗ್ರಂಥಗಳಾಗಿವೆ.

ಈಚಿನ ದಿನಗಳಲ್ಲಿ ಜ್ಯೋತಿಷ ಎಂಬ ಪದ ಫಲಜ್ಯೋತಿಷಕ್ಕೆ ಪರ್ಯಾಯವಾಗಿಬಿಟ್ಟಿದೆ. ಆದ್ದರಿಂದ ಖಗೋಳವಿಜ್ಞಾನ ಈ ಪೊರೆಯನ್ನು ಕಳಚಿಕೊಂಡು ಹೊರಬರಲೇಬೇಕಾದದ್ದು ಅನಿವಾರ್ಯವಾಗಿದೆ. 'ಮುಹೂರ್ತ' ಎನ್ನುವ ಪದ ಕೂಡ ಕೇವಲ ವಿವಾಹ - ಉಪನಯನಗಳಿಗೆ ಸೀಮಿತವಾಗದೆ, ಚುನಾವಣೆಗೆ ಅರ್ಜಿ ಸಲ್ಲಿಸುವುದರಿಂದ ಹಿಡಿದು ಪ್ರಮಾಣವಚನದವರೆಗೂ ಯಥೇಚ್ಛವಾಗಿ ಬಳಕೆಯಾಗುತ್ತಿದೆ (ಪದತ್ಯಾಗಕ್ಕೂ ಇರಬಹುದು).




ಹಾಗಾಗಿ ಮುಹೂರ್ತ ಎಂಬ ಪದದ ಮೂಲ ಏನು ಎಂದು ಹುಡುಕಾಡುವಂತಾಗುತ್ತದೆ.

ಮುಹೂರ್ತ, ತಿಥಿ, ಲಗ್ನ – ಈ ಪದಗಳ ವೈಜ್ಞಾನಿಕ ವಿವರಣೆ ಬಹಳ ಹಿಂದಿನದು. ಈಗ ದೊರಕಿರುವ ಆಕರಗಳಲ್ಲಿ ಅತ್ಯಂತ ಹಳೆಯದು ವೇದಾಂಗ ಜ್ಯೋತಿಷ ಎಂಬ ಗ್ರಂಥ. ಜ್ಯೋತಿಷ ಎಂಬ ಪದ ಇರುವ ಕಾರಣ ಇದು ಫಲಜ್ಯೋತಿಷಕ್ಕೆ ಸಂಬಂಧಿಸಿದ್ದು ಎಂಬ ತಪ್ಪು ತಿಳುವಳಿಕೆ ಉಂಟಾಗುತ್ತದೆ. ವಾಸ್ತವದಲ್ಲಿ ಇದು ಶುದ್ಧ ವೈಜ್ಞಾನಿಕ ಆಕರಗ್ರಂಥ.

ಮೂಲಗ್ರಂಥದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಋಗ್ ವೇದಾಂಗ ಜ್ಯೋತಿಷದಲ್ಲಿ ೩೬ ಶ್ಲೋಕಗಳಿವೆ ಮತ್ತು ಎರಡನೆಯ ಭಾಗವಾದ ಯಜುರ್ ವೇದಾಂಗ ಜ್ಯೋತಿಷದಲ್ಲಿ ೪೩ ಶ್ಲೋಕಗಳಿವೆ. ಈ ಪುಟ್ಟ ಗ್ರಂಥದಲ್ಲಿ ಖಗೋಳ ಲೆಕ್ಕಗಳ ತಾತ್ಪರ್ಯವನ್ನೆಲ್ಲಾ ಅಡಗಿಸಿ ಇಟ್ಟಿರುವುದು ಅದ್ಭುತ ಎನ್ನಿಸುತ್ತದೆ.

ಇದುವರೆಗೆ ಪ್ರಕಟವಾಗಿದ್ದ ಆಕರಗ್ರಂಥಗಳಲ್ಲಿ ಮೂಲಗ್ರಂಥದ ಕೆಲವು ಶ್ಲೋಕಗಳು ಮತ್ತು ಅವುಗಳ ವ್ಯಾಖ್ಯಾನ ಮಾತ್ರ ದೊರಕುತ್ತಿತ್ತು. ಈಗ ಇಡೀ ಗ್ರಂಥವೇ ದೊರಕುವಂತಾಗಿದೆ (ವೇದಾಂಗ ಜ್ಯೋತಿಷ – ಡಾ|| ಎಸ್. ಬಾಲಚಂದ್ರರಾವ್, ಭಾರತೀಯ ವಿದ್ಯಾಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ). ಸಂಸ್ಕೃತ ಮತ್ತು ಗಣಿತ ಎರಡನ್ನೂ ಬಲ್ಲವರು ಇದನ್ನು ರಚಿಸಿರುವುದರಿಂದ ಮತ್ತು ಮೂಲ ಶ್ಲೋಕಗಳೂ ಇರುವುದರಿಂದ ತಪ್ಪು-ಒಪ್ಪುಗಳ ವಿವೇಚನೆ ಸಾಧ್ಯವಿದೆ.

ಕಾಲಗಣನೆಯ ಕೋಷ್ಟಕ ಇಲ್ಲಿದೆ. ಮುಹೂರ್ತ ಎಂದರೇನು, ಅದನ್ನು ಅಳತೆಮಾಡುವುದು ಹೇಗೆ ಎಂಬ ವಿವರಣೆಯೂ ಇದೆ. ೫ ಗುರ್ವಕ್ಷರಗಳಿಗೆ ಒಂದು ಕಾಷ್ಠಾ ಎಂಬ ಅಳತೆ. ೧೨೪ ಕಾಷ್ಠೆಗಳು ಒಂದು ಕಲೆ; ೧೦ ಕಲೆಗಳು ಮತ್ತು ಇಪ್ಪತ್ತರಲ್ಲಿ ಒಂದು ಭಾಗದ ಕಲೆ ಸೇರಿ ಒಂದು ನಾಡಿಕಾ. ಅಂದರೆ ನಾಡಿ ಎಂಬುದನ್ನು ಅಳೆಯಲು ಸುಲಭ ಉಪಾಯ ಇಲ್ಲಿದೆ. ನಾಡಿಗೆ ೧೨,೨೬೧ ಗುರ್ವಕ್ಷರಗಳು ಅಗತ್ಯ. ಇಷ್ಟು ಅಕ್ಷರಗಳಿರುವ ಶ್ಲೋಕವನ್ನು ರಚಿಸಿ ಪಠಿಸಿದರೆ ಕಾಲವನ್ನು ಅಳತೆ ಮಾಡಿದಂತೆಯೇ ಆಯಿತು. ಇಂತಹ ಎರಡು ನಾಡಿಗಳಿಗೆ ಒಂದು ಮುಹೂರ್ತ. ಆದ್ದರಿಂದ ಶ್ಲೋಕವನ್ನು ಎರಡು ಬಾರಿ ಪಠಿಸಿದರೆ ಮುಹೂರ್ತದ ಅವಧಿ ಮುಗಿಯಿತೆಂದು ಅರ್ಥ.

ಈ ಉಪಾಯವನ್ನು ಬಳಸಿ ಕಾಲಗಣನೆ ಮಾಡುತ್ತಿದ್ದರು ಎಂದು ಜಪಾನಿನ ಒಹಾಷಿ ಎಂಬ ವಿದ್ವಾಂಸರು ಕಂಡುಹಿಡಿದಿದ್ದಾರೆ. ವಾರಾಣಸಿಯಲ್ಲಿ ಹಳೆಯ ಗ್ರಂಥಗಳನ್ನು ತಿರುವಿಹಾಕಿ ಅವರು ಈ ಸತ್ಯವನ್ನು ಕಂಡುಕೊಂಡರು. ವೇದಾಂಗ ಜ್ಯೋತಿಷದ ಕಾಲ ಸುಮಾರು ಕ್ರಿ.ಪೂ. ೧೦-೧೨ನೆಯ ಶತಮಾನ; ಆಗ್ಗೆ ಜೈನಧರ್ಮವೂ ಇಲ್ಲಿ ಅಸ್ತಿತ್ವದಲ್ಲಿ ಇತ್ತು ಎಂದು ಇತಿಹಾಸ ತಿಳಿಸುತ್ತದೆ. ಬೌದ್ಧ ಮತಸ್ಥರೂ ಇದೇ ತತ್ವಗಳನ್ನು ಅನುಸರಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಪರ್ವ, ದಿನದ ಭಾಗಗಳು, ಅಯನಗಳು ಇವೆಲ್ಲವನ್ನೂ ಗಣನೆ ಮಾಡುವ ವಿಧಾನ, ಅಧಿಕ ಮಾಸಗಳ ಅನಿವಾರ್ಯತೆ, ನಕ್ಷತ್ರಗಳ ವಿವರಗಳು ಎಲ್ಲವೂ ಈ ಪುಟ್ಟ ಗ್ರಂಥದಲ್ಲಿ ಅಡಕವಾಗಿವೆ. ಪಾಶ್ಚಾತ್ಯಗಣಿತವನ್ನು ಕಲಿಯುವ ನಮ್ಮ ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ವಿವರಗಳನ್ನು ಕೊಟ್ಟಿರುವುದು ಇನ್ನೊಂದು ವಿಶೇಷ.

ಇಂದಿನ ವಿದ್ಯಾರ್ಥಿಗಳು ಈ ಗ್ರಂಥವನ್ನು ಮೊದಲು ಅರ್ಥ ಮಾಡಿಕೊಂಡು ಆಮೇಲೆ ಜ್ಯೋತಿಷ್ಯದ ಇತರ ವಿವರಗಳನ್ನು ತಿಳಿದುಕೊಂಡಲ್ಲಿ ಸುಲಭವಾಗಬಹುದು. ವಿದ್ಯಾರ್ಥಿಗಳು ಎಂದರೆ ಯುವ ಜನರೇ ಆಗಬೇಕೆಂದಿಲ್ಲ. ಅನೇಕರು ೪೦ ದಾಟಿದ ಮೇಲೆ ಅತಿ ಉತ್ಸಾಹದಿಂದ ಇದರತ್ತ ಗಮನ ಹರಿಸುತ್ತಾರೆ. ಬುದ್ಧಿಮತ್ತೆಯನ್ನು ಚುರುಕಾಗಿ ಉಳಿಸಿಕೊಳ್ಳಲು ಇದು ದಿವ್ಯೌಷಧ. ಅಂತಹ 'ಹವ್ಯಾಸಿ ಜ್ಯೋತಿಷಿ'ಗಳಿಗೆ ಈ ಪುಟ್ಟಗ್ರಂಥ ಒಳ್ಳೆಯ ಸವಾಲಾಗಬಲ್ಲುದು.

ಆಕಾಶದಲ್ಲಿ ಕಾಣುವ ಚುಕ್ಕೆಗಳಿಗೂ, ಇಲ್ಲಿಯ ಲೆಕ್ಕಗಳಿಗೂ ನೇರ ಸಂಬಂಧ ಇದೆ ಎಂಬ ಅಂಶ ಮರೆತೇಹೋಗುತ್ತಿರುವ ಇಂದಿನ ಸಂದರ್ಭದಲ್ಲಿ ಈ ಪುಸ್ತಕ ಹೊರಬಂದಿರುವುದು ಆಶಾಕಿರಣವನ್ನು ಮೂಡಿಸಿದೆ. 'ಜ್ಯೋತಿಷ' ಎಂಬುದರ ನಿಜವಾದ ಅರ್ಥವನ್ನು ಎಲ್ಲರೂ ತಿಳಿಯುವಂತಾಗಿ, ತನ್ಮೂಲಕ ಫಲಜ್ಯೋತಿಷದ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲು ಸಾಧ್ಯವಾದರೆ ಲೇಖಕರ ಈ ಶ್ರಮ ಸಾರ್ಥಕವಾಗುತ್ತದೆ. 'ಗ್ರಹಲಾಘವ' ಎಂಬ ಇನ್ನೊಂದು ಉದ್ಗ್ರಂಥವನ್ನು ಹೀಗೆ ಹೊರತಂದಿರುವ ಡಾ|| ಬಾಲಚಂದ್ರರಾಯರು ಇತಿಹಾಸಸಾಗರದಲ್ಲಿ ಮುಳುಗಿರುವ ಇನ್ನೂ ಅನೇಕ ಅನರ್ಘ್ಯ ರತ್ನಗಳನ್ನು ಹೆಕ್ಕಿಕೊಡುತ್ತಾರೆ ಎಂದು ಆಶಿಸೋಣ.

ಡಾ|| ಬಿ. ಎಸ್. ಶೈಲಜಾ
... - ೫೬೦ ೦೦೧




# ಪ್ರತ್ಯೇಕ ಸುಖ

ರೇಡಿಯೊ, ದೂರದರ್ಶನಗಳನ್ನು ಸಮೂಹ ಮಾಧ್ಯಮ ಎನ್ನುತ್ತೇವಷ್ಟೆ. ಗಾಂಧೀಜಿಯವರು ಈ ಸಮೂಹ ಮಾಧ್ಯಮ ಪ್ರಸಾರಗಳನ್ನು ಸಾಮೂಹಿಕವಾಗಿ ಜನರು ಕೇಳಿ, ನೋಡಿ ಆನಂದಿಸಬೇಕೆಂದು ಹೇಳುತ್ತಿದ್ದರು. ಟ್ರಾನ್ಸಿಸ್ಟರ್ ಆವಿಷ್ಕಾರಗೊಂಡ ಮೇಲೆ ಪ್ರತಿಯೊಬ್ಬರೂ ಪ್ರತ್ಯೇಕವಾಗಿಯೇ ಕೇಳುವುದನ್ನು ರೂಢಿಸಿಕೊಂಡರು. ಸುಲಭ ಬೆಲೆಗೆ ಈ ಟ್ರಾನ್ಸಿಸ್ಟರ್‌ಗಳು ಲಭ್ಯವಿರುವುದರ ಜೊತೆಗೆ ಗಾತ್ರದಲ್ಲಿ ಕಿರಿದಾಗಿಯೂ ಒಯ್ಯಲು ಯೋಗ್ಯವಾಗಿಯೂ ಇರುವುದು ಕಾರಣವಿರಬೇಕು ಎಂದು ಅರ್ಥೈಸಲಾಗುತ್ತಿತ್ತು.

ಈಚಿನ ದಿನಗಳಲ್ಲಿ ಅನೇಕ ಸ್ಥಿತಿವಂತರ ಮನೆಗಳಲ್ಲಿ ಪ್ರತಿಯೊಂದು ಕೊಠಡಿಗೂ ದೂರದರ್ಶನ ಸೆಟ್ ಇರಿಸಿಕೊಳ್ಳುವುದು ಬಹುಮಟ್ಟಿಗೆ ಮಾಮೂಲಾಗಿಬಿಟ್ಟಿದೆ. ಅನೇಕ ಚಾನೆಲ್‌ಗಳು ಇರುವುದರಿಂದ ಆಯ್ಕೆಯ ಅವಕಾಶ ಹಾಗೂ ಟಿ.ವಿ. ಬೆಲೆಯಲ್ಲಿನ ಇಳಿಮುಖ ಇದಕ್ಕೆ ಕಾರಣವೆಂದು ಈ ಮೊದಲಿನ ವಿವರಣೆಯನ್ನೇ ವಿಸ್ತರಿಸಬಹುದು.

ಆದರೆ, ಈ ಪ್ರವೃತ್ತಿಯನ್ನು ಅರ್ಥೈಸುವ ಇನ್ನೊಂದು ಬಗೆಯೂ ಇದೆ. ಈಚೆಗೆ ಜನರ ಮನೋಭಾವದಲ್ಲಿ ಗಮನಾರ್ಹ ಬದಲಾವಣೆಯೊಂದು ಕಂಡುಬರುತ್ತಿದೆ. ಜನರ ನಡುವೆ ಉಳಿಯುವುದು ಬಡವರ, ಗತಿ ಇಲ್ಲದವರ, ಅನಿವಾರ್ಯ. ನಾವು ಪ್ರತ್ಯೇಕವಿರುವುದು ನಮಗೆ ಸ್ವಾತಂತ್ರ್ಯವನ್ನು (ಅದು ಸ್ವಾತಂತ್ರ್ಯವೋ, ಸ್ವೇಚ್ಛಾಚಾರವೋ – ಚರ್ಚಾರ್ಹ) ಹಾಗೂ ದೊಡ್ಡಸ್ತಿಕೆಯನ್ನು ತಂದು ಕೊಡುವುದು – ಎಂಬ ಭಾವನೆ ಎಲ್ಲರಲ್ಲೂ ಮೂಡುತ್ತಿದೆ.

ಸಾರ್ವಜನಿಕ ವಾಹನಗಳಲ್ಲಿ ಸಾಗುವುದಕ್ಕಿಂತ ಸ್ವಂತ ವಾಹನದಲ್ಲಿ ಸಾಗುವವರ ಘನತೆ ಹೆಚ್ಚು. ನಾಲ್ಕು ಚಕ್ರ ವಾಹನದಲ್ಲಾದರೋ ಬಸ್ಸಿಗಿಂತ ವಿಸ್ತಾರವಾದ ಜಾಗ ಇರುವುದುಂಟು. ಆದರೆ ಅಲ್ಲೂ ಇಕ್ಕಟ್ಟಾಗುವಷ್ಟು ಜನರಾದರೂ ಕುಳಿತು ಸಾಗುವುದು ಬಸ್ಸಿನ ಪ್ರಯಾಣಕ್ಕಿಂತ ಅಪೇಕ್ಷಣೀಯ ಎಂಬ ಭಾವನೆ ಅನೇಕರಲ್ಲಿದೆ.

ದ್ವಿಚಕ್ರದ ಸವಾರಿಯೂ ಅನೇಕ ವೇಳೆ ವಾಸ್ತವ ದೃಷ್ಟಿಯಿಂದ ನೋಡಿದಾಗ ಅನೇಕ ರೀತಿಯ ತೊಡಕಿನದೆ. ಮಳೆ ಬಿಸಿಲಿಗೆ ಆಸರೆ ಇಲ್ಲದಿರುವುದು, ಮಾಲಿನ್ಯವುಂಟು ಮಾಡುವ ಧೂಳು - ಹೊಗೆಗಳಿಗೆ ನೇರವಾಗಿ ಒಡ್ಡಿಕೊಳ್ಳುವುದು, ವಾಹನ ಚಾಲನೆ ಕೈಗೊಳ್ಳುವಾಗ ನಿರಂತರ ಎಚ್ಚರವಹಿಸುವುದು ಅನಿವಾರ್ಯವಾಗಿ ಮಾನಸಿಕ ಘಾಸಿ ಉಂಟಾಗುವುದು – ಇವೇ ಕೆಲವು ಕಾರಣಗಳು. ಸಮಯದ ಉಳಿತಾಯ ಹಾಗೂ ಬೇಕೆಂದೆಡೆ ನಿಲ್ಲಿಸಿ ಸಾಗಬಹುದೆಂಬ ಅನುಕೂಲಗಳನ್ನು ಜನರು ಹೇಳುವರು ; ಅದು ನಿಜವೂ ಹೌದು. ಆದರೆ ಈ ಪ್ರವೃತ್ತಿಯಿಂದಾಗುವ ಪರಿಣಾಮ ?!

''ಈಚಿನ ದಿನಗಳಲ್ಲಿ ಸಮಾಜವು ಪರಮಾಣೀಕರಣಗೊಳ್ಳುತ್ತಿದೆ'' ಎಂದು ಸಮಾಜ ಶಾಸ್ತ್ರಜ್ಞರು ಹೇಳುವುದುಂಟು. ವಾಹನದ ಒಡೆತನದ ಅಹಮಿಕೆಯ ಜೊತೆಗೆ ಪ್ರತ್ಯೇಕವಾಗಿ ಬಾಳುವ ಅವಕಾಶದ ಹಂಬಲವೂ ಈ ಪ್ರವೃತ್ತಿಯಲ್ಲಿ (ಪ್ರತ್ಯೇಕ ವೀಕ್ಷಣೆ/ಪ್ರತ್ಯೇಕ ವಾಹನಸಂಚಾರ, ಕಡಿಮೆ ವಿದ್ಯಾರ್ಥಿಗಳಿರುವ ಶಾಲೆಗೆ ಮಕ್ಕಳನ್ನು ಕಳುಹಿಸುವ ಹಂಬಲ, ಇತ್ಯಾದಿಗಳಲ್ಲಿ) ಅಂತರ್ಗತವಾಗಿದೆ.

ಜಗದೀಶ್‌ಚಂದ್ರ ಬೋಸ್ ಅವರ ತಂದೆ ಕಲೆಕ್ಟರು (ಈಗಿನ ಜಿಲ್ಲಾಧಿಕಾರಿಗೆ ಸಮಾಂತರ ಹುದ್ದೆ). ಅವರು ತಮ್ಮ ಮಗನಾದ ಜಗದೀಶನನ್ನು ಸರ್ಕಾರಿ ಶಾಲೆಗೆ ಸೇರಿಸಿದರು. ಬಡ ಹುಡುಗರ ಕಷ್ಟಸುಖವನ್ನು ತಮ್ಮ ಮಗ ಅರಿಯಲಿ ಎಂಬ ಇರಾದೆ ಅವರದು. ಆದರೆ ಇಂದಿನ ದಿನಗಳಲ್ಲಿ ಈ ಪ್ರವೃತ್ತಿಗೆ ವಿರುದ್ಧ ಪ್ರವೃತ್ತಿ ಪ್ರಚಲಿತವಿರುವುದನ್ನು ಗಮನಿಸಿ. ಐ.ಎ.ಎಸ್. ಹುದ್ದೆಗೆ ಖಾಸಗಿ ಶಾಲೆಯವರಲ್ಲದೆ ಸರ್ಕಾರಿ ಶಾಲೆಯಲ್ಲಿ ಓದಿದ ವಿದ್ಯಾರ್ಥಿಗಳೂ ಬರತೊಡಗಿದ್ದಾರೆ ಎಂದು ಹಲುಬುವ ಐ.ಎ.ಎಸ್. ಅಧಿಕಾರಿಗಳ ಬಗ್ಗೆ ನಮ್ಮ ವಿದ್ಯಾರ್ಥಿಯೊಬ್ಬ ಹೇಳಿದುದುಂಟು. ಕನಸುಗಾರಿಕೆಯಲ್ಲಿ ಅದೆಷ್ಟು ಅಂತರ.

ಈ ಪ್ರತ್ಯೇಕ ಸುಖ, ಪ್ರತ್ಯೇಕ ಸಂಪದ (ಖಾಸಗಿ ಸಂಪತ್ತು) ಪ್ರತ್ಯೇಕ ಸೌಕರ್ಯಗಳಿಂದಾಗುವ ತೊಂದರೆಯ ಬಗ್ಗೆ ಮಂಕುತಿಮ್ಮನ ಕಗ್ಗದ ಈ ಪದ್ಯದಲ್ಲಿ ಪ್ರಸ್ತಾಪವಿದೆ.

*ಪ್ರತ್ಯೇಕ ಸುಖದ ನೀಂ ಪ್ರತ್ಯೇಕ ಸಂಪದವ-*
*ನತ್ಯಾಶೆಯಿಂದರಸಿ ಮಿಕ್ಕೆಲ್ಲ ಜಗವ-*
*ನೊತ್ತಟ್ಟಿಗಿಡುವೆನೆನೆ ನಷ್ಟವಾರಿಗೋ ಮರುಳೆ*
*ಬತ್ತುವುದು ನಿನ್ನಾತ್ಮ – ಮಂಕುತಿಮ್ಮ ॥೬೧೯॥*

ಪ್ರತ್ಯೇಕ ಸುಖ ಬಯಸುವವರು ತಮ್ಮ ಭೋಗಜೀವನವನ್ನು ಇತರರಿಂದ ಮರೆಮಾಚಬೇಕಾಗುತ್ತದೆ. ಹಾಗೆ ಒಂಟಿಯಾಗಿ ಬಾಳುವಾಗ ಜನರ ಸಂಪರ್ಕ, ನೋವು ನಲಿವುಗಳನ್ನು ತಿಳಿಯುವ ಅವಕಾಶದಿಂದ ವಂಚಿತರಾಗಿ ಅವರ ಸಮಾಜಜ್ಞಾನ ಕಿರಿದಾಗುವುದನ್ನು 'ಆತ್ಮ ಬತ್ತು'ವುದಾಗಿ ಡಿವಿಜಿ ವಿವರಿಸಿರುವುದನ್ನು ಗಮನಿಸಿ.

ದಾಶರಥಿ ದೀಕ್ಷಿತ್ ಅವರು 'ಗಾಂಪರ ಗುಂಪು' ಎಂಬ ಹಾಸ್ಯಕೃತಿಯನ್ನು ರಚಿಸಿದ್ದಾರಷ್ಟೆ. ಪ್ರಾಸಂಗಿಕವಾಗಿ ಅವರು ಪೌರ್ವಾತ್ಯ ಸಮುದಾಯ ಜೀವನವನ್ನೂ ಪಾಶ್ಚಿಮಾತ್ಯ ಪ್ರತ್ಯೇಕತಾಪ್ರಜ್ಞೆಯ ಜೀವನವನ್ನೂ ವಿವರಿಸುವ ಪ್ರಸಂಗ ಅನೇಕ ಬಾರಿ ಬಂದಿದೆ. ಅಂತಹ ಒಂದು ಪ್ರಸಂಗ ನೋಡೋಣ.

ಗಾಂಪ ಗುರುಗಳ ಶಿಷ್ಯರು ವಿಮಾನ ಪ್ರಯಾಣವನ್ನೂ ಅರಸೀಕೆರೆ ರೈಲಿನ ಪ್ರಯಾಣವನ್ನೂ ಹೋಲಿಸಿ ಹೀಗೆ ಹೇಳುತ್ತಾರೆ : ''ಇದೇನು ಈ ವಿಮಾನ ಪ್ರಯಾಣ; ಇಲ್ಲಿ ಯಾರೂ ಒಬ್ಬರನ್ನೊಬ್ಬರು ಮಾತನಾಡದೆ ಮುನಿಸಿಕೊಂಡ ಜನರ ಹಾಗೆ ಕುಳಿತಿರುತ್ತಾರೆ. ಅರಸೀಕೆರೆ ರೈಲಿನಲ್ಲಿ ಹಾಗಿಲ್ಲ. ಹೆಣ್ಣುಮಗಳೊಬ್ಬಳು ತನ್ನ ಗಂಡ ಹೊಡೆಯುವುದನ್ನು ಎಲ್ಲರ ಬಳಿ ಹೇಳಿಕೊಳ್ಳುತ್ತಾಳೆ. ಆಕೆಯ ಮಗುವನ್ನು ಇನ್ಯಾರೋ ಎತ್ತಿಕೊಂಡು ಮುದ್ದಾಡುತ್ತಾರೆ. ಅದು ಮೂತ್ರ ವಿಸರ್ಜಿಸಿದರೂ ಚಿಂತಿಸರು. ಮತ್ತಿಬ್ಬರು ರಾಜಕೀಯ ಚರ್ಚಿಸುತ್ತಿರುತ್ತಾರೆ. ಯಾವುದೂ ಖಾಸಗಿ ಎಂಬುದೇ ಅಲ್ಲಿಲ್ಲ...''

ನಿಮಗೆ ಬೇಕೋ ಬೇಡವೋ, ಸಾಮಾಜಿಕರ ನೋವು ನಲಿವಿನ ವಿರಾಟ್‌ದರ್ಶನ ರೈಲಿನಲ್ಲಿ ಆಗುತ್ತದೆ. ಕಾರಿನಲ್ಲಿ ಕುಳಿತು ಸಾಗುವವರ 'ಆತ್ಮ' ಈ ಮಾಹಿತಿಯಿಂದ ವಂಚಿತವಾಗಿ ಬತ್ತುತ್ತದೆ.

ಲಿಯೋ ಟಾಲ್‌ಸ್ಟಾಯ್ ಹೀಗೆ ಬರೆಯುತ್ತಾರೆ : ''ಆದಿಮಾನವ ಸಹಚರರನ್ನು ಬಡಿದು ಹಿಂಸಿಸಿದಾಗ ಸಹಚರನಿಗಾದ ನೋವಿನ ನೇರ ವೀಕ್ಷಣೆಯಿಂದ ಅವನ ಹೃದಯ ಪರಿವರ್ತನೆ ಆದೀತು. ಆದರೆ ಶೋಷಕನು ಆಧುನಿಕ ಸಮಾಜದಲ್ಲಿ ಶೋಷಿತನಿಂದ ದೂರ ಉಳಿದಿರುವ ಈ ಸಂದರ್ಭದಲ್ಲಿ ತನ್ನ ಭೋಗಜೀವನಕ್ಕೆ ಬೇಕಾದ ಭೋಗ ಸಾಮಗ್ರಿಯನ್ನು ಉತ್ಪಾದಿಸುವಾತನು ಈ ಭೋಗ ಸಾಮಗ್ರಿಗಳಿಂದ ವಂಚಿತನಾಗಿರುವುದಷ್ಟೇ ಅಲ್ಲ, ಅತ್ಯಂತ ಹೀನಾಯವಾಗಿ ಬದುಕುತ್ತಿದ್ದಾನೆ – ಎಂಬ ಅರಿವು ಅವನಿಗೆ ಬರುವ ಅವಕಾಶವೇ ಇಲ್ಲ.''

ದಂತಗೋಪುರದಲ್ಲಿ ಬದುಕಿ ಅಂತಸ್ತು ಹೆಚ್ಚಿಸಿಕೊಂಡವರಿಗೆ ಸ್ವಂತಕ್ಕೆ ಏನೂ ಇಲ್ಲದೆ ಹೊಟ್ಟೆ ಹೊರೆಯುವ ಸಲುವಾಗಿ ಇತರರಿಗೆ ಭೋಗಸಾಮಗ್ರಿ ತಯಾರಿಸಿ ಕೊಡುತ್ತಿರುವವರ ರೊಚ್ಚು, ಕಿಚ್ಚು ಅರಿವಿಗೆ ಬರಲು ಸಾಧ್ಯವೆ !

ನಮ್ಮ ಕರುಣೆ, ಅರಿವು ಹಾಗೂ ಒಲವುಗಳು ಪುರಾಣದ ವ್ಯಕ್ತಿಗಳಿಗೆ ಹಾಗೂ ಧಾರಾವಾಹಿ/ಸಿನಿಮಾ/ನಾಟಕದ ಪಾತ್ರಗಳಿಗೆ ಹಂಚಿಹೋಗಿದೆ. ಸಮಕಾಲೀನ ಸಮಾಜದ ಸದಸ್ಯರ ನೋವು ನಲಿವುಗಳ ಬಗೆಗೆ ಇಣುಕಿನೋಡುವ ಕುತೂಹಲವೂ ಇಲ್ಲವಾಗುತ್ತಿರುವುದು ಗಮನಿಸಬೇಕಾದ ಸಂಗತಿ. ಸಾಮಾಜಿಕರು ಹಾಗಿರಲಿ, ಕುಟುಂಬದ ಆತ್ಮೀಯ ಸದಸ್ಯರೊಡನೆಯೂ ಈಗಿನ ಮಕ್ಕಳು ಮಾತನಾಡಿ ಅವರ ಅನುಭವವನ್ನು ಅರ್ಥಮಾಡಿಕೊಳ್ಳುವ ಕುತೂಹಲ ತೋರುತ್ತಿಲ್ಲ. ಅವರು ತಮ್ಮ ಸಮವಯಸ್ಕ ಗೆಳೆಯರೊಡನೆ ಮಾತ್ರ ಬೆರೆಯುವ ಪ್ರವೃತ್ತಿ ತೋರುತ್ತಾರೆ. ಇದೊಂದು ಗಂಭೀರ ಸಾಮಾಜಿಕ ಪಿಡುಗು.

ಆದರೆ ಸಾಮಾಜಿಕರ ಆಗುಹೋಗುಗಳನ್ನೂ ಅವರನ್ನು ಕಾಡುವ ನೋವು ನಿರಾಶೆಗಳನ್ನೂ ತಿಳಿಯುವುದು ಸಾಮಾಜೀಕರಣ ಎಂಬ ತಿಳಿವು ದಿನೇ ದಿನೇ ಕಡಿಮೆಯಾಗುತ್ತಿದೆಯೇ ?

ಚಪ್ಪಲಿ ಹೊಲಿಯುವವರ ನೋವು ನಲಿವಿನ ಬಗೆಗೆ ಪ್ರಬಂಧ ಬರೆಯಿರಿ ಎಂದು ಯಾವ ಶಾಲೆಯಲ್ಲೂ ಪ್ರಶ್ನೆ ಹಾಕುವುದಿಲ್ಲ. ಮನೆಯವರೆಲ್ಲಾ ತಮ್ಮ ಮಕ್ಕಳಿಗೆ ಸುಖಬಾಳುವೆಯ ಕನಸು ಕಲಿಸುವರೇ ವಿನಾ ಇತರರ ಬಗ್ಗೆ ತಿಳಿಯುವಂತೆ ಪ್ರೇರೇಪಿಸುವುದಿಲ್ಲ. ಹೀಗಾಗಿ ಬತ್ತಿದ 'ಆತ್ಮ'ದ ಸದಸ್ಯರಿರುವ ಸಮಾಜ ಕೇವಲ ಆರ್ಥಿಕ ಪ್ರಗತಿಯಿಂದ ಸದೃಢವಾಗಬಲ್ಲದೆ ?

**ಪ್ರೊ॥ ಎಮ್. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೬೪

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /February 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.